ಶ್ರೀ ಪರಾಶರಭಟ್ಟರು ಅನುಗ್ರಹಿಸಿದ

# ಶ್ರೀರಂಗರಾಜಸ್ತವ

ಅನುವಾದ ಮತ್ತು ವಿವರಣೆ :

ವೇದಾಂತ ವಿದ್ವಾನ್

ಡಾ|| ಎನ್. ಎಸ್. ಅನಂತರಂಗಾಚಾರ್ಯ



# ಶ್ರೀ ಪರಾಶರಭಟ್ಟರು ಅನುಗ್ರಹಿಸಿದ

# ಶ್ರೀ ರಂಗರಾಜಸ್ತವ



ಅನುವಾದ ಮತ್ತು ವಿವರಣೆ :
ವೇದಾಂತ ವಿದ್ವಾನ್
ಡಾ|| ಎನ್. ಎಸ್. ಅನಂತರಂಗಾಚಾರ್ಯ
ಬೆಂಗಳೂರು

Sri Rangarajastava of Sri Parasara Bhattar, *Translation and explanation by :* Vedanta Vidwan Dr. N. S. Anantha Rangacharya, 'Sri Niketana', 780, V Main Road, Vijayanagaram, Bangalore-560 040

*First Edition 1981 - Published with the financial assistance of TIRUMALA TIRUPATI DEVASTHANAMS under their scheme 'Aid to Publish religious Books'.*

ಬೆಲೆ : ಹತ್ತು ರೂಪಾಯಿಗಳು

ಮುದ್ರಕರು :
ಚಿತ್ರಾ ಪ್ರಿಂಟರ್ಸ್
೧೯೨, ಲಿಂಕ್ ರಸ್ತೆ, ಮಲ್ಲೇಶ್ವರಂ
ಬೆಂಗಳೂರು-೫೬೦ ೦೦೩.
ದೂರವಾಣಿ : 34367

# ಪೀಠಿಕೆ

## ಶ್ರೀ ಪರಾಶರ ಭಟ್ಟರು

ಶ್ರೀ ವೈಷ್ಣವ ಆಚಾರ್ಯ ಪರಂಪರೆಯಲ್ಲಿ ಬಹಳ ಮುಖ್ಯರಾದವರಲ್ಲಿ ಶ್ರೀ ಪರಾಶರಭಟ್ಟರೂ ಒಬ್ಬರು. ಶ್ರೀ ಭಾಷ್ಯಕಾರರ ಪರಮಾನುಗ್ರಹಕ್ಕೆ ಪಾತ್ರರಾಗಿದ್ದವರು ಇವರು. ಭಗವದ್ಯಾಮುನರ ಅಭೀಷ್ಟಗಳಲ್ಲಿ ಒಂದಾಗಿದ್ದ ಶ್ರೀ ವಿಷ್ಣು ಸಹಸ್ರನಾಮ ಭಾಷ್ಯವನ್ನು ಇವರಿಂದ ಭಗವದ್ರಾಮಾನುಜರು ಬರೆಯಿಸಿದರು.

ಶ್ರೀ ರಾಮಾನುಜರ ಪರಮಾಪ್ತಶಿಷ್ಯರಾದ ಶ್ರೀ ಕೂರತ್ತಾಳ್ವಾನ್ ಅವರ ಸುಪುತ್ರರು ಇವರು. ಶ್ರೀ ಕೂರತ್ತಾಳ್ವಾನ್ ಅವರು ಪರಮ ವಿರಕ್ತರಾಗಿದ್ದವರು. ಉಂಛ ವೃತ್ತಿಯಿಂದ ಜೀವನ ನಡೆಸುತ್ತಿದ್ದರು ಅವರು. ಒಂದು ದಿನ ಆಳ್ವಾನ್ ಅವರು ಜೋರಾದ ಮಳೆಯ ಕಾರಣ ಉಂಛ ವೃತ್ತಿಗೆ ಹೋಗಲಾಗಲಿಲ್ಲ. ಅಂದು ಕೇವಲ ಜಲಪಾನದಿಂದ ಕಾಲ ತಳ್ಳಿದರು. ಆಳ್ವಾನ್ ಅವರ ಪತ್ನಿ ಆಂಡಾಳ್ ಇದರಿಂದ ಬಹಳ ನೊಂದರು. ಶ್ರೀ ರಂಗನಾಥನ ದೇವಾಲಯದಲ್ಲಿ ಮಹಾ ನಿವೇದನದ ಘಂಟಾನಾದ ಆಗ ಕೇಳಿಬರುತ್ತಿತ್ತು. 'ನಿನ್ನ ಭಕ್ತರು ಹೀಗೆ ಉಪವಾಸ ಇದ್ದಾರೆ. ನೀನು ವೈಭವದಿಂದ ಭೋಜನ ಮಾಡುತ್ತಿದ್ದೀಯಲ್ಲಾ !' ಎಂದು ಆಕೆ ಶ್ರೀ ರಂಗನಾಥನನ್ನು ಕುರಿತು ಹೇಳಿದಳು. ಆಗ ಪರಮಕರುಣಾಕರನಾದ ರಂಗನಾಥನು ತನ್ನ ದಿವ್ಯ ಪ್ರಸಾದವನ್ನು ಉತ್ತಮನಂಬಿ ಎಂಬುವರ ಮೂಲಕ ಇವರಿಗೆ ಕಳುಹಿಸಿ ಕೊಟ್ಟನಂತೆ. ಆ ಪ್ರಸಾದವನ್ನು ಭಕ್ತಿಯಿಂದ ಸ್ವೀಕರಿಸಿ ಆಳ್ವಾನ್ ಅದರ ಎರಡು ಉಂಡೆಗಳನ್ನು ತನ್ನ ಪತ್ನಿಗೆ ಕೊಟ್ಟರಂತೆ. ಅದರಿಂದ ಇಬ್ಬರು ಪುತ್ರರು ಜನಿಸಿದರು. ಅವರೇ ಪರಾಶರಭಟ್ಟರು ಮತ್ತು ವ್ಯಾಸಭಟ್ಟರು. ಶ್ರೀ ಪರಾಶರ ಭಟ್ಟರನ್ನು ಶ್ರೀ ರಂಗನಾಥನ ಪುತ್ರನೆಂದೂ ಹೇಳುತ್ತಾರೆ. ಭಟ್ಟರವರು ಚಿಕ್ಕ ಮಗುವಾಗಿದ್ದಾಗಲೇ ಅವರನ್ನು ಶ್ರೀ ರಂಗನಾಥನ ದೇವಾಲಯದ

'ತಿರುಮಣತ್ತೂಣ್'ನಲ್ಲಿ ತೊಟ್ಟಿಲು ಕಟ್ಟಿ ಅವರಲ್ಲಿ ತೂಗಿಸಿದರಂತೆ. ಶ್ರೀ ರಂಗನಾಯಕೀ ದೇವಿಯೇ ಆ ತೊಟ್ಟಿಲನ್ನು ತೂಗಿದಳಂತೆ. ಭಟ್ಟರವರು 'ಶ್ರೀ ರಂಗರಾಜ ಕಮಲಾಪದ ಲಾಲಿತತ್ವಂ' ಎಂದು ಈ ಅಂಶವನ್ನು (ರಂಗರಾಜಸ್ತವ-ಶ್ಲೋಕ 17) ಹೇಳಿಕೊಂಡಿದ್ದಾರೆ.

ಶ್ರೀ ಪರಾಶರ ಭಟ್ಟರ ನಾಮಕರಣಕ್ಕಾಗಿ ಶ್ರೀ ರಾಮಾನುಜರು ಬಂದಾಗ ಎಂಬಾರ್ ಅವರು ಆ ಮಕ್ಕಳನ್ನು ತಂದು ರಾಮಾನುಜರಿಗೆ ತೋರಿದರಂತೆ. ಹಾಗೆ ಶಿಶುಗಳನ್ನು ಎತ್ತಿಕೊಂಡು ಬರುವಾಗ ಅವುಗಳಿಗೆ ದೃಷ್ಟಿದೋಷ ತಾಗದೆ ಇರಲೆಂದು ಎಂಬಾರ್ ಅವರು ದ್ವಯಮಂತ್ರವನ್ನು ಅವುಗಳ ಕಿವಿಯಲ್ಲಿ ಹೇಳುತ್ತಾ ಬಂದರಂತೆ. ರಾಮಾನುಜರು ಶಿಶುಗಳನ್ನು ನೋಡಿ 'ಈ ವಿಲಕ್ಷಣ ಶಿಶುಗಳ ಬಳಿ ದ್ವಯ ಪರಿಮಳಿಸುತ್ತಿದೆಯಲ್ಲಾ! ನೀವೇನಾದರೂ ಮಾಡಿದಿರಾ?' ಎಂದರಂತೆ. ಎಂಬಾರ್ ಅವರು 'ಅವುಗಳ ರಕ್ಷೆಗಾಗಿ ನಾನು ದ್ವಯಮಂತ್ರೋಚ್ಚಾರಣೆ ಮಾಡುತ್ತಾ ಬಂದೆ' ಎಂದರಂತೆ. ಆಗ 'ಈ ಮಕ್ಕಳಿಗೆ ನೀವೇ ಆಚಾರ್ಯರಾಗಬೇಕೆಂದು' ರಾಮಾನುಜರು ಹೇಳಿದರು. ಹಾಗೆಯೇ ಮುಂದೆ ಅವರಿಗೆ ಎಂಬಾರ್ ಅಥವಾ ಗೋವಿಂದಭಟ್ಟರವರೇ ಆಚಾರ್ಯರಾದರು. ಭಟ್ಟರವರು ಶ್ರೀ ವಿಷ್ಣುಸಹಸ್ರನಾಮಭಾಷ್ಯದಲ್ಲಿ 'ವಂದೇ ಗೋವಿಂದ ತಾತೌ' ಎಂದು ಇವರನ್ನು ಸ್ತುತಿಸಿದ್ದಾರೆ. ಗೋವಿಂದ ಭಟ್ಟರವರು ಹೇಗೆ ಆಚಾರ್ಯರಾದರೋ ಹಾಗೆಯೇ ಅವರ ತಂದೆಯವರಾದ ಕೂರತ್ತಾಳ್ವಾನ್ ಅವರೂ ಇವರಿಗೆ ಆಚಾರ್ಯರು. ದಿವ್ಯ ಪ್ರಬಂಧವನ್ನು ಉಪದೇಶಿಸುವಾಗ ಆಳ್ವಾನ್ ಅವರು ಮಂತ್ರಾರ್ಥರಹಸ್ಯಗಳನ್ನು ಇವರಿಗೆ ಉಪದೇಶಿಸಿ ಆಚಾರ್ಯರಾದರು.

ಶ್ರೀ ಪರಾಶರಭಟ್ಟರವರ ಪಾಂಡಿತ್ಯ ಅನಿತರಸಾಧಾರಣವಾದುದು. ಸರ್ವಶಾಸ್ತ್ರಗಳಲ್ಲಿಯೂ ಅವರ ನಿಷ್ಣಾತರಾಗಿದ್ದರು. ಅವರ ಪ್ರತಿಭೆ ಮತ್ತು ಕವಿತಾಸಾಮರ್ಥ್ಯಗಳು ಅನುಪಮವಾದವು. ಅವರ ಅಸಾಧಾರಣವಾದ ಪ್ರತಿಭೆ ಅವರ ಬಾಲ್ಯದಿಂದಲೇ ಪ್ರಕಾಶಕ್ಕೆ ಬಂದಿತು. ಕೇವಲ ಐದು ವರ್ಷದ ಬಾಲಕನಾಗಿದ್ದಾಗಲೇ ನಮ್ಮಾಳ್ವಾರ್‌ರವರ ಶ್ರೀ ಸೂಕ್ತಿಗಳಲ್ಲಿ ಬರುವ 'ಶಿರುಮಾ ಮನಿಶರ್' ಎಂಬುದರ ಔಚಿತ್ಯ ಹೇಗೆ ಎಂದು ಇವರು ತಮ್ಮ ತಂದೆಯನ್ನು

ಪ್ರಶ್ನಿಸಿದರಂತೆ. 'ತಿರು' ಮತ್ತು 'ಮಾ' ಎಂಬುವು ಪರಸ್ಪರ ವಿರುದ್ಧವಾಗಿ ತೋರುವುವಲ್ಲಾ ಎಂದು ಇವರು ಕೇಳಿದರಂತೆ. ಆಕಾರದಲ್ಲಿ ಕೆಲವರು ಚಿಕ್ಕವರಾಗಿದ್ದರೂ ಜ್ಞಾನದಿಂದ ದೊಡ್ಡವರಾಗಿರುವರೆಂದು ಇದರ ಅರ್ಥ ಎಂದು ಅವರ ತಂದೆ ಇದಕ್ಕೆ ಉತ್ತರವಿತ್ತರಂತೆ.

ಪರಾಶರಭಟ್ಟರವರು ಆ ಕಾಲದಲ್ಲಿ ಮೇಲುಕೋಟೆಯಲ್ಲಿದ್ದ ಪ್ರಬಲರಾದ ಅದ್ವೈತ ವೇದಾಂತಿಗಳೊಬ್ಬರನ್ನು ವಾದದಲ್ಲಿ ಗೆದ್ದು ವಿಶಿಷ್ಟಾದ್ವೈತಿಗಳನ್ನಾಗಿ ಮಾಡಿಕೊಂಡ ಘಟನೆಯೊಂದನ್ನು ಗುರುಪರಂಪರಾಪ್ರಭಾವ ನಿರೂಪಿಸುತ್ತದೆ. ವೇದಾಂತಿಗಳೆಂದು ಹೆಸರಾದ ಉದ್ದಾಮ ಪಂಡಿತರೊಬ್ಬರು ಷಡ್ದರ್ಶನಗಳಲ್ಲಿಯೂ ನಿಷ್ಣಾತರಾಗಿ ಷಡಾಸನಗಳನ್ನು ಹೊಂದಿ ಮೇಲುಕೋಟೆಯಲ್ಲಿದ್ದರಂತೆ. ಅವರ ವಿದ್ವತ್ತಿನ ವಿಚಾರ ಭಟ್ಟರ ಕಿವಿಗೆ ಬಿತ್ತು. ಅವರನ್ನು ವಿಶಿಷ್ಟಾದ್ವೈತ ಸಂಘಕ್ಕೆ ಸೇರುವಂತೆ ಮಾಡಬೇಕೆಂಬ ಆಶೆ ಭಟ್ಟರಿಗೆ ಉಂಟಾಯಿತು. ಅದಕ್ಕಾಗಿ ಭಟ್ಟರವರು ಭಗವದ್ರಾಮಾನುಜರ ಅನುಮತಿ ಪಡೆದು ಮೇಲುಕೋಟೆಗೆ ತೆರಳಿದರು. ಪರಾಶರಭಟ್ಟರ ಪಾಂಡಿತ್ಯದ ಬಗೆಗೆ ಆ ವೇದಾಂತಿಗಳೂ ಕೇಳಿದ್ದರಂತೆ. ಭಟ್ಟರವರು ಪಲ್ಲಕ್ಕಿಯಲ್ಲಿ ಕುಳಿತು ವೇದಾಂತಿಗಳನ್ನು ಕಾಣಲು ಬಂದರಂತೆ. ಆಗ ಅಲ್ಲಿದ್ದ ಜನ, 'ಹೀಗೆ ನೀವು ಹೋದರೆ ವೇದಾಂತಿಗಳನ್ನು ಕೂಡಲೇ ಕಾಣಲಾರಿರಿ. ಅವರ ಜೊತೆಗಿರುವವರೊಡನೆ ವಾದ ಮಾಡಿ ಸೋಲಿಸಿದ ಮೇಲೆಯೇ ವೇದಾಂತಿಗಳ ದರ್ಶನವಾದೀತು ! ಅದಕ್ಕಾಗಿ ನೀವು ವೇದಾಂತಿಗಳು ದಿನವೂ ನಡೆಸುವ ಭೋಜನ ಸಮಾರಂಭಕ್ಕೆ ಹೋಗಿ. ಅಲ್ಲಿ ಸುಲಭವಾಗಿ ನಿಮಗೆ ಪ್ರವೇಶ ಸಿಕ್ಕುವುದು.' ಎಂದರು. ಭಟ್ಟರು ಹಾಗೆಯೇ ವೇದಾಂತಿಗಳು ನಡೆಸುವ ಸಂತರ್ಪಣೆಯಲ್ಲಿ ಸೇರಿಕೊಂಡು ಭೋಜನಶಾಲೆಗೆ ಹೋದರು. ಹೋಗಿ ವೇದಾಂತಿಗಳ ಪಕ್ಕದಲ್ಲಿ ನಿಂತರು. ವೇದಾಂತಿಗಳು 'ನಿಮಗೇನು ಬೇಕು ?' ಎಂದು ಕೇಳಲು ಭಟ್ಟರು 'ತರ್ಕಭಿಕ್ಷೆ' ಎಂದರಂತೆ. 'ನೀವು ಭಟ್ಟರೋ ? ಎಂದರವರು. 'ಹೌದು' ಎಂದರು ಭಟ್ಟರು. ಸರಿ, ವಾದವು ಅವರಿಬ್ಬರಲ್ಲಿ ಆರಂಭವಾಯಿತು. ಒಂಭತ್ತು ದಿನಗಳು ವಾದ ಮಾಡಿ ಭಟ್ಟರವರು ವೇದಾಂತಿಗಳನ್ನು ಪರಾಭವಗೊಳಿಸಿದರು. ಹತ್ತನೆಯ ದಿನ ಅದ್ವೈತ ಖಂಡನೆ ಮಾಡಿ ಭಟ್ಟರವರು 'ತಿರುನೆಡುಂದಾಂಡಹಂ' ಪ್ರಬಂಧದ

ತತ್ವವನ್ನು ಉಪನ್ಯಾಸ ಮಾಡಿದರು. ವೇದಾಂತಿಗಳು ಇವರಿಗೆ ಮನಸೋತು ಇವರ ಶಿಷ್ಯರಾದರು. ಹೀಗೆ ಭಟ್ಟರು ವೇದಾಂತಿಗಳನ್ನು ತಮ್ಮ ಶಿಷ್ಯರನ್ನಾಗಿ ಮಾಡಿಕೊಂಡು ದಿಗ್ವಿಜಯದೊಡನೆ ಶ್ರೀರಂಗಕ್ಕೆ ಬಂದರು. 'ವೇದಾಂತಿ ಗಳನ್ನು ಹೇಗೆ ಗೆದ್ದಿರಿ?' ಎಂದು ಕೇಳಿದುದಕ್ಕೆ ಭಟ್ಟರು 'ತಿರುನೆಡುಂ ದಾಂಡಹಂ ಶಾಸ್ತ್ರದಿಂದ' ಎಂದು ಉತ್ತರ ಕೊಟ್ಟರಂತೆ.

ವೇದಾಂತಿಗಳು ಸಂಸಾರದಲ್ಲಿ ಜಿಹಾಸೆ ಹೊಂದಿ ಸಂನ್ಯಾಸ ತೆಗೆದು ಕೊಂಡು ಶ್ರೀರಂಗದಲ್ಲಿದ್ದ ಶ್ರೀ ಪರಾಶರಭಟ್ಟರಲ್ಲಿಗೆ ಬಂದರು. ಕಾಷಾಯ ಗ್ರಹಣ ಮಾಡಿ ಬಂದಿದ್ದ ಅವರನ್ನು ಕಂಡು ಭಟ್ಟರು 'ನಮ್ಮ ಜೀಯರು ಬಂದರು' ಎಂದು ಹೇಳಿದರು. ಅಂದಿನಿಂದ ವೇದಾಂತಿಗಳಿಗೆ 'ನಂಜೀಯರು' ಎಂಬ ಹೆಸರು ಬಂದಿತು.

ಶ್ರೀ ಪರಾಶರಭಟ್ಟರು ಶ್ರೀ ವೈಷ್ಣವ ಧರ್ಮಕ್ಕೆ ನೀಡಿರುವ ಕೊಡುಗೆ ಅಮೂಲ್ಯವಾದುದು. ಸರ್ವತೋಮುಖವಾದ ಪಾಂಡಿತ್ಯವನ್ನು ಪೊಂದಿದ ಈ ಮಹಾನುಭಾವರು ಅನುಗ್ರಹಿಸಿದ ಕೃತಿಗಳು ಹೀಗಿವೆ.

೧) ಶ್ರೀ ವಿಷ್ಣು ಸಹಸ್ರನಾಮ ಭಾಷ್ಯ
೨) ಶ್ರೀ ರಂಗರಾಜಸ್ತವ-ಪೂರ್ವಶತಕ ಮತ್ತು ಉತ್ತರ ಶತಕ
೩) ಶ್ರೀ ಗುಣರತ್ನಕೋಶ
೪) ಅಷ್ಟಶ್ಲೋಕೀ
೫) ತಿರುನೆಡುಂದಾಂಡಹಂ ವ್ಯಾಖ್ಯಾನ
೬) ಕೈಶಿಕಪುರಾಣ ವ್ಯಾಖ್ಯಾನ

ಇವಲ್ಲದೆ ಇರುಪತ್ತಿನಾಲಾಯಿರಪ್ಪಡಿ ವ್ಯಾಖ್ಯಾನದಲ್ಲಿಯೂ ಮುಪ್ಪತ್ತಾ ರಾಯಿರಪ್ಪಡಿ ವ್ಯಾಖ್ಯಾನದಲ್ಲಿಯೂ ಆಳ್ವಾರರುಗಳ ಶ್ರೀ ಸೂಕ್ತಿಗಳ ಅರ್ಥ ನಿರೂಪಣೆಯನ್ನು ಪರಾಶರಭಟ್ಟರು ಹೇಗೆ ಮಾಡುತ್ತಿದ್ದರೆಂಬುದನ್ನು ಅನೇಕರು ಉಲ್ಲೇಖಿಸಿದ್ದಾರೆ. ಇವುಗಳನ್ನು ಸಾಂಪ್ರದಾಯಿಕವಾಗಿ 'ಭಟ್ಟರ ನಿರ್ವಾಹ'ವೆಂದು ಹೇಳುತ್ತಾರೆ. ಇಂಥ ನಿರ್ವಾಹಗಳು ನೂರಕ್ಕೂ ಅಧಿಕ ವಾಗಿವೆ. ದಿವ್ಯ ಪ್ರಬಂಧಗಳ ಅನುಭವವನ್ನು ಹೇಗೆ ಭಟ್ಟರು ಮಾಡುತ್ತಿದ್ದ ರೆಂಬುದನ್ನು ಇವು ತಿಳಿಸಿಕೊಡುತ್ತವೆ.

**ಶ್ರೀ ರಂಗರಾಜಸ್ತವ:-** ಶ್ರೀ ಪರಾಶರ ಭಟ್ಟರವರು ರಚಿಸಿರುವ ಶ್ರೀ ರಂಗರಾಜಸ್ತವ ಭಗವಂತನಲ್ಲಿ ಅವರಿಗೆ ಇದ್ದ ಭಕ್ತಿಯ ಪರೀವಾಹ ರೂಪವಾಗಿದೆ. ಸ್ತೋತ್ರ ಸಾಹಿತ್ಯಕ್ಕೆ ಅನರ್ಘ್ಯವಾದ ಕೊಡುಗೆಯಾಗಿರುವ ಈ ದಿವ್ಯ ಕೃತಿ ಪ್ರತಿಯೊಬ್ಬರೂ ಅವಶ್ಯಕವಾಗಿ ತಿಳಿದಿರಲೇಬೇಕಾದ ತತ್ತ್ವಹಿತ ಪುರುಷಾರ್ಥಗಳನ್ನು ಪ್ರಭಾವ ಪೂರ್ಣವಾಗಿ ಪ್ರತಿಪಾದಿಸುತ್ತದೆ. ಈ ಸ್ತುತಿಯಲ್ಲಿ ಪೂರ್ವ ಶತಕ ಮತ್ತು ಉತ್ತರ ಶತಕ ಎಂಬ ಎರಡು ಭಾಗಗಳಿವೆ. ದ್ವಯಮಂತ್ರದ ಪೂರ್ವಖಂಡದ ಅರ್ಥವಿಶೇಷಗಳನ್ನು ಪೂರ್ವ ಶತಕವೂ ಉತ್ತರ ಖಂಡದ ಅರ್ಥವಿಶೇಷಗಳನ್ನು ಉತ್ತರ ಶತಕವೂ ಪ್ರತಿಪಾದಿಸುತ್ತದೆ. ಹೇಗೆ ಇದು ಅನುಪಮವಾದ ಸ್ತೋತ್ರವಾಗಿದೆಯೋ ಹಾಗೆಯೇ ಸಾರತಮವಾದ ಶಾಸ್ತ್ರವೂ ಆಗಿದೆ. ಈ ಸ್ತೋತ್ರ ರಚನೆಯ ಸನ್ನಿವೇಶ ಹೀಗಿತ್ತೆಂದು ಹೇಳಲಾಗಿದೆ. ಶ್ರೀ ಪರಾಶರ ಭಟ್ಟರು ಶ್ರೀರಂಗದಲ್ಲಿ ದರ್ಶನ ನಿರ್ವಾಹಕರಾಗಿದ್ದಾಗ ಐದನೆಯ ಪ್ರಾಕಾರದಲ್ಲಿ ತ್ರಿವಿಕ್ರಮನ ಬೀದಿಯಲ್ಲಿ ಪ್ರಾಕಾರದ ಗೋಡೆಯನ್ನು ನಿರ್ಮಿಸುವ ಸಂದರ್ಭ ಒದಗಿತು. ಆಗ ಅಧಿಕಾರದಲ್ಲಿದ್ದ ವೀರಸುಂದರನೆಂಬುವನು ಪ್ರಾಕಾರವನ್ನು ಕಟ್ಟುವಾಗ ಅಡ್ಡಲಾಗಿದ್ದ ಪಿಳ್ಳೈ ಪಿಳ್ಳೈ ಆಳ್ವಾನ್ ಅವರ ಮನೆಯನ್ನು ಬಿಟ್ಟು ಕಟ್ಟದೆ ಅದನ್ನು ಒಡೆದು ಹಾಕಿ ಕಟ್ಟಿಸಬೇಕೆಂದಿದ್ದನು. ಶ್ರೀ ಪರಾಶರ ಭಟ್ಟರು ಭಕ್ತವರ್ಯರಾದ ಅವರ ಮನೆಯನ್ನು ಒಡೆಸದೆಯೇ ಅದನ್ನು ಬಳಸಿ ಪ್ರಾಕಾರದ ಗೋಡೆಯನ್ನು ಕಟ್ಟಬೇಕೆಂದು ವೀರಸುಂದರನಿಗೆ ತಿಳಿಸಿದರು. 'ಭಗವಂತನಿಗೆ ನೀನು ಕಟ್ಟಿಸುವ ಪ್ರಾಕಾರ ರಕ್ಷಕವೇ ? ಆ ಭಕ್ತರು ಮಾಡುವ ಮಂಗಳಾಶಾಸನ ತಾನೇ ರಕ್ಷಕ ? ತಿರುಮಂಗೈ ಆಳ್ವಾರ್ರವರು ಪ್ರಾಕಾರ ಕಟ್ಟುವಾಗ ಶ್ರೀ ತೊಂಡರಡಿಪ್ಪೊಡಿ ಆಳ್ವಾರ್ರವರು ತಿರುಮಾಲೆಯನ್ನು ಕಟ್ಟುತ್ತಿದ್ದ 'ಅಡಂದೈನಡಂದೈ' ಎಂಬ ಜಾಗವನ್ನು ಬಿಟ್ಟು ಕಟ್ಟಲಿಲ್ಲವೇ ? ನೀನು ಹಾಗೆಯೇ ಮಾಡು', ಎಂದು ಹೇಳಿದರು ಭಟ್ಟರು. ವೀರಸುಂದರನು ಭಟ್ಟರನ್ನು ಆಶ್ರಯಿಸಿದ್ದರೂ ಅವರ ಮಾತನ್ನು ನಡೆಸದೆ ಪಿಳ್ಳೈ ಪಿಳ್ಳೈ ಆಳ್ವಾನ್ ಅವರ ಮನೆಯನ್ನು ಒಡೆಸಿ ಹಾಕಿ ಪ್ರಾಕಾರ ಕಟ್ಟಿಸ ತೊಡಗಿದನು. ಇದರಿಂದ ಬಹಳ ಮನ ನೊಂದ ಭಟ್ಟರವರು ಶ್ರೀರಂಗವನ್ನು ಬಿಟ್ಟು ತಿರುಕ್ಕೋಟಿ ಯೂರಿಗೆ ಹೋಗಿ ಸೇರಿದರು. ಆದರೂ ಶ್ರೀ ರಂಗನಾಥನನ್ನು ಅಗಲಬೇಕಾದುದಕ್ಕಾಗಿ ಬಹಳ ನೊಂದರು.

ಅವರು ಅಂಥ ಸನ್ನಿವೇಶದಲ್ಲಿ 'ಕದಾಹಂ ಕಾವೇರೀಂ' ಮೊದಲಾದ ಶ್ಲೋಕಗಳನ್ನು ಹೇಳಿಕೊಳ್ಳುತ್ತಿದ್ದರಂತೆ. ಮುಂದೆ ವೀರಸುಂದರನ ಕಾಲಾನಂತರ ಅವನ ಮಗ ಭಟ್ಟರಲ್ಲಿ ಕ್ಷಮೆಯನ್ನು ಕೇಳಿಕೊಂಡನು. ಆಗ ಭಟ್ಟರು ಮತ್ತೆ ಶ್ರೀರಂಗಕ್ಕೆ ಬಂದಾಗ ಕಾವೇರಿ ನದಿಯಲ್ಲಿ ಸ್ನಾನ ಮಾಡಿ ದೇವಾಲಯಕ್ಕೆ ಬರುತ್ತಾ ಈ ಸ್ತೋತ್ರವನ್ನು ಹೇಳುತ್ತಾ ಬಂದು ಶ್ರೀ ರಂಗನಾಥನನ್ನು ಸಂದರ್ಶಿಸಿದರಂತೆ.

ಈ ಸ್ತವದಲ್ಲಿ ಪೂರ್ವಶತಕ ಮತ್ತು ಉತ್ತರ ಶತಕ ಎಂಬ ಎರಡು ಶತಕಗಳಿವೆ. ಪೂರ್ವ ಶತಕದಲ್ಲಿ 127 ಶ್ಲೋಕಗಳೂ ಉತ್ತರ ಶತಕದಲ್ಲಿ 105 ಶ್ಲೋಕಗಳೂ ಇವೆ. ಪೂರ್ವ ಶತಕದಲ್ಲಿ ಮೊದಲು ಆಚಾರ್ಯ ಪರಂಪರೆಯ ಅನುಸಂಧಾನಮಾಡಿ ಶ್ರೀರಂಗನಾಥನನ್ನು ಸ್ತುತಿಸುವಲ್ಲಿ ತಮ್ಮ ನೈಚ್ಯಾನುಸಂಧಾನವನ್ನು ಭಟ್ಟರು ಮಾಡಿದ್ದಾರೆ (1-19). ಈ ಸ್ತೋತ್ರದ 20ನೆಯ ಶ್ಲೋಕದಿಂದ ಐದು ಶ್ಲೋಕಗಳಲ್ಲಿ (20 ರಿಂದ 24) ಕಾವೇರೀ ನದಿಯನ್ನು ಸ್ತುತಿಸಿದೆ. 25ನೆಯ ಶ್ಲೋಕದಿಂದ 31ನೆಯ ಶ್ಲೋಕ ಪೂರ್ತಿಯಾಗಿ ಶ್ರೀ ರಂಗರಾಜಧಾನಿಯಾದ ಶ್ರೀರಂಗ ಕ್ಷೇತ್ರದ ವರ್ಣನೆ ಮಾಡಿದ್ದಾರೆ. ನಗರ ಪ್ರವೇಶ ಮಾಡುವಾಗ ಗಣನಾಯಕರಾದ ಕುಮುದ ಮೊದಲಾದವರಿಗೆ ವಂದನೆಯನ್ನು 32ನೆಯ ಶ್ಲೋಕದಲ್ಲಿ ಸಲ್ಲಿಸಿದ್ದಾರೆ. ಶ್ರೀ ರಂಗಕ್ಷೇತ್ರವನ್ನು ಆಶ್ರಯವನ್ನಾಗಿ ಹೊಂದಿರುವವರಿಗೆಲ್ಲಾ ನಮಸ್ಕಾರವನ್ನು ಅರ್ಪಿಸಿ (33), ಶ್ರೀರಂಗಭವನದ ಪರಿಸರದಲ್ಲಿರುವ ಪ್ರಾಕಾರ, ಗೋಪುರ, ಮಂಟಪ ಮೊದಲಾದವುಗಳನ್ನು (34-36) ವಂದಿಸಿದ್ದಾರೆ. ಶ್ರೀ ರಂಗಮಂದಿರದ ನಾಲ್ಕು ದಿಕ್ಕಿನ ದ್ವಾರಗಳಲ್ಲಿಯೂ ಪಾಲಕರಾಗಿರುವ ಚಂಡ ಪ್ರಚಂಡರಿಗೆ ನಮಸ್ಕಾರಗಳನ್ನರ್ಪಿಸಿದ ನಂತರ (37), ಸಾವಿರ ಕಂಬದ ಮಂಟಪವನ್ನೂ (38), ಚಂದ್ರ ಪುಷ್ಕರಿಣಿಯನ್ನೂ (39-40), ನಂತರ ಚಂದ್ರ ಪುಷ್ಕರಿಣಿಯ ಪೂರ್ವ ದಿಕ್ಕಿನಲ್ಲಿ ವಿರಾಜಿಸಿರುವ ಆಳ್ವಾರರುಗಳನ್ನೂ (41) ಸ್ತುತಿಸಿದ್ದಾರೆ. ಶ್ರೀ ರಂಗ ವಿಮಾನವನ್ನು (42-45) ಸ್ತೋತ್ರಮಾಡಿ ಗೋಪುರದ ಮೇಲೆ ವಿರಾಜಿಸಿರುವ ಮೇಟಿ ನರಸಿಂಹ ಸ್ವಾಮಿಯನ್ನು ಎರಡು ಶ್ಲೋಕಗಳಿಂದ (46-47) ವಂದಿಸಿದ್ದಾರೆ. 48ನೆಯ ಶ್ಲೋಕದಲ್ಲಿ ಆಚಾರ್ಯರುಗಳಿಗೆ ಪ್ರಣಾಮವನ್ನರ್ಪಿ

ಸಿದೆ. 49ನೆಯ ಶ್ಲೋಕದಲ್ಲಿ ಚಂದ್ರ ಪುಷ್ಕರಿಣೀ ತೀರದಲ್ಲಿರುವ ಪುನ್ನಾಗ ವೃಕ್ಷವನ್ನು ಸ್ತುತಿಸಿ ಮುಂದೆ ವಿಷ್ವಕ್ಸೇನರನ್ನೂ (50), ಸೂತ್ರವತೀ ದೇವಿಯನ್ನೂ(51),ವಿಷ್ವಕ್ಸೇನರ ಭಟರುಗಳನ್ನೂ(52),ಗರುಡನನ್ನೂ(53),ಅವನ ಪತ್ನಿಯರಾದ ಸುಕೀರ್ತಿ ಮತ್ತು ರುದ್ರೆ ಎಂಬುವರನ್ನೂ (54), ಸ್ವಾಮಿಯ ಪಂಚಾಯುಧಗಳನ್ನೂ (55), ಶ್ರೀ ಸುದರ್ಶನಚಕ್ರವನ್ನೂ(56) ಸ್ತುತಿಸಿ ಶ್ರೀ ಹನುಮಂತನಿಗೂ ಶ್ರೀ ವಿಭೀಷಣನಿಗೂ ದಾಸನಾಗಲು ತಾವು ಇಚ್ಛಿಸುವುದಾಗಿ (57) ಹೇಳಿಕೊಂಡಿದ್ದಾರೆ. 58ನೆಯ ಶ್ಲೋಕದಲ್ಲಿ ಶ್ರೀ ರಂಗನಾಥನ ಗರ್ಭ ಗೃಹದ ದ್ವಾರದಲ್ಲಿ ಅಡ್ಡಡ್ಡಲಾಗಿ ಹಾಕಿರುವ ಕೋಲನ್ನು ಸ್ತುತಿಸಿ ಎರಡು ಆಮೋದ ಸ್ತಂಭಗಳನ್ನೂ 59ನೆಯ ಶ್ಲೋಕದಲ್ಲಿ ವಂದಿಸಿ, ಶ್ರೀ ರಂಗನಾಥನು ಶಯನಿಸಿರುವ ಶ್ರೀ ರಂಗಮಂದಿರದ ಗರ್ಭ ಗೃಹವನ್ನು 60ನೆಯ ಶ್ಲೋಕದಲ್ಲಿ ಸಂದರ್ಶಿಸಿದ್ದಾರೆ. ಭಗವಂತನ ಪಾದಾರವಿಂದ ಸಂವಾಹಿನಿಯರನ್ನೂ (61) ವಿಮಲಾ ಮೊದಲಾದ ಚಾಮರಗ್ರಾಹಿಣಿಯರನ್ನೂ (62) ಸ್ತುತಿಸಿದ ನಂತರ, 'ನಂಪೆರುಮಾಳ್' ಎಂದು ವಿಖ್ಯಾತನಾದ ಉತ್ಸವಮೂರ್ತಿ ಶ್ರೀರಂಗನಾಥನನ್ನು 63ನೆಯ ಶ್ಲೋಕದಿಂದಾರಂಭಿಸಿ 76ನೆಯ ಶ್ಲೋಕ ಪೂರ್ತಿಯಾಗಿ 14 ಶ್ಲೋಕಗಳಲ್ಲಿ ಸ್ತೋತ್ರ ಮಾಡಿದ್ದಾರೆ. 77ನೆಯ ಶ್ಲೋಕದಲ್ಲಿ ಶ್ರೀ ರಂಗನಾಥನಿಗೆ ಹಾಸುಗೆಯಾದ ಆದಿಶೇಷನನ್ನು ಸ್ತುತಿಸಿ 78ನೆಯ ಶ್ಲೋಕದಿಂದ ಆರಂಭಿಸಿ ಆದಿಶೇಷನಮೇಲೆ ಪವಡಿಸಿರುವ ಶ್ರೀರಂಗನಾಥನನ್ನು ಪೂರ್ವಶತಕದ ಉಳಿದ ಶ್ಲೋಕಗಳಿಂದ (78 ರಿಂದ 127) ಅನುಪಮವಾಗಿ ಸ್ತುತಿಸಿದ್ದಾರೆ. ಪೂರ್ವಶತಕವು 62ನೆಯ ಶ್ಲೋಕದವರೆಗೆ 'ನಾರ' ಶಬ್ದಾರ್ಥವನ್ನು ನಿರೂಪಿಸಿ ಅಲ್ಲಿಂದ ಮುಂದೆ 63ನೆಯ ಶ್ಲೋಕದಿಂದ ಅವುಗಳಿಗೆ 'ಅಯನ' ನಾದವನನ್ನು ನಿರೂಪಣೆ ಮಾಡುತ್ತದೆ. 'ನಾರಾಯಣ' ಶಬ್ದಾರ್ಥವನ್ನು ಈ ಶತಕ ಹೀಗೆ ನಿರೂಪಿಸುವುದೆಂದು ತಿಳಿಯಬಹುದು.

ಉತ್ತರ ಶತಕದಲ್ಲಿ 105 ಶ್ಲೋಕಗಳಿವೆ. ಇದು ದ್ವಯ ಮಂತ್ರದ ಉತ್ತರ ಖಂಡದ ಅರ್ಥಗಳನ್ನು ಪ್ರತಿಪಾದಿಸುತ್ತದೆ. ಸಕಲರಿಗೂ ಪ್ರಾಪ್ಯನಾದ ಶ್ರೀಮನ್ನಾರಾಯಣನ ಸರ್ವಶೇಷಿತ್ವವನ್ನು ನಿರೂಪಿಸುವ ಈ ಶತಕ ಪ್ರಾಪ್ಯ ಸ್ವರೂಪವನ್ನು ತಿಳಿಯಪಡಿಸುತ್ತದೆ. ಚಿದಚಿತ್ಪ್ರಕಾರವಾದ ಬ್ರಹ್ಮವೇ ತತ್ವ

ವೆಂದೂ ಅದು ಶ್ರೀರಂಗನಾಥ ರೂಪಿಯಾದ ಶ್ರೀಮನ್ನಾರಾಯಣನೆಂದೂ ಈ ಶತಕ ಸ್ಥಾಪಿಸುತ್ತದೆ. 'ಮಾನಾಧೀನಾ ಮೇಯಸಿದ್ಧಿಃ' ಎಂದು ಹೇಳಿರುವ ಕಾರಣ ಪ್ರಮಾಣಸ್ವರೂಪದ ನಿರೂಪಣೆಯ ಮೂಲಕ ಪ್ರಮೇಯಸ್ವರೂಪ ವನ್ನು ಇಲ್ಲಿ ಸಿದ್ಧಾಂತಿಸಿದ್ದಾರೆ. ವೇದಬಾಹ್ಯವಾದ ಸ್ಮೃತಿಗಳು ಪ್ರಮಾಣ ವಲ್ಲವೆಂದು ಹೇಳಿ ವೇದಬಾಹ್ಯರ ಸಿದ್ಧಾಂತಗಳು ಗ್ರಾಹ್ಯವಲ್ಲವೆಂಬುದನ್ನೂ ನಿರೂಪಿಸಿದ್ದಾರೆ (2, 3). ಚಾರ್ವಾಕರು, ಸರ್ವಶೂನ್ಯವಾದಿಗಳು, ಯೋಗಾ ಚಾರರು, ಕ್ಷಣಿಕವಾದಿಗಳು, ವಿಜ್ಞಾನ ವಾದಿಗಳು, ಮಾಯಾವಾದಿಗಳು, ಜೈನರು, ನಯ್ಯಾಯಿಕರು ಇವರ ವಾದಗಳು ಅಸಾರವೆಂದು ನಿರೂಪಿಸಿ ಪಾಂಚ ರಾತ್ರದ ಪ್ರಾಮಾಣ್ಯವನ್ನು ಸ್ಥಾಪಿಸಿದ್ದಾರೆ (14, 15). ಬ್ರಹ್ಮಸೂತ್ರಗಳಲ್ಲಿ ಎರಡನೆಯ ಅಧ್ಯಾಯದ ಎರಡನೆಯ ಪಾದದಲ್ಲಿ ಬಾದರಾಯಣರು ಇತರ ದರ್ಶನಗಳನ್ನು ನಿರಾಕರಿಸಿರುವುದಕ್ಕೆ ಅನುಗುಣವಾಗಿದೆ ಇದು. ಬಾಹ್ಯ ಮಾರ್ಗಗಳನ್ನು ಅನಾದರಿಸುವುದಾಗಿ ಹೇಳಿ ವೇದಪ್ರಾಮಾಣ್ಯವನ್ನು 16, 17, 18ನೆಯ ಶ್ಲೋಕಗಳಲ್ಲಿ ಪ್ರತಿಪಾದಿಸಿದ್ದಾರೆ. ಭಗವಂತನೇ ಸಕಲ ಫಲ ಪ್ರದನೆಂಬುದನ್ನೂ (20) ಕರ್ಮ ವಿಭಾಗವನ್ನೂ ಅದರ ಔಚಿತ್ಯವನ್ನೂ (21) ತಿಳಿಸಿ, ವೇದವು ಸಿದ್ಧ ವಸ್ತುವಾದ ಬ್ರಹ್ಮವನ್ನು ಬೋಧಿಸುತ್ತದೆ ಎಂದು (22) ನಿರೂಪಿಸಿ ಬ್ರಹ್ಮಸೂತ್ರಗಳ ಮೊದಲನೆಯ ಸೂತ್ರದ ಅರ್ಥವನ್ನು ಸ್ಥಾಪಿಸಿದ್ದಾರೆ. 'ಬ್ರಹ್ಮವು ಅದ್ವಿತೀಯ'ವೆನ್ನುವುದಕ್ಕೂ 'ತತ್ತ್ವಮಸಿ' ಮೊದಲಾದ ಅಭೇದ ವಾಕ್ಯಕ್ಕೂ ಅರ್ಥವೇನೆಂಬುದನ್ನು (23,24) ನಿರೂಪಿಸಿ ಸಕಲ ಚೇತನಾ ಚೇತನಗಳಿಗೂ ಈಶ್ವರನಾದ ಪರವಸ್ತು ಶ್ರೀಮನ್ನಾರಾಯಣನೇ ಎಂದು ಶ್ರೀಮನ್ನಾರಾಯಣನ ಪರತ್ವವನ್ನು (25, 26) ಸ್ಥಾಪಿಸಿದ್ದಾರೆ. ಭಗವಂತನ ಷಡ್ಗುಣಗಳ ನಿರೂಪಣೆಯನ್ನು ವಿವರಿಸಿ (27ರಿಂದ34) ಅವನ ನಿರತಿಶಯವಾದ ಆನಂದ ಸ್ವರೂಪವನ್ನು (35) ಕೊಂಡಾಡಿದ್ದಾರೆ. ಪರಬ್ರಹ್ಮ ಸ್ವರೂಪಿಯಾದ ಶ್ರೀ ರಂಗನಾಥನ ಕಲ್ಯಾಣ ಗುಣಗಳನ್ನೂ ಶಾಂತೋದಿತ ನಿತ್ಯೋದಿತ ದೆಶೆಗಳನ್ನು ವರ್ಣಿಸಿದ್ದಾರೆ (36,37). ಅವನ ಪರಿಪೂರ್ಣ ವೈಭವವನ್ನೂ (38) ವರ್ಣಿಸಿ ವಾಸುದೇವಾದಿ ನಾಲ್ಕು ವ್ಯೂಹಗಳ ಸ್ವರೂಪವನ್ನು (39, 40) ನಿರೂಪಿಸಿ, ಜಗತ್ಸೃಷ್ಟಿಕಾರ್ಯ ಭಗವಂತನ ಕಾರುಣ್ಯದಿಂದ ಆದುದೆಂದೂ ಚೇತನರ ಕರ್ಮಾನುಗುಣವಾಗಿ ಇದು

ಆದುದರಿಂದ ವೈಷಮ್ಯ ನೈರ್ಘೃಣ್ಯಗಳಿಲ್ಲವೆಂದೂ ಪ್ರತಿಪಾದಿಸಿ ಅವನ ಸ್ವಾತಂತ್ರ್ಯ ಸ್ವರೂಪವನ್ನು ವರ್ಣಿಸಿದ್ದಾರೆ (41,42;43). ಜಗತ್ಸೃಷ್ಟ್ಯಾದಿಗಳಲ್ಲಿ ಶ್ರೀ ದೇವಿಯೊಡನೆ ಅನ್ವಯಿಸುವನೆಂದು (44) ಹೇಳಿ ಭಗವಂತನು ಚೇತನೋಜ್ಜೀವನಕ್ಕಾಗಿಯೇ ದೇವಿಯೊಡನೆ ಅವತರಿಸುವನೆಂಬ ರಹಸ್ಯವನ್ನು (45ರಿಂದ 51) ನಿರೂಪಿಸಿ, ಶ್ರೀಹಯಗ್ರೀವಾವತಾರ, ಶ್ರೀ ಹಂಸಾವತಾರ, ವಟಪತ್ರಶಾಯಿ, ಸಮುದ್ರಮಥನ, ಗಜೇಂದ್ರ ರಕ್ಷಣ ವ್ಯಾಪಾರಗಳನ್ನು (52ರಿಂದ59) ಕೊಂಡಾಡಿ, ಸ್ವಾಮಿಯ ದಶಾವತಾರಗಳನ್ನು (60ರಿಂದ73) ವರ್ಣಿಸಿದ್ದಾರೆ. ಅರ್ಚಾವತಾರದ ಸ್ವರೂಪವನ್ನು (74) ನಿರೂಪಿಸಿ ಶ್ರೀರಂಗನಾಥನನ್ನು ವಿಶೇಷತಃ ಸ್ತುತಿಸಿ (75ರಿಂದ78) ಶ್ರುತಿ ವಾಕ್ಯಗಳಿಂದ ಪ್ರತಿಪಾದ್ಯನಾದ ಸ್ವಾಮಿಯ ಸ್ವರೂಪವನ್ನು ಅಂಥ ಶ್ರುತಿ ವಾಕ್ಯಗಳಿಂದಲೇ (79ರಿಂದ82) ಕೊಂಡಾಡಿದ್ದಾರೆ. ಭಗವಂತನನ್ನೇ ಎಲ್ಲರೂ ಎಲ್ಲ ಕರ್ಮಗಳಿಂದಲೂ ಆರಾಧಿಸುವರೆಂದೂ, ಅವನೇ ಉಪಾಯನೂ ಉಪೇಯನೂ ಆಗಿರುವನೆಂದೂ (87) ನಿರೂಪಿಸಿ, ಆ ಪರಮಾತ್ಮನೇ ಸರ್ವರಕ್ಷಕನೆಂದೂ ಅನುಸಂಧಾನ ಮಾಡಿ ಆ ಪರಮನಲ್ಲಿ ಹೇಗೆ ಸರ್ವಸಮರ್ಪಣ ಭಾವದಿಂದ ರಕ್ಷಣೆಯನ್ನು ಬೇಡಬೇಕೆಂಬುವುದನ್ನು ಈ ಶತಕದ ಉಳಿದ ಶ್ಲೋಕಗಳಿಂದ ಪ್ರತಿಪಾದಿಸಿದ್ದಾರೆ (88ರಿಂದ 105).

ಶ್ರೀ ವೈಷ್ಣವರು ಪ್ರತಿದಿನವೂ ಅನುಸಂಧಾನ ಮಾಡುವ ದಿವ್ಯಕ್ಷೇತ್ರಗಳಲ್ಲಿ ಮೊಟ್ಟಮೊದಲನೆಯದು ಶ್ರೀರಂಗ. 'ಶ್ರೀರಂಗಮಂಗಳಮಣಿಂ ಕರುಣಾನಿವಾಸಂ' ಎಂದು ಅವರು ಶ್ರೀರಂಗನಾಥನನ್ನು ನೆನೆಯುತ್ತಾರೆ. 'ಕೋಯಿಲ್' ಎಂದರೆ ಶ್ರೀರಂಗವೇ. ನಾವು 'ಪೆರಿಯ ಪೆರುಮಾಳ್ ಪೆರಿಯ ಪೆರಾಟ್ಟಿಯಾರ್' ಎಂದೇ ಶ್ರೀರಂಗನಾಥನನ್ನೂ ಶ್ರೀ ರಂಗನಾಯಿಕೆಯನ್ನೂ ಹೆಸರಿಸುತ್ತೇವೆ. ಶ್ರೀ ರಂಗನಾಥನ ಹಿರಿಮೆ ಅಪಾರ. ಆಳ್ವಾರರುಗಳೂ ಆಚಾರ್ಯರೂ ಶ್ರೀ ರಂಗನಾಥನಿಗೆ ಮನಸೋತು ಅನನ್ಯಭಾವದಿಂದ ಅವನನ್ನು ಸ್ತುತಿಸಿದ್ದಾರೆ. ಭಗವದ್ರಾಮಾನುಜರು ಗದ್ಯತ್ರಯವನ್ನು ರಚಿಸಿ ಅರ್ಪಿಸಿದುದು ಶ್ರೀ ರಂಗನಾಥನ ಶ್ರೀ ಪಾದಗಳಲ್ಲಿಯೇ. ಶ್ರೀಮದ್ವೇದಾಂತ ದೇಶಿಕರು ಶ್ರೀರಂಗನಾಥನ ಪಾದುಕೆಗಳನ್ನು 'ಪಾದುಕಾಸಹಸ್ರ'ವೆಂಬ ತಮ್ಮ ಕೃತಿರತ್ನದಲ್ಲಿ ಸ್ತುತಿಸಿದ್ದಾರೆ. ಅಲ್ಲದೆ ಭಗವದ್ಧ್ಯಾನ ಸೋಪಾನವೆಂಬ ಸ್ತೋತ್ರವನ್ನೂ ಶ್ರೀರಂಗನಾಥನ

ಮೇಲೆ ರಚಿಸಿದ್ದಾರೆ. ಎಲ್ಲ ಆಳ್ವಾರರುಗಳೂ ಶ್ರೀರಂಗನಾಥನನ್ನು ಸ್ತುತಿಸಿ ಕೊಂಡಾಡಿದ್ದಾರೆ. ಆಳ್ವಾರರುಗಳ ಶ್ರೀ ಸೂಕ್ತಿಗಳ ರಸಾನುಭವದಲ್ಲಿ ತನ್ಮಯ ರಾಗಿದ್ದ ಭಟ್ಟರವರು ತಮ್ಮ ಈ ಸ್ತವದಲ್ಲಿ ಅನೇಕ ಕಡೆ ದಿವ್ಯ ಪ್ರಬಂಧಗಳ ಭಾವಗಳನ್ನು ಅನುಸಂಧಾನ ಮಾಡಿದ್ದಾರೆ. ಆಳ್ವಾರರುಗಳು ಹೇಗೆ ಶ್ರೀ ರಂಗನಾಥನನ್ನು ಅನುಭವಿಸಿದ್ದಾರೆಂಬುದನ್ನು ತಿಳಿಯಲು ಅನುಕೂಲವಾಗ ಲೆಂದು ಆಳ್ವಾರರುಗಳ ಕೆಲವು ಶ್ರೀಸೂಕ್ತಿಗಳನ್ನು ಕೆಳಗೆ ಉದಾಹರಿಸಿದೆ.

**ಆಳ್ವಾರರುಗಳ ರಂಗನಾಥಾನುಭವ**

**ಪೊಯ್ಹೈಆಳ್ವಾರ್ರವರು** 'ಅನ್ರು ಕರುವರಂಗತ್ತುಳ್ ಕಿಡಂದು ಕೈತೊಳ್ದೇನ್ ಕಂಡೇನ್ ತಿರುವರಂಗನೇಯಾನ್ ದಿಶೈ' (ಮು.ತಿ. 6) 'ಅಂದು ಗರ್ಭವಾಸದಲ್ಲಿರುವಾಗ ಶ್ರೀ ರಂಗನಾಥನು ಇರುವ ದಿಕ್ಕನ್ನು ಕಂಡು ಕೊಂಡೆ. ಮತ್ತು ಅದಸಿಗೆ ಕೈಮುಗಿದೆ 'ಎಂದು ಹೇಳಿ ಶ್ರೀರಂಗನಾಥ ನನ್ನು ಸ್ತುತಿಸಿದ್ದಾರೆ.

**ಪೂದತ್ತಾಳ್ವಾರ್ ಅವರು** 'ಸಿನ್ನೈಪ್ಪರಿಯ ಸೀಳ್ ಅರಂಗತ್ತು ಉಳ್ಳಾನ್' 'ಪರಿಚ್ಛೇದಿಸಲಶಕ್ಯವಾದ ವಿಶಾಲವಾದ ಶ್ರೀರಂಗದಲ್ಲಿ ಇದ್ದಾನೆ.'(ಇ.ತಿ 28), 'ಪಯಿನ್ರದು ಅರಂಗಂ'–'ನಿತ್ಯ ವಾಸಮಾಡುವ ಸ್ಥಳ ಶ್ರೀ ರಂಗ (ಇ.ತಿ. 46) 'ತಲೈ ಅರಂಗಂ' - ದಿವ್ಯದೇಶಗಳಲ್ಲಿ ಪ್ರಧಾನವಾದ ಶ್ರೀರಂಗ' (ಇ.ತಿ 46), 'ತೆನ್ ಅರಂಗತ್ತು ಎಂದೈ'-ದಕ್ಷಿಣದ ಶ್ರೀರಂಗದಲ್ಲಿ ಪವಡಿಸಿರುವ ನನ್ನ ಸ್ವಾಮಿ' (ಇ.ತಿ. 88) ಎಂದು ಶ್ರೀರಂಗನಾಥನನ್ನು ಕೊಂಡಾಡಿದ್ದಾರೆ.

**ಪೇಯಾಳ್ವಾರ್ರವರು** ಭಗವಂತನು ತನ್ನ ಪರಮ ಸೌಲಭ್ಯದಿಂದ ನಿತ್ಯವಾಸ ಮಾಡುತ್ತಿರುವ ವಾಸಸ್ಥಾನಗಳಲ್ಲಿ ಶ್ರೀ ರಂಗ ಒಂದೆಂದು

'ವಿಣ್ಣಹರಂ, ವೆಃಕಾ, ವಿರಿತಿರೈ ನೀರ್ ವೇಂಗಡಂ,
ಮಣ್ನಹರಂ ಮಾಮಾಡಂ ವೇಳುಕ್ಕೈ, ಮಣ್ಣಹತ್ತ

ತೆನ್‌ಕುಡಂದೈ ತೇನ್‌ಆರ್ ತಿರುವರಂಗಂ' (ಮೂ.ತಿ. 62) ಎಂಬಲ್ಲಿ ಅನುಭವಿಸಿದ್ದಾರೆ. ಜೇನುಗಳು ಮೊರೆಯುವ ತೋಟಗಳುಳ್ಳ ಶ್ರೀರಂಗ ಕ್ಷೇತ್ರವೆಂದು ಅವರು ವರ್ಣಿಸಿದ್ದಾರೆ.

ತಿರುಮಳಿಶೈ ಆಳ್ವಾರ್ರವರು ನಾನ್ಮುಹನ್ ತಿರುವಂದಾದಿಯಲ್ಲಿ 3, 30, 36, 60 ನೆಯ ಪಾಶುರಗಳಲ್ಲಿಯೂ ತಿರುಚ್ಚಂದ ವಿರುತ್ತದಲ್ಲಿ 2, 49, 50, 51, 52, 53, 54, 55, 93, 119 ಈ ಪಾಶುರಗಳಲ್ಲಿಯೂ ಶ್ರೀರಂಗನಾಥನನ್ನು ಸ್ತೋತ್ರ ಮಾಡಿದ್ದಾರೆ. 'ಅರಂಗಂ ಮೇಯದುವುಂ ಯಾನ್ ಅರಿಂದವಾರು ಯಾರ್ ಅರಿವಾರ್'(ನಾ.ತಿ. 3)'ಶ್ರೀರಂಗ ಕ್ಷೇತ್ರದಲ್ಲಿ ಸ್ವಾಮಿ ಬಂದು ಪವಡಿಸಿದುದನ್ನು ನಾನು ತಿಳಿದ ಹಾಗೆ ಯಾರು ತಿಳಿಯಬಲ್ಲರು?'

'ಅವನ್ ಎನ್ನೈ ಆಳಿ ಅರಂಗತ್ತು ಅರಂಗಿಲ್
ಅವನ್ ಎನ್ನೈ ಎಯ್‌ದಾಮಲ್ ಕಾಪ್ಪಾನ್-ಅವನ್ ಎನ್ನದು
ಉಳ್ಳತ್ತು ನಿನ್ರಾನ್ ಇರುಂದಾನ್ ಕಿಡಕ್ಕುಮೇ
ವೆಳ್ಳತ್ತು ಅರವಣೈಯಿನ್ ಮೇಲ್' (ನಾ.ತಿ. 30) 'ಶ್ರೀರಂಗಕ್ಷೇತ್ರ ದಲ್ಲಿ ಶಯನಿಸಿರುವ ಆ ಶ್ರೀರಂಗನಾಥನು ನನ್ನನ್ನು ಆಳುವವನು. ಆ ಶ್ರಿಯಃ ಪತಿಯು ಸಂಸಾರವೆಂಬ ನಾಟಕಶಾಲೆಯನ್ನು ನಾನು ಪ್ರವೇಶಿಸದಂತೆ ನನ್ನನ್ನು ರಕ್ಷಿಸುತ್ತಾನೆ. ನನ್ನ ಮನಸ್ಸಿನಲ್ಲಿ ನಿಂತಿರುವವನೂ ಕುಳಿತಿರುವವನೂ ಆದ ಆ ಶ್ರೀ ರಂಗನಾಥನು ಕ್ಷೀರಾಬ್ಧಿಯಲ್ಲಿ ಆದಿಶೇಷನ ಶಯನದ ಮೇಲೆ ಶಯನಿಸುತ್ತಾನೆಯೇ ?

'ಸ್ವಪ್ರಯತ್ನದಿಂದಲೇ ಪಡೆಯಲಿಚ್ಛಿಸುವವರಿಗೆ ದುರ್ಲಭವಾದ ವಸ್ತುವಾಗಿರುವ ಶ್ರೀ ರಂಗನಾಥನೇ, 'ಯಾರಾದರೂ ನನಗೆ ಆಳಾಗುವರೇ' ಎಂದು ಹುಡುಕುತ್ತಾ ತಿರುಗುತ್ತಿರುವವನೇ, ನಿನ್ನ ಶ್ರೀ ಪಾದಗಳನ್ನು ಕಂಡು ಸೇವಿಸಬೇಕೆಂದು ತಿರುಗುತ್ತಿರುವ ನನ್ನ ಸ್ವಭಾವವನ್ನು ಎಂದೆಂದೂ ತಿಳಿಯುವವನಾಗು. ನಿನ್ನನ್ನು ಪಡೆಯಬೇಕೆಂಬ ಆಶೆಯುಳ್ಳ ಮನಸನ್ನು ಎಂದೂ ನಾನು ಬಿಡೆನು'- ಎಂದು ಕೆಳಗಿನ ಪಾಶುರದಲ್ಲಿ ಹೇಳುತ್ತಾರೆ.

'ಆಳ್ ಪಾರ್‌ತ್ತು ಉಳ್ಳಿತರುವಾಯ್ ಕಂಡು ಕೊಳ್ ಎನ್ರು ನಿನ್
ತಾಳ್ ಪಾರ್‌ತ್ತು ಉಳ್ಳಿತರುವೇನ್ ತನ್ಮೈಯೈ --ಕೇಳ್ಪಾರ್ ಕ್ಕು

ಅರುಂ ಪೊರುಳಾಯ್ ನಿನ್ರ ಅರಂಗನೇ ಉನ್ನೈ
ವಿರುಂಬುವದೇ ವಿಳ್ಳೇನ್ ಮನಂ' (ನಾ.ತಿ.60)

ತಿರುಚ್ಚಂದವಿರುತ್ತದಲ್ಲಿ ತಿರುಮಳಿಶೈಆಳ್ವಾರ್‌ರವರು

ಕೊಂಡೈಕೊಂಡ ಕೋದೈಮೀದು ತೇನುಲಾವುಕೂನಿಕೂನ್
ಉಂಡೈಕೊಂಡು ಅರಂಗವೋಟ್ಟಿ ಉಳ್‌ಮಹಿಳ್‌ಂದ ನಾದನೂರ್
ನಂಡೈಯುಂಡು ನಾರೈಪೇರ ವಾಳೈಪಾಯ ನೀಲಮೇ
ಅಂಡೈಕೊಂಡು ಕೆಂಡೈಮೇಯುಂ ಅಂದಣೀರ್ ಅರಂಗಮೇ
(ತಿರುಚ್ಚಂದವಿರುತ್ತಂ-49)

'ಶಿರಸ್ಸಿನಲ್ಲಿ ಧರಿಸಿದ ಮಾಲೆಯಲ್ಲಿ ದುಂಬಿಗಳು ಸಂಚರಿಸುತ್ತಿದ್ದ ಮಂಥರೆಯ ಗೂನಿನಲ್ಲಿ ಮಣ್ಣಿನ ಹೆಂಟೆಯನ್ನು ಎಸೆದು, ಚೆನ್ನಾಗಿ ಅಮುಕಿ ರಾಮಾವತಾರದಲ್ಲಿ ಸಂತೋಷಪಟ್ಟ ಸ್ವಾಮಿಯ ದಿವ್ಯದೇಶ ಯಾವುದೆಂದರೆ ನಾರೈಪಕ್ಷಿಯು ನಳ್ಳಿಯನ್ನುಂಡು ಮೆಲ್ಲಗೆ ನಡೆದು ಬರುವಂಥದೂ, ವಾಳೈ ಮೀನು ಇಲ್ಲೂ ಅಲ್ಲೂ ಚಿಮ್ಮುತ್ತಿರುವಂಥದೂ, ಕೆಂಡೈಮೀನು ಕುವಲಯ ವಿರುವ ಸ್ಥಳವನ್ನು ಕೋಟೆಯನ್ನಾಗಿ ಕೊಂಡು ಸಂಚರಿಸುವಂಥದೂ ಆದ ಸುಂದರವಾದ ಜಲವನ್ನುಳ್ಳ ಶ್ರೀರಂಗ ಅದು.' ಎಂದೂ,

ಪೊನ್ನಿ ಶೂಳ್‌ ಅರಂಗಮೇಯ ಪೂವೈವಣ್ಣಮಾಯ ಕೇಳ್
ಎನ್ನದಾವಿಯೆನ್ನುಂ ವಲ್‌ವಿನೈಯಿನುಳ್ಕೊಳ್ಂದೆಳ್ಂದ
ಉನ್ನಪಾದಮೆನ್ನನಿನ್‌ರ ಒಣ್‌ಶುಡರ್‌ಕ್ಕೊಳುಮಲರ್
ಮನ್ನವಂದು ಪೊಂಡುವಾಟ್ಟಂ ಇನ್ರಿ ಎಂಗುಂ ನಿನ್ರದೇ
(ತಿರುಚ್ಚಂದವಿರುತ್ತಂ-119)

'ಕಾವೇರಿಯಿಂದ ಸುತ್ತುವರಿಯಲ್ಪಟ್ಟ ಶ್ರೀರಂಗದಲ್ಲಿ ನಿತ್ಯವಾಸಮಾಡು ತ್ತಿರುವವನೂ ಅತಸೀಪುಷ್ಪದ ವರ್ಣವುಳ್ಳವನೂ ಆದ ಆಶ್ಚರ್ಯಭೂತನೇ, ನನ್ನ ಈ ವಿಜ್ಞಾಪನೆಯನ್ನು ಕೇಳು. ನನ್ನ ಆತ್ಮಾ ಎನ್ನುವ ಹಿರಿಯಪಾಪ ರಾಶಿಯಲ್ಲಿ ನಿನ್ನನ್ನು ಕುರಿತ ಅನುರಾಗವೆನ್ನುವ ಪ್ರಕಾಶವು ಮೇಲೆದ್ದು,

ನಿನ್ನ ಪಾದವೆನ್ನುವ ಸುಂದರವಾದ ಜ್ಯೋತಿರ್ಮಯವಾದ ಹೂವಿನಲ್ಲಿ ಸ್ಥಿರವಾಗಿ ಬಂದು ವ್ಯಾಪಿಸಿ, ನಿನ್ನ ವಿಭೂತಿಯಲ್ಲೆಲ್ಲಾ ಕೊರೆಯಾಗದೇ ವ್ಯಾಪಿಸಿದೆ.' ಎಂದೂ ಶ್ರೀ ರಂಗನಾಥನನ್ನು ಅನುಭವಿಸಿದ್ದಾರೆ.

ತಿರುಪ್ಪಾಣಾಳ್ವಾರ್‌ಅವರು ಶ್ರೀರಂಗನಾಥನ ದಿವ್ಯಾದ್ಭುತವಾದ ಅನುಭವದಲ್ಲಿ ಮಗ್ನರಾಗಿ ಅವನಲ್ಲೇ ಐಕ್ಯರಾದ ಮಹಾನುಭಾವರು. ಅದುವರೆಗೂ ತಮಗೆ ಅಲಭ್ಯವಾಗಿದ್ದ ಆ ಭುವನಮೋಹಕನ ದಿವ್ಯರೂಪವನ್ನು ಆ ಸ್ವಾಮಿಯ ಶ್ರೀ ಪಾದಗಳಿಂದ ಆರಂಭಿಸಿ ತಿರುಮುಡಿಯವರೆಗೂ ಅನುಭವಿಸಿ 'ಅಂಥ ಸ್ವಾಮಿಯನ್ನು ಕಂಡ ಕಣ್ಗಳು ಮತ್ತೇನನ್ನೂ ಕಾಣವು' ಎಂದು ಉದ್ಗಾರ ಹೊರಡಿಸಿ ಅವನಲ್ಲೇ ಸೇರಿಹೋದರು ಅವರು. ಅವರು ಹಾಡಿದ 'ಅಮಲನಾದಿ ಪಿರಾನ್' ದಿವ್ಯ ಪ್ರಬಂಧ ಅತ್ಯಂತ ಸಾರತಮವಾದುದಾಗಿ ಶ್ರೀ ರಂಗನಾಥನನ್ನು ಕೊಂಡಾಡುತ್ತದೆ.

'ತುಂಡವೆಣ್ ಪಿರೈಯನ್ ತುಯರ್ ತೀರ್ತವನ್ ಅಮ್ ಶಿರೈಯ
ವಂಡುವಾಳ್ ಪೊಳಿಲ್ ಶೂಳ್ ಅರಂಗನಹರ್ ಮೇಯ ಅಪ್ಪನ್'

(ಅಮಲನಾದಿಪಿರಾನ್-6)

'ಓ ಶ್ರೀರಂಗನಾಥನೇ, ಬೆಳ್ಳಗಿರುವ ಚಂದ್ರಕಲೆಯನ್ನು ಧರಿಸಿದವನ ಪಾಪವನ್ನು ಹೋಗಲಾಡಿಸಿದೆ. ಸುಂದರವಾದ ರೆಕ್ಕೆಗಳುಳ್ಳ ದುಂಬಿಗಳು ಮೊರೆಯುತ್ತಿರುವ ಹೂತೋಟಗಳಿಂದ ಸುತ್ತುವರಿಯಲ್ಪಟ್ಟಿರುವ ಶ್ರೀರಂಗ ನಗರದಲ್ಲಿ ನೆಲಸಿರುವ ತಂದೆ ನೀನು'

ಶ್ರೀರಂಗನಾಥನ ದಿವ್ಯ ಸೌಂದರ್ಯ ನನ್ನನ್ನು ವಶಪಡಿಸಿಕೊಂಡಿತು ಎಂದು ಆಳ್ವಾರ್‌ರವರು—

'ಕೈಯ್ಯಿನಾರ್ ಶುರಿಶಂಗನಲಾಳಿಯರ್ ನೀಳ್ವರೈಪೋಲ್
ಮೆಯ್ಯಿನಾರ್ ತುಲಬವಿರೈಯಾರ್ ಕಮಳ್ನೀಣ್ಮುಡಿ ಎಮ್
ಐಯ್ಯನಾರ್ ಅಣಿಯರಂಗನಾರ್ ಅರವಿನಣೈಮಿಶೈಮೇಯ
ಮಾಯನಾರ್

ಶೆಯ್ಯವಾಯ್ ಅಯ್ಯೋ ಎನ್ನೈ ಶಿಂದೈ ಕವರ್ನ್ದದುವೇ.
(ಅಮಲನಾದಿಪಿರಾನ್-7)

'ಕೈನಲ್ಲಿ ಅಂದವಾದ ಶಂಖವನ್ನೂ ಉರಿಯುವ ಚಕ್ರವನ್ನೂ ಧರಿಸಿರುವವನೂ, ದೊಡ್ಡ ಪರ್ವತವನ್ನು ಹೋಲುವ ಮೈಯುಳ್ಳವನೂ, ಕಂಪುಳ್ಳ ತುಳಸಿಯ ಮಾಲೆಯನ್ನು ಧರಿಸಿದವನೂ, ಸರ್ವೇಶ್ವರದ್ಯೋತಕವಾದ, ನೀಳವಾದ ಕಿರೀಟವನ್ನು ಧರಿಸಿರುವವನೂ, ನಮ್ಮ ತಂದೆಯಾದವನೂ ಸುಂದರವಾದ ಶ್ರೀರಂಗದಲ್ಲಿ ಆದಿಶೇಷನ ಹಾಸುಗೆಯಮೇಲೆ ಮಲಗಿರುವವನೂ ಮಾಯನ್ ಆದ ಶ್ರೀ ರಂಗನಾಥನ ಚೆಂದುಟಿ ನನ್ನ ಮನಸ್ಸನ್ನು ಪರವಶಗೊಳಿಸಿದೆ.' ಎಂಬುದಾಗಿ ಮೈಮರೆತಿದ್ದಾರೆ.

'ಮೇಘವರ್ಣನೂ ಗೋಪಾಲನಾಗಿ ಬೆಣ್ಣೆಯುಂಡ ಬಾಯವನೂ, ನನ್ನ ಮನವನ್ನು ಕದ್ದವನೂ, ಅಂಡದವರೆಲ್ಲರಿಗೂ ಒಡೆಯನೂ, ನನಗೆ ಅಮೃತನೂ, ಲೋಕಕ್ಕೆ ಆಭರಣನೂ ಆದ ಶ್ರೀ ರಂಗನಾಥನನ್ನು ಕಂಡ ಕಣ್ಣುಗಳು ಮತ್ತೊಂದನ್ನೂ ಕಾಣವು' ಎಂದು ಆಳ್ವಾರ್‌ರವರು ಅನುಪಮವಾಗಿ ಅನುಭವಿಸಿದ್ದಾರೆ.

ಪೆರಿಯಾಳ್ವಾರವರು 2-7-2, 2-7-8, 2-9-4, 2-9-11 ಮತ್ತು 3-3-2 ರಲ್ಲಿಯೂ ಹಾಗೂ 'ಮಾದವತ್ತೋನ್' 'ಮರವಡಿಯೈ ತಂಬಿಕ್ಕು' 'ತುಪ್ಪುಡೈಯಾರ್' ಎಂಬ (4-8; 4-9; 4-10;) ಮೂರು ದಶಕ ಗಳಲ್ಲಿಯೂ ಶ್ರೀರಂಗನಾಥನನ್ನು ವಿಶಿಷ್ಟವಾದ ರೀತಿಯಲ್ಲಿ ಅನುಭವಿಸಿದ್ದಾರೆ. ಶ್ರೀರಂಗದಲ್ಲಿ ತನ್ನ ಅವತಾರಗುಣ ಚೇಷ್ಟಿತಗಳೆಲ್ಲಾ ಪ್ರಕಾಶಿಸುವಂತೆ ಬಿಜಯ ಮಾಡಿಸಿರುವ ಶ್ರೀರಂಗನಾಥನನ್ನೂ ಆ ದೇಶದ ವೈಭವವನ್ನೂ ಆಳ್ವಾರ್‌ರವರು ಅನುಭವಿಸಿದ್ದಾರೆ.

ಕುನ್ರಾಡು ಕೊಳ್ಳೂಮುಹಿಲ್ ಪೋಕ್ಕುವಳ್ಳೈಹಳ್ ಪಾಕ್ಕುರೈಕಡಲ್ ಪೋಲ್
ನಿನ್ರು ಆಡು ಕಣಮಯಿಲ್ ಪೋಲ್ ನಿರಮುಡೈಯ ನೆಡುಮಾಲೂರ್
'ಕಪ್ಪಾದ ನೀರನ್ನುಂಡು ಬೆಟ್ಟದ ನೆತ್ತಿಯಮೇಲೆ ವಿಶ್ರಮಿಸಿದ ಮೇಘ

ದಂತೆ ತಂಪನ್ನೂ, ಕನ್ನೈದಿಲೆಯನ್ನು ಹೋಲುವ ಪ್ರಕಾಶವನ್ನೂ, ಘೋಷಿಸುತ್ತಿರುವ ಸಮುದ್ರದಂತೆ ನೀಲವರ್ಣವನ್ನೂ, ಸಂತೋಷದಿಂದ ನಿಂತು ಆಡುವ ನವಿಲುಗಳ ತೇಜಸ್ಸನ್ನೂ, ಪೂರ್ಣವಾದ ಸೌಂದರ್ಯವನ್ನೂ ಹೊಂದಿ ಈ ಸೌಂದರ್ಯವನ್ನು ಆಶ್ರಿತರಿಗೆ ಕೊಡುವ ನಿರತಿಶಯ ವ್ಯಾಮೋಹವನ್ನು ಉಳ್ಳ ಶ್ರೀರಂಗನಾಥನು ನಿತ್ಯವಾಸಮಾಡುವ ದಿವ್ಯಸ್ಥಳ ಆದು.'

ಶಿರುವಾಳುಂ ಪುಳ್ಳಾಳನ್, ಮಣ್ಣಾಳನ್, ಶೆರುಚ್ಚೆಯ್ಯನಾಂದಕಮೆನ್ನುಂ
ಒರುವಾಳನ್, ಮರೈಯಾಳನ್, ಓಡಾದ ಪಡೈಯಾಳನ್,
ವಿಳ್ಳಾಕ್ಕೈಯಾಳನ್,
ಇರವಾಳನ್ ಪಹಲಾಳನ್, ಎನ್ನೈಯಾಳನ್, ಏಳ್ಳುಲಹಪ್ಪೆರುಂ
ಪುರವಾಳನ್
ತಿರುವಾಳನ್ ಇನಿತಾಹ ತಿರುಕ್ಕಣ್ಗಳ್ ವಳರ್ಹಿನ್ರ ತಿರುವರಂಗಮೇ
(4-9-10)

'ಜೊತೆಯನ್ನಪೇಕ್ಷಿಸದೆ ತಾನೇ ಯುದ್ಧಮಾಡಬಲ್ಲ ಗುರುತ್ಮಂತನನ್ನು ಆಳುವವನೂ, ಲೀಲಾವಿಭೂತಿಯನ್ನಾಳುವವನೂ, ಆಶ್ರಿತವಿರೋಧಿಗಳ ಮೇಲೆ ಪರಾಕ್ರಮ ತೋರುವುದೂ ನಂದಕವೆಂಬ ಹೆಸರನ್ನುಳ್ಳದೂ ಆದ ಅನುಪಮವಾದ ಕತ್ತಿಯನ್ನು ಧರಿಸಿದವನೂ, ನಾಲ್ಕು ವೇದಗಳನ್ನು ಆಳುವವನೂ, ಯುದ್ಧದಲ್ಲಿ ಬೆನ್ನು ತೋರಿಸದೆ ಇರುವ ಪರಿಕರವನ್ನುಳ್ಳವನೂ, ಹಿರಿಮೆಯುಳ್ಳ ಔದಾರ್ಯವನ್ನುಳ್ಳವನೂ, ರಾತ್ರಿ ಹಗಲುಗಳೆಂಬ ಕಾಲಗಳಿಗೆ ನಿರ್ವಾಹಕನಾದವನೂ, ನನ್ನನ್ನು ಆಳುವವನೂ, ಸಪ್ತಲೋಕಗಳೆಂಬುವ ಹಿರಿಯ ಕ್ಷೇತ್ರವನ್ನಾಳುವವನೂ, ಶ್ರೀ ದೇವಿಯನ್ನು ದಿವ್ಯಮಹಿಷಿಯಾಗಿ ಹೊಂದಿದವನೂ ಆದ ಸ್ವಾಮಿಯು ಮನಸ್ಸಿನಲ್ಲುಂಟಾದ ಪ್ರೀತಿಯೊಡನೆ ಶಯನಿಸಿರುವ ದಿವ್ಯಕ್ಷೇತ್ರವು ಶ್ರೀರಂಗಸ್ಥಲ.'

ಪರಿಶುದ್ಧವಾಗಿ ಒಗೆದ ವಸ್ತ್ರಗಳನ್ನು ಧರಿಸಿದವರೂ ಪವಿತ್ರವಾದ ವೇದವನ್ನು ತಮಗೆ ನಿರೂಪಕವಾಗಿ ಉಳ್ಳವರೂ ಆದ ಭಾಗವತರು ಗಂಗೆಗಿಂತಲೂ ಪವಿತ್ರವಾದ ಕಾವೇರಿಯಲ್ಲಿ ಗುಂಪುಗುಂಪಾಗಿ ಬಂದು ಸ್ನಾನಮಾಡುವರು.

Funding: Tattva Heritage Foundation,Kolkata. Digitization: eGangotri.



ಹೂಗಳಿಂದ ಸ್ರವಿಸುವ ಮಕರಂದದಿಂದ ಸುವಾಸಿತವಾದ ಕಾವೇರಿ ಅದು -- 'ಪೂದಿಲ್‌ವೈತ್ತ ತೇನ್ ಶೊರಿಯುಂ ಪುನಲರಂಗವೆನ್ಪದುವೇ'.

(ಪೆ. ತಿ. 4-8-1)

'ಕುರವರುಂಬ ಕೋಂಗಲರ ಕುಯಿಲ್ ಕೂವುಂ ಕುಳಿರ್ ಪೊೞಿಲ್ ಶೂೞ್ ತಿರುವರಂಗಂ'(ಪೆ.ತಿ. 4-8-5); 'ಕುಗವಪುಷ್ಪಗಳು ಬಿರಿದಿರಲು ಕೋಂಗುಗಳು ಅರಳಿರಲು ಕೋಗಿಲೆಗಳು ಸಂತೋಷದಿಂದ ಕೂಗುತ್ತಿರುವ ತಂಪಾದ ತೋಪುಗಳಿಂದ ಸುತ್ತುವರಿಯಲ್ಪಟ್ಟಶ್ರೀರಂಗ'.

ತೇ ನ್ಯೊಡುತ್ತಮಲರ್ ಶೋಲೈ ತಿರುವರಂಗಂ' (ಪೆ. ತಿ.4-8-4),— 'ಜೇನು ಎಂದೂ ಕುಂದದ ಹೂಗಳನ್ನುಳ್ಳ ತೋಪುಗಳಿಂದ ಪರಿವೃತವಾದ ಶ್ರೀರಂಗ'; 'ಯಾೞ್ ಇನ್ ಇಶೈವಂಡಿನಂಗಳ್ ಆಳವುಮ್ ವೈಕ್ಕುಂ ಅರಂಗ ಮೇ' (ಪೆ.ತಿ. 4-8-6) ವೀಣೆಯ ನಾದದಂತೆ ಮಧುರವಾದ ಗಾನ ಮಾಡುವ ದುಂಬಿಗಳ ಹಿಂಡುಗಳು 'ತೆನ ತೆನ' ಎಂದು ಹಾಡುತ್ತಿರುವ ಶ್ರೀರಂಗ; 'ತಳ್ರುಪ್ಪು ಅರಿಯು ಶಂದನಂಗಳ್ ತಡಂ ವರೈವಾಯ್ ಈರ್ತುಕೊಂಡು ತೆಳ್ರುಪ್ಪುಡೈಯ ಕಾವಿರಿ ವಂದು ಅಡಿತೊೞುಂ ಶೀರ್ ಅರಂಗಂ' (ಪೆ. ತಿ. 4-8-7) 'ದೊಡ್ಡ ಬೆಟ್ಟದಲ್ಲಿ ಬೆಳೆದುದರ ಕಾರಣ ಒಬ್ಬರಿಬ್ಬರಿಂದ ತಬ್ಬಿ ಹಿಡಿಯುವುದಕ್ಕಾಗದಿರುವ ಚಂದನವೃಕ್ಷಗಳನ್ನು ಬೇರೊಡನೆ ಕಿತ್ತು ಎಳೆದು ಕೊಂಡು ಬಂದು, 'ಇದನ್ನು ಒಪ್ಪಿಸಿಕೊಂಡು ಕೃಪೆ ಮಾಡಬೇಕು' ಎಂದು ಹೇಳುವಂತೆ ಧ್ವನಿಸುತ್ತಿರುವ ಕಾವೇರಿ ನದಿಯು ಬಂದು ಶ್ರೀಪಾದಗಳನ್ನು ಸೇವಿಸುವಂತೆ ಇರುವ ಹಿರಿಮೆಯುನ್ನುಳ್ಳ ಶ್ರೀರಂಗ'.

'ಎಲ್ಲಿಯಂಬೋದು ಇರುಶಿರೈ ವಂಡು ಎಂಬೆರುಮಾನ್ ಕುಣಂಪಾಡಿ ಮಲ್ಲಿಕೈ ವೆಣ್ ಶಂಗೂದುಂ ಮದಿಳ್ ಅರಂಗಂ' (ಪೆ.ತಿ. 4-8-8) 'ದೊಡ್ಡರೆಕ್ಕೆಯುಳ್ಳ ದುಂಬಿ ಸಂಧ್ಯಾಕಾಲದಲ್ಲಿ ನಮ್ಮ ಸ್ವಾಮಿ ಶ್ರೀರಂಗನಾಥನ ದಿವ್ಯಗುಣಗಳನ್ನು ಹಾಡಿಕೊಂಡು ಮಲ್ಲಿಗೆ ಹೂವೆಂಬುವ ಬಿಳಿಯಶಂಖವನ್ನು ಊದುತ್ತಿರುವ ತೋಪುಗಳನ್ನೂ ಪ್ರಾಕಾರಗಳನ್ನೂ ಹೊಂದಿರುವ ಶ್ರೀರಂಗ.'

ಶಾಸ್ತ್ರೋಕ್ತವಾದ ರೀತಿಯಲ್ಲಿ ಅಲ್ಲಿನ ಶ್ರೀ ವೈಷ್ಣವರು ಶ್ರೇಷ್ಠವಾದ ಮೂರು ಅಗ್ನಿಗಳನ್ನು ಬೆಳೆಸುವವರಾಗಿ ಅತಿಥಿಗಳಿಗೆ ಆದರ ತೋರುತ್ತಾರೆ. ವೇದತಾತ್ಪರ್ಯವನ್ನರಿತ ಅವರು ಶ್ರೀ ರಂಗನಾಥನನ್ನು ಅನುಭವಿಸುವ ದಿವ್ಯ ಸ್ಥಳ ಅದು. ಎಲ್ಲೆಲ್ಲಿಯೂ ಕೆಂದಾವರೆಗಳೂ ನೀಲೋತ್ಪಲಗಳೂ ಎದುರೆದುರಾಗಿ ವಿಕಸಿಸಿ ಭಗವಂತನ ಮುಖಮಂಡಲದ ಕಾಂತಿಯನ್ನೂ ದೇಹ ಕಾಂತಿಯನ್ನೂ ಸೂಚಿಸುತ್ತವೆ. 'ತಿರುಮುಕಮಾಯ್ ಶೆಂಗಮಲಂ ತಿರು ನಿರಮಾಯ್ ಕರುಂಕುವಳೈ ಪೊರುಮುಕಮಾಯ್ ನಿನ್ರಲರುಂ ಪುನಲರಂಗ ಮೆನ್ಬದುವೇ' (ಪೆ.ತಿ. 4-8-3) ಎಲ್ಲೆಲ್ಲಿಯೂ ದಟ್ಟವಾದ ತಂಪಾದ ತೋಪುಗಳು. ಅವುಗಳಲ್ಲಿ ಮಕರಂದ ಭರಿತವಾದ ಕುಸುಮಗಳು. ಇಂಥ ಸುಂದರ ಸನ್ನಿವೇಶದಲ್ಲಿರುವುದು ಆ ದಿವ್ಯ ಕ್ಷೇತ್ರ. ಇಂಥ ಸುಂದರವೂ ಪವಿತ್ರವೂ ಆದ ದಿವ್ಯಕ್ಷೇತ್ರದಲ್ಲಿ ಶ್ರೀರಂಗನಾಥನು ಯೋಗ ನಿದ್ರೆಯಲ್ಲಿ ಪವಡಿಸಿದ್ದಾನೆ.

'ಆಶ್ರಯಿಸಿದವರನ್ನು ರಕ್ಷಿಸಬಲ್ಲ ಸಾಮರ್ಥ್ಯವುಳ್ಳ ನಿನ್ನನ್ನು ನಾನು ಆಶ್ರಯಿಸುವುದಾದರೂ ನನ್ನ ಇಂದ್ರಿಯಗಳೂ ಮನಸ್ಸೂ ಶಿಥಿಲವಾದಾಗ ನೀನು ನನಗೆ ಜೊತೆಯಾಗಿರಬೇಕೆಂಬುದಕ್ಕಾಗಿ. ನಾನು ನಿನ್ನನ್ನೇ ರಕ್ಷಕನನ್ನಾಗಿ ಹೊಂದಿ ಸೇರಿದ್ದೇನೆ. ನೀನು ಗಜೇಂದ್ರನ ದುಃಖವನ್ನು ಕಳೆದ ಆಶ್ಚರ್ಯವನ್ನು ಕಂಡು ನಿನ್ನಲ್ಲಿ ಶರಣಾಗಿದ್ದೇನೆ. 'ಆ ಆನೆಯು ದುಃಖ ಬಂದಾಗ ನೆನೆದಂತೆ ನೀನೂ ನನ್ನನ್ನೂ ಸ್ಮರಿಸಿಕೋ' ಎಂದು ಹೇಳಬೇಡ. ತ್ರಿಕರಣದೋಷಗಳಿಂದ ಉಂಟಾಗುವ ಆ ಮರಣ ದೆಶೆಯಲ್ಲಿ ನಿನ್ನನ್ನು ನಾನು ನೆನೆಯಲಾರೆ. ಅದಕ್ಕೆ ಪ್ರತಿಯಾಗಿ ಕರಣಕಳೇಬರಗಳು ಚೆನ್ನಾಗಿರುವ ಈ ಕಾಲದಲ್ಲಿಯೇ ನಿನ್ನನ್ನು ನಾನು ರಕ್ಷಣೆಗಾಗಿ ಬೇಡುತ್ತಿದ್ದೇನೆ. ಶ್ರೀರಂಗ ಕ್ಷೇತ್ರದಲ್ಲಿ ಆದಿಶೇಷನ ಶಯನದ ಮೇಲೆ ನೀನು ಮಲಗಿರುವುದು ಆಶ್ರಯಿಸಿದವರನ್ನು ರಕ್ಷಿಸುವುದಕ್ಕೇ ಅಲ್ಲವೇ ?' ಎಂದು ಕೆಳಗಿನ ಪಾಶುರದಲ್ಲಿ ಬೇಡಿದ್ದಾರೆ.

'ತುಪ್ಪುಡೈಯಾರ್ ಅಡೈವದೆಲ್ಲಾಂ ಶೋರ್ವಿಡತ್ತು ತುಣೈಯಾವರೆನ್ರೇ
ಒಪ್ಪಿಲೇನಾಹಿಲುಂ ನಿನ್ನಡೈಂದೇನ್ ಆನೈಕ್ಕು ನೀ
ಅರುಳ್ ಶೆಯ್ ದವೈಯಾಲ್
ಎಯ್ಪ್ಪು ಎನ್ನೈ ವಂದು ನಲಿಯುಂಬೋದು ಅಂಗೇದು ನಾನುನ್ನೈ
ನಿನೈಕ್ಕಮಾಟ್ಟೇನ್
ಅಪ್ಪೋದೈಕ್ಕು ಇಪ್ಪೋದೇ ಶೊಲ್ಲಿವೈತ್ತೇನ್
ಅರಂಗತ್ತರವಣೈಪಳ್ಳಿಯಾನೇ' (4-10-1)

ಕುಲಶೇಖರಾಳ್ವಾರವರು ಹಾಡಿರುವ ದಿವ್ಯಪ್ರಬಂಧದ ಮೊದಲ ಮೂರು ದಶಕಗಳಲ್ಲಿ ಶ್ರೀ ರಂಗನಾಥನ ಅನುಸಂಧಾನವನ್ನು ಮಾಡಿದ್ದಾರೆ (ಪೆರುಮಾಳ್ ತಿರುಮೊಳಿ 1, 2, 3) ಎಂಟನೆಯ ದಶಕದ ಹತ್ತನೆಯ ಪಾಶುರದಲ್ಲಿ 'ಯಾವರುಂ ವಂದು ಅಡಿವಣಂಗ ಅರಂಗನಹರ್ ತುಯಿನ್ರವನೇ' ಎಂದು ಶ್ರೀ ರಂಗನಾಥನನ್ನು 'ಎಲ್ಲರೂ ಬಂದು ಪಾದಸೇವೆ ಮಾಡುವುದಕ್ಕಾಗುವಂತೆ ಶ್ರೀ ರಂಗದಲ್ಲಿ ಶಯಿನಿಸಿದವನೇ' ಎಂದು ಸ್ತುತಿಸಿದ್ದಾರೆ. ಕುಲಶೇಖರಾಳ್ವಾರ್ರವರ ಅನುಭವ ವಿಶಿಷ್ಟವಾದುದು. ಮುಕ್ತರಿಗೆ ಭಗವದನುಭವವುಂಟಾಗುವುದೆಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಅದು ದೇಶಾಂತರದಲ್ಲಿ ಹಾಗೂ ಕಾಲಾಂತರದಲ್ಲಿ ಆಗುವುದು. ಆ ಷ್ಟು ವಿ ಲಂಬ ವ ನ್ನು ಸಹಿಸುವುದಕ್ಕಾಗದ ಆಳ್ವಾರ್ರವರು 'ನನ್ನ ಕಣ್ಮಣಿಯಾದ ಶ್ರೀರಂಗನಾಥನನ್ನು ಎಂದು ನಾನು ಸೇವಿಸಿ ಆನಂದಿಸಿಯೇನೋ ?' ಎಂದು ಹಂಬಲಿಸಿದ್ದಾರೆ.

'ಅನಂದನ್ ಎನ್ನುಂ ಅಣಿವಿಳಂಗುಂ ಉಯರ್ವೆಳ್ಳೈ ಅಣೈಯ್ಮೇವಿ ತಿರು ಅರಂಗಂ ಪೆರುನಹರುಳ್ ತೆಳ್ ನೀರ್ ಪೊನ್ನಿತಿರೈ ಕ್ಕೈಯಾಲ್ ಅಡಿವರುಡ . ಪಳ್ಳಿಕೊಳ್ಳುಂ ಕರುಮಣಿಯೈ ಕೋಮಳತ್ತೈ ಎನ್ ಕಣ್ ಇಣೈಹಳ್ ಕಂಡುಕೊಂಡು ಕಳಿಕ್ಕುಂ ನಾಳ್ ಎನ್ರುಕೊಲ್'

(ಪೆರುಮಾಳ್ ತಿರುಮೊಳಿ 1-1)

'ಅನಂತನೆಂಬ ಹೆಸರುಳ್ಳವನಾಗಿ ಸುಂದರವಾಗಿ ಬೆಳಗುವ ಉತ್ತುಂಗ

ಪಾಂಡರವಾದ ಶಯನದಲ್ಲಿ ನೆಲಸಿ, ಶ್ರೀರಂಗನಗರದಲ್ಲಿ ಸ್ವಚ್ಛವಾದ ತೀರ್ಥವನ್ನುಳ್ಳ ಕಾವೇರಿಯೂ ಅಲೆಗಳೆಂಬುವ ಕೈಗಳಿಂದ ಶ್ರೀ ಪಾದಗಳನ್ನು ಒತ್ತುವಂತೆ, ಶಯಿನಿಸಿರುವ ನೀಲಮಣಿನಿಭನೂ, ಕೋಮಲವಾದ ದಿವ್ಯ ಮಂಗಳ ವಿಗ್ರಹ ಯುಕ್ತನೂ ಆದ ಶ್ರೀ ರಂಗನಾಥನನ್ನು ನನ್ನೆರಡು ಕಣ್ಗಳೂ ಸಂದರ್ಶಿಸಿ ಆನಂದಿಸುವ ಕಾಲ ಯಾವಾಗ ಬಂದಿತೋ ?'

ಆಳ್ವಾರ್ರವರು 'ಯಾವಾಗ ನಾನು ಶ್ರೀ ರಂಗನಾಥನನ್ನು ಸಂದರ್ಶಿಸಿ ಸ್ತುತಿಸಿಯೇನು ? ಯಾವಾಗ ನಾನು ಆ ಶ್ರೀ ರಂಗನಾಥನ ದಾಸರೊಡನೆ ಕೂಡಿಯೇನು ? ಯಾವಾಗ ನಾನು ಅವನ ಶ್ರೀಪಾದಗಳಿಗೆ ಶುದ್ಧವಾದ ಹೊಸ ಹೂಗಳನ್ನರ್ಪಿಸಿ ಅರ್ಚಿಸುವೆನೋ ? ಯಾವಾಗ ನಾನು ಆ ಸ್ವಾಮಿಯ ಪಾದಗಳ ಮೇಲೆ ನನ್ನ ಶಿರಸ್ಸನ್ನು ಇಟ್ಟು ನಮಿಸುವೆನು ? ಸಾಗರವರ್ಣನೂ, ಕಮಲನೇತ್ರನೂ ಆದ ಸ್ವಾಮಿಯನ್ನು ಕಂಡು ನಾನು ಕರಗಿ ಹೋಗುವುದು ಯಾವಾಗಲೋ ? ಕಣ್ಗಳಲ್ಲಿ ಆನಂದ ಬಾಷ್ಪವನ್ನು ಸುರಿಸುವಂತೆ ಆ ಆಶ್ಚರ್ಯ ಚೇಷ್ಟಿತನನ್ನು ನಾನು ಕಂಡು ಅನುಭವಿಸುವುದು ಯಾವಾಗ ?' ಎಂದೆಂದು ಕಾತರಗೊಂಡಿದ್ದಾರೆ.

'ಕೋಲಾರ್'ನ್ದ ನೆಡುಂ ಶಾರ್ಙ್ಗಮ್ ಕೂನ್'ನಲ್ ಶಂಗಂ
ಕೊಲೈ ಆಳಿ ಕೊಡುಂತಂಡು ಕೊತ್ತ ಒಳ್'ವಾಳ್
ಕಾಲ್ ಆರ್'ನ್ದಗತಿಕ್ಕರುಡನೆನ್ನುಂ ವೆನ್ರಿ
ಕಡುಂ ಪರವೈ ಇವೈ ಅನೈತ್ತುಂ ಪುರಮ್ ಶೂಳ್ ಕಾಪ್ಪ
ಶೇಲಾರ್'ನ್ದ ನೆಡುಂ ಕಳನಿ.ಶೋಲೈಶೂಳ್'ನ್ದ
ತಿರುವರಂಗತ್ತರವಣೈಯಿಲ್ ಪಳ್ಳಿಕೊಳ್ಳುಂ
ಮಾಲೋನೈ ಕಂಡು ಇನ್ಬಕ್ಕಲವಿಯೆಯ್'ದಿ
ವಲ್ವಿನೈಯೇನ್ ಎನ್ರುಕೊಲೋ ವಾಳುನಾಳೇ'

(ಪೆರುಮಾಳ್ ತಿರುಮೊಳಿ 1-8)

'ಬಾಣಗಳೊಡನೆ ಕೂಡಿದ ಶಾರ್ಙ್ಗವೆನ್ನುವ ದೊಡ್ಡ ಬಿಲ್ಲೂ, ಹೊಮ್ಮಿದ ನಲ್ಮೆಯುಳ್ಳ ಶ್ರೀ ಪಾಂಚಜನ್ಯವೂ, ಶತ್ರುನಾಶಕವಾದ ಶ್ರೀ ಸುದರ್ಶನವೂ,

ಶತ್ರುಗಳಿಗೆ ಹಿಂಸೆಯನ್ನುಂಟು ಮಾಡುವ ಕೌಮೋದಕಿ ಎನ್ನುವ ಗದೆಯೂ ಜಯಪ್ರದವಾದುದೂ ಪ್ರಕಾಶಿಸುವುದೂ ಆದ ನಂದಕವೆನ್ನುವ ಕತ್ತಿಯೂ, ವಾಯು ವೇಗಕ್ಕಿಂತ ಮಿಗಿಲಾದ ವೇಗವುಳ್ಳ ಗರುಡನೆಂಬ ಹೆಸರುಳ್ಳ ಪಕ್ಷಿ ರಾಜನೂ–ಹೀಗೆ ಇವರೆಲ್ಲರೂ ನಾಲ್ಕು ಕಡೆಯೂ ಬಳಸಿ ಕಾದುಕೊಂಡಿರಲಾಗಿ, ಮತ್ಸ್ಯಗಳಿಂದ ತುಂಬಿದ ವಿಶಾಲವಾದ ಗದ್ದೆಗಳೂ ತಂಪಾದ ತೋಪುಗಳೂ ಸುತ್ತಲೂ ಬಳಸಿರುವ ಶ್ರೀರಂಗದಲ್ಲಿ ಆದಿಶೇಷನ ಶಯನದ ಮೇಲೆ ಶಯಿನಿಸಿರುವ ಸರ್ವಾಧಿಕನಾದ ಶ್ರೀ ರಂಗನಾಥನನ್ನು ತೀವ್ರವಾದ ಪಾಪ ಮಾಡಿದ ನಾನು ಕಣ್ಣಾರ ಕಂಡು ನಿರತಿಶಯಾನಂದಯುಕ್ತನಾಗುವಂತೆ ಸಂಶ್ಲೇಷಿಸಿ ಉಜ್ಜೀವಿಸುವ ಕಾಲ ಯಾವಾಗಲೋ ?'

ಶ್ರೀರಂಗನಾಥನಲ್ಲಿ ಭಕ್ತಿಯನ್ನುಳ್ಳ ಭಾಗವತರಿಗೆ ದಾಸ್ಯಮಾಡಲು ನನ್ನ ಮನಸ್ಸು ಆಶಿಸುತ್ತದೆ ಎಂದು ಹೇಳಿ ಕುಲಶೇಖರಾಳ್ವಾರ್‌ರವರು ಭಾಗವತ ನಿಷ್ಠೆಯನ್ನು ಎರಡನೆಯ ತಿರುಮೊಳಿಯಲ್ಲಿ ಪ್ರತಿಪಾದಿಸಿದ್ದಾರೆ. ತಾವು ಭಗವದ್ವಿಷಯಚಿಂತೆಯಲ್ಲಿ ವಿಮುಖರಾದವರೊಡನೆ ಸೇರುವುದಿಲ್ಲವೆಂದು ಹೇಳಿ ಶ್ರೀರಂಗನಾಥನ ವಿಷಯದಲ್ಲಿಯೇ ತಮಗೆ ಹುಚ್ಚೇರಿದೆ ಎಂದು ಹೇಳುತ್ತಾರೆ.

'ಎಂಬಪತ್ತಾರಲ್ಲಾರೊಡುಂ ಕೂಡಲನ್
ಉಂಬರ್ ವಾೞ್ವೈ ಒನ್ರಾಹ ಕರುದಿಲನ್
ತಂಬಿರಾನ್ ಅಮರರ್‌ಕ್ಕು ಅರಂಗನಹರ್
ಎಂಬಿರಾನುಕ್ಕು ಎೞುಮೈಯುಂ ಪಿತ್ತನ್'

(ಪೆರುಮಾಳ್ ತಿರುಮೊಳಿ-3-6)

'ನನ್ನಹಾಗೆ ಅನನ್ಯ ಪ್ರಯೋಜನರಾಗಿಲ್ಲದವರೊಡನೆ ನಾನು ಸೇರುವುದಿಲ್ಲ. ದೇವತೆಗಳ ಸ್ವರ್ಗಾದಿ ಭೋಗಗಳನ್ನು ಒಂದು ಪುರುಷಾರ್ಥವೆಂದು ನೆನೆಯುವುದಿಲ್ಲ. ನಿತ್ಯಸೂರಿಗಳಿಗೆ ಸ್ವಾಮಿಯಾಗಿ ಶ್ರೀ ರಂಗ ಕ್ಷೇತ್ರದಲ್ಲಿ ಸಂಸಾರಿಗಳಿಗೂ ಸುಲಭವಾಗಿ ನನಗೆ ಉಪಕಾರಕನಾಗಿರುವ ಶ್ರೀರಂಗನಾಥನ ವಿಷಯದಲ್ಲಿ ಕಾಲತತ್ತ್ವವಿರುವವರೆಗೂ ನಾನು ಹುಚ್ಚೇರಿದವನಾಗಿದ್ದೇನೆ".

ತಿರುಮಂಗೈ ಆಳ್ವಾರ್ರವರು ಶ್ರೀ ರಂಗನಾಥನನ್ನು ತಮ್ಮ ದಿವ್ಯಪ್ರಬಂಧಗಳಲ್ಲಿ ಅನುಪಮವಾದ ರೀತಿಯಲ್ಲಿ ಸ್ತೋತ್ರಮಾಡಿದ್ದಾರೆ. ಪೆರಿಯತಿರುಮೊಳಿಯಲ್ಲಿ ಐದನೆಯ ಪತ್ತಿನಲ್ಲಿ ಐದುದಶಕಗಳಲ್ಲಿಯೂ (5-4,5-5,5-6, 5-7, 5-8) ಮತ್ತು ಅದೇ ತಿರುಮೊಳಿಯ ಇತರ ಭಾಗಗಳಲ್ಲಿ 1-8-2, 3-7-6, 6-6-9, 7-3-4, 8-2-7, 9-9-2, 11-3-7, 11-8-8 ಬಿಡಿಪದ್ಯಗಳಲ್ಲಿಯೂ, ತಿರುಕ್ಕುರುಂದಾಂಡಹಂನಲ್ಲಿ 7, 12, 13 ಮತ್ತು 19ನೆಯ ಪಾಶುರಗಳಲ್ಲಿಯೂ, ತಿರುನೆಡುಂದಾಂಡಹಂನಲ್ಲಿ 10, 11, 12, 14, 18, 19, 23, 24, 25ನೇ ಪಾಶುರಗಳಲ್ಲಿಯೂ, ಶಿರಿಯ ತಿರುಮಡಲ್ ಮತ್ತು ಪೆರಿಯತಿರುಮಡಲ್ ಗಳಲ್ಲಿಯೂ ಶ್ರೀರಂಗನಾಥನನ್ನು ಕೊಂಡಾಡಿದ್ದಾರೆ. ಇವುಗಳಲ್ಲಿ ಶ್ರೀ ರಂಗಕ್ಷೇತ್ರದ ಪ್ರಾಕೃತಿಕ ಸೌಂದರ್ಯವೇ ಮೊದಲಾದವನ್ನೂ ಶ್ರೀ ರಂಗನಾಥನ ದಿವ್ಯಾದ್ಭುತರೂಪಗುಣಾದಿಗಳನ್ನೂ ಅವನ ಅವತಾರ ಚೇಷ್ಟಿತಗಳನ್ನೂ ಮನಮುಟ್ಟುವಂತೆ ವರ್ಣಿಸಿದ್ದಾರೆ.

'ಆ ಶ್ರೀ ರಂಗವಾದುದು ಶ್ರೀಗಂಧದ ತುಂಡುಗಳನ್ನೂ ನವರತ್ನಗಳನ್ನೂ ಕೊಚ್ಚಿಕೊಂಡು ಬಂದು ಹರಿಯುವ ತೀರ್ಥವನ್ನುಳ್ಳ ಕಾವೇರಿ ನದಿಯಿಂದಲೂ ಸಂಧ್ಯಾಕಾಲದಂಥ ಹೊಂಬಣ್ಣವುಳ್ಳ ಗದ್ದೆಗಳಿಂದಲೂ ಸುತ್ತುವರಿಯಲ್ಪಟ್ಟಿರುವುದು. ತನ್ನ ನಾಭಿಯಲ್ಲಿ ಬ್ರಹ್ಮನನ್ನು ಸೃಜಿಸಿದವನೂ ಪ್ರಳಯಕಾಲದಲ್ಲಿ ಲೋಕಗಳನ್ನೆಲ್ಲಾ ಉಂಡವನೂ ನಮ್ಮ ಕುಲನಾಥನೂ ನಿತ್ಯಸೂರಿಗಳ ನಿರ್ವಾಹಕನೂ ಆದ ಶ್ರೀ ರಂಗನಾಥನು ನಿತ್ಯವಾಸ ಮಾಡುವ ಕ್ಷೇತ್ರ ಅದು'. ಈ ಭಾವ ಕೆಳಗಿನ ಪಾಶುರದಲ್ಲಿದೆ-

'ಉಂದಿಮೇಲ್ ನಾನ್ಮುಹನ್ನೈಪಡೈತ್ತಾನ್ ಉಲಹುಂಡವನ್
ಎಂದೈ ಪೆಮ್ಮಾನ್, ಇಮೈಯೋರ್‌ಹಳ್‌ತಾದೈಕ್ಕು ಇಡಂ ಎನ್ಬರಾಲ್
ಶಂದಿನೋಡು ಮಣಿಯುಂ ಕೊೞಿಕ್ಕುಂ ಪುನಲ್ ಕಾವಿರಿ
ಅಂದಿಪೋಲುಂ ನಿರತ್ತಾರ್‌ವಯಲ್ ಶೂೞ್ ತೆನ್ ಅರಂಗಮೇ'

(ಪೆರಿಯ ತಿರುಮೊಳಿ 5-4-1)

'ವಂಡು ಪಾಡುಂ ಮದುವಾರ್ ಪುನಲ್ ವಂದು ಇೞಿ ಕಾವಿರಿ, ಅಂಡಂ

ನಾರುಂ ಪೊೞಿಲ್ ಶೂೞ್ನ್ದ ಅೞಹು ಆರ್ ತೆನ್ ಅರಂಗಂ,' 'ದುಂಬಿಗಳು ಹಾಡುತ್ತಿರುವುದೂ, ಜೇನು ಪ್ರವಹಿಸುವ ತೀರ್ಥವು ಬಂದು ಹರಿಯುವ ಕಾವೇರಿಯಿಂದಲೂ ಆಕಾಶವೆಲ್ಲಾ ಪರಿಮಳಿಸುವಂತೆ ಮಾಡುವ ತೋಪು ಗಳಿಂದಲೂ ಸುತ್ತುವರಿಯಲ್ಪಟ್ಟ ಸುಂದರವಾದ ಶ್ರೀ ರಂಗಕ್ಷೇತ್ರ ಅದು' (ಪೆ.ತಿ. 5-4-3). ಆ ಸ್ವಾಮಿ ಹೇಗಿರುವನೆಂದರೆ—'ವೈಯಮ್ ಉಂಡು ಆಲಿಲೈ ಮೇವುಂ ಮಾಯನ್ ಮಣಿನೀಳ್‌ಮುಡಿ ಪೈಕೊಳ್ ನಾಹತ್ತು ಅಣೈ ಯಾನ್ ಪಯಿಲುಂ ಇಡಂ ಎನ್‌ಬರ್' — 'ಪ್ರಳಯದಲ್ಲಿ ಭೂಮಿ ಎಲ್ಲವನ್ನೂ ನುಂಗಿ ಆಲದೆಲೆಯ ಮೇಲೆ ಶಯನಿಸುವ ಆಶ್ಚರ್ಯಶಕ್ತಿಯುಕ್ತನೂ, ರತ್ನ ಖಚಿತವಾದ ನೀಳವಾದ ಕಿರೀಟವನ್ನು ಧರಿಸಿದವನೂ, ಹರಡಿದ ಹೆಡೆಗಳುಳ್ಳ ಆದಿಶೇಷನನ್ನು ಹಾಸುಗೆಯನ್ನಾಗಿ ಹೊಂದಿದವನೂ ಆದ ಸ್ವಾಮಿಯು ನಿತ್ಯ ವಾಸಮಾಡುವ ಸ್ಥಳ ಇದು.' (ಪೆ.ತಿ. 5-4-2)

'ಪೊಯ್‌ವಣ್ಣಂ ಮನತ್ತು ಅಹತ್ತಿ ಪುಲನೈಂದುಂ ಶೆಲವೈತ್ತು
ಮೆಯ್‌ವಣ್ಣಂ ನಿನೈಂದವರ್ಕು ಮೆಯ್ಯ್ ನಿನ್ರ ವಿತ್ತಕನೈ
ಮೈ ವಣ್ಣಂ ಕರುಮುಹಿಲ್ ಪೋಲ್ ತಿಹೞ್‌ವಣ್ಣಂ ಮರತಕತ್ತಿನ್
ಅವ್ವಣ್ಣವಣ್ಣನೈ ಯಾನ್ ಕಂಡದು ತೆನ್ನರಂಗತ್ತೇ'
(ಪೆ. ತಿ. 5-6-9)

'ಪ್ರಕೃತಿ ಮತ್ತು ಪ್ರಾಕೃತಗಳನ್ನು ಮನಸ್ಸಿನಿಂದ ದೂರಮಾಡಿ ಪಂಚೇಂದ್ರಿಯಗಳನ್ನೂ ಮನಸ್ಸಿನಿಂದ ಹೊರದೂಡಿ ತನ್ನನ್ನು ನಿಜವಾಗಿ ಯಾರು ಚಿಂತಿಸುವರೋ ಅವರಿಗೆ ತನ್ನ ಸ್ವರೂಪವನ್ನು ಇದ್ದುದಿದ್ದಹಾಗೆ ತೋರಿಸಿಕೊಡುವ ಆಶ್ಚರ್ಯಭೂತನೂ, ಅಂಜನದಂತಹ ಬಣ್ಣವನ್ನೂ ಕಾಳ ಮೇಘದ ಹಾಗೂ ಮರತಕದ ಕಾಂತಿಯನ್ನೂ ತನ್ನ ವರ್ಣವನ್ನಾಗಿ ಹೊಂದಿ ದವನೂ ಆದ ಸ್ವಾಮಿಯನ್ನು ನಾನು ಕಂಡದು ಸುಂದರವಾದ ತೀರ್ಥವನ್ನುಳ್ಳ ಶ್ರೀರಂಗದಲ್ಲಿ.'

'ತಿಳಿಯಾಗಿ ಹರಿಯುವ ಎಳೆನೀರಿನ ಮಧುವನ್ನು ಪಾನಮಾಡಿ ಮತ್ಸ್ಯಗಳು ಆನಂದಿಸಿ ಮದೋನ್ಮತ್ತವಾಗಿ ಸಂಚರಿಸುವ ಸ್ಥಳ ಶ್ರೀರಂಗ' ಎಂದು 'ತೆಳ್ ಊರುಂ ಇಳತೆಂಗಿನ್‌ತೇರಲ್ ಮಾಂದಿ ಶೇಲ್ ಉಹಳುಂ ತಿರು

Funding: Tattva Heritage Foundation,Kolkata. Digitization: eGangotri.



ಅರಂಗಂ' (ತಿರುನೆಡುಂದಾಂಡಹಂ 23) ಎಂಬಲ್ಲಿ ವರ್ಣಿಸಿದ್ದಾರೆ.

ಶಿರಿಯ ತಿರುಮಡಲ್‌ನಲ್ಲಿ 'ಅರಾಮುಂ ಶೂಳ್ನ್ದ ಅರಂಗಂ' ಎಂದೂ ಪೆರಿಯ ತಿರುಮಡಲ್‌ನಲ್ಲಿ 'ಮುನ್ನುಂ ಆರಂಗತ್ತು ಎನ್ ಮಾಮಣಿಯೈ' ಎಂದೂ ಈ ದಿವ್ಯಕ್ಷೇತ್ರದ ಅನುಸಂಧಾನ ಮಾಡಿದ್ದಾರೆ. 'ತಿರುಕ್ಕುರುಂದಾಂಡಹಂ' ಪ್ರಬಂಧದಲ್ಲಿ ಅನುಭವಿಸಿರುವುದು ಹೀಗೆ–

'ಆವಿಯೈ ಅರಂಗಮಾಲೈ ಅಳ್ಳುಕ್ಕುಪಂಬು ಎಚ್ಚಿಲ್ ವಾಯಾಲ್
ಶೂಯ್‌ಮೈ ಇಲ್ ತೊಂಡನೇನ್ ನಾನ್ ಶೊಲ್ಲಿನೇನ್ ತೊಲ್ಲೈ ನಾಮಂ
ಪಾವಿಯೇನ್ ಪಿಳ್ಳೈತ್ತವಾರೆನ್ರು ಅಂಜಿನೇರ್ಕು ಅಂಜಲ್ ಎನ್ರು,
ಕಾವಿಪ್ಪೋಲ್ ವಣ್ಣರ್‌ವಂದು ಎನ್ ಕಣ್ಣುಳೇ ತೋನ್ರಿನಾರೇ'

(ತಿರುಕ್ಕುರುಂದಾಂಡಹಂ–12)

'ಲೋಕಕ್ಕೆಲ್ಲಾ ಆತ್ಮನಾದವನೂ ಶ್ರೀರಂಗದಲ್ಲಿ ನೆಲಸಿರುವವನೂ ಆದ ಸ್ವಾಮಿಯನ್ನುದ್ದೇಶಿಸಿ ಕೊಳೆಯ ದೇಹದಿಂದಲೂ ಎಂಜಲುಬಾಯಿಯಿಂದಲೂ ಕೂಡಿದವನೂ ಅಪರಿಶುದ್ಧನೂ ಆದ ನಾನು ಅನಾದಿಯಾದ ಅವನ ಶ್ರೀನಾಮ ಗಳನ್ನು ಉಚ್ಚರಿಸಿದೆನು. 'ಪಾಪಿಯಾದ ನಾನು ಏನು ಪಾಪ ಮಾಡಿದೆನೋ' ಎಂದು ಅನುತಾಪ ಪಡುತ್ತಿದ್ದ ನನಗೆ ಅಭಯವನ್ನಿತ್ತು ಅತಸೀಕುಸುಮಾ ವಭಾಸನಾದ ಸ್ವಾಮಿ ನನ್ನ ಕಣ್ಣುಗಳ ಒಳಗೆ ತೋರಿಬಂದನು.'

**ತೊಂಡರಡಿಪ್ಪೊಡಿ ಆಳ್ವಾರ್‌ರವರು** ರಂಗನಾಥನಲ್ಲೇ ಏಕ ಭಕ್ತಿ ಯುಳ್ಳ ಮಹಾನುಭಾವರು. ಇವರು ಹಾಡಿರುವ ಎರಡು ದಿವ್ಯ ಪ್ರಬಂಧ ಗಳಾದ 'ತಿರುಮಾಲೈ' ಮತ್ತು 'ತಿರುಪ್ಪಳ್ಳಿ ಎಳ್ಳುಚ್ಚಿ' ಎಂಬುವು ಪೂರ್ಣವಾಗಿ ಶ್ರೀ ರಂಗನಾಥನ ಸ್ತುತಿಗೇ ಮೀಸಲಾಗಿವೆ. 'ತಿರುಮಾಲೈ' ದಿವ್ಯಪ್ರಬಂಧದಲ್ಲಿ 45 ಪಾಶುರಗಳಿವೆ. ಇವುಗಳಲ್ಲಿ ಆಳ್ವಾರ್‌ರವರು ಶ್ರೀ ರಂಗನಾಥನ ದಿವ್ಯಾದ್ಭುತ ಸೌಂದರ್ಯವನ್ನೂ ಆ ದಿವ್ಯ ಕ್ಷೇತ್ರದ ಆಶ್ಚರ್ಯಕರವಾದ ಸನ್ನಿವೇಶವನ್ನೂ ಬಹಳ ಸುಂದರವಾಗಿ ವರ್ಣಿಸಿದ್ದಾರೆ. ಶ್ರೀ ರಂಗನಾಥನು ಶಯನಿಸಿರುವ ಸನ್ನಿವೇಶವನ್ನು ಆಳ್ವಾರ್‌ರವರು ಕೆಳಗಿನ ಪಾಶುರಗಳಲ್ಲಿ ಚಿತ್ರಿಸಿದ್ದಾರೆ.

ಇನಿತಿರೈತ್ತಿವಳ್ಳೈ ವೋದ ಎರಿಯುಮ್ ತಣ್ಪರವೈಮೀದೇ
ತನಿ ಕಿಡಂವರಶುಶೆಯ್ಯುಂ ತಾಮರೈಕ್ಕಣ್ಣನವ್ಮಾನ್
ಕನಿ ಇರುಂದನ್ನೈಯ ಶೆವ್ವಾಯ್ ಕಣ್ಣನೈ ಕಂಡ ಕಣ್ಗಳ್
ಪನಿ ಅರುಂಬುದಿರುಮಾಲೋ ಎನ್ ಶೆಯ್'ಹೇನ್ ಪಾವಿಯೇನೇ'
(ತಿರುಮಾಲೈ-18)

ಕುಡದಿಶೈ ಮುಡಿಯೈವೈತ್ತು ಕುಣದಿಶೈ ಪಾದಂ ನೀಟ್ಟಿ
ವಡದಿಶೈ ಪಿನ್ಬುಕಾಟ್ಟಿ ತೆನ್ ದಿಶೈ ಇಲಂಗೈನೋಕ್ಕಿ
ಕಡಲ್ ನಿರಕ್ಕಡವುಳೆನ್ದೈ ಅರವಣೈತುಯಿಲುಮಾಕಂಡು
ಉಡಲೆನಕ್ಕು ಉರುಹುಮಾಲೋ ಎನ್ ಶೆಯ್‌ಹೇನ್ ಉಲಹತ್ತೀರೇ'
(ತಿರುಮಾಲೈ-19)

'ಅಲೆಗಳಿಂದಾದ ಹನಿಗಳು ಪ್ರಿಯವಾಗಿ ಬಂದು ಬೀಳಲು, ವರ್ಧಿಸುವ ತಂಪಾದ ಸಮುದ್ರದ ಹಾಗೆ ಇರುವ ಕಾವೇರಿಯಲ್ಲಿ ತಾನೇ ಬಂದು ಶಯನಿಸಿ ಅರಸಾಳುವವನೂ, ಪುಂಡರೀಕಾಕ್ಷನೂ, ನಮಗೆ ಪ್ರಭುವೂ, ತೊಂಡೆ ಹಣ್ಣಿನಂತೆ ಚೆಲುವಾದ ಅಧರವನ್ನುಳ್ಳ ಕಣ್ಣನೂ ಆದ ಸ್ವಾಮಿಯನ್ನು ಸಂದರ್ಶಿಸಿದ ನನ್ನ ಕಣ್ಣುಗಳು ತಂಪಾದ ಆನಂದ ಬಾಷ್ಪಗಳನ್ನು ಸುರಿಸುತ್ತಿವೆ. ಆ ಕಣ್ಣೀರು ಮರೆಸುವುದರಿಂದ ಕಣ್ಣಾರೆ ನಿನ್ನನ್ನು ಕಂಡು ಆನಂದಿಸುವ ಭಾಗ್ಯ ಹೊಂದಲಿಲ್ಲ ನಾನು'

'ಲೋಕದಲ್ಲಿರುವವರೇ, ಸಾಗರದಂತೆ ನೀಲವರ್ಣವನ್ನುಳ್ಳ ಎನ್ನ ಸ್ವಾಮಿಯು ಪಶ್ಚಿಮ ದಿಕ್ಕಿನಲ್ಲಿ ತನ್ನ ತಲೆಯನ್ನಿಟ್ಟುಕೊಂಡೂ ಪೂರ್ವದಿಕ್ಕಿಗೆ ಪಾದಗಳನ್ನೂ ನೀಡಿಯೂ, ಉತ್ತರ ದಿಕ್ಕಿಗೆ ಬೆನ್ನನ್ನು ಮಾಡಿಕೊಂಡೂ ದಕ್ಷಿಣ ದಿಕ್ಕಿನಲ್ಲಿ ವಿಭೀಷಣನ ಲಂಕೆಯನ್ನು ನೋಡಿಕೊಂಡು ಆದಿಶೇಷನ ಶಯನದಲ್ಲಿ ಯೋಗನಿದ್ರೆಮಾಡುವ ಸ್ಥಿತಿಯನ್ನು ಕಾಣುವುದರಿಂದ ನನ್ನ ಮೈ ದ್ರವಿಸುತ್ತದೆ. ನಾನೇನು ಮಾಡಬಲ್ಲೆ ?'

ಶ್ರೀ ರಂಗನಾಥನು ಶಯನಿಸಿರುವ ಆ ಕ್ಷೇತ್ರದ ಸೊಬಗನ್ನು ಆಳ್ವಾರವರು ಕೆಳಗಿನ ಪಾಶುರದಲ್ಲಿ ವರ್ಣಿಸಿದ್ದಾರೆ.

'ವಂಡಿನ ಮುರಲುಂ ಶೋಲೈ ಮಯಿಲಿನ ಮಾಲಂ ಶೋಲೈ
ಕೊಂಡಲ್ ಮೀದಣವುಮ್ ಶೋಲೈ ಕುಯಿಲಿನಂ ಕೂವುಂ ಶೋಲೈ

ಅಂಡರ್‌ಹೋನ್ ಅಮರುಂ ಶೋಲ್ಲೈ ಅಣಿತಿರುವರಂಗಮೆನ್ನಾ
ಮಿಂಡರ್‌ಪಾಯ್‌ನ್ದುಣ್ಣುಂ ಶೋತ್ತೈ ವಿಲಕ್ಕಿ ನಾಯ್‌ಕ್ಕಿಡುಮಿನೀರೇ'

(ತಿರುಮಾಲೈ 14)

'ದುಂಬಿಗಳ ಹಿಂಡುಗಳು ಝೇಂಕರಿಸುತ್ತಿರುವ ತೋಪುಗಳನ್ನೂ, ನವಿಲುಗಳ ಗುಂಪುಗಳು ನರ್ತಿಸುತ್ತಿರುವ ತೋಪುಗಳನ್ನೂ, ಮೇಘಗಳು ಮೇಲೆ ಬಂದು ಸೇರುವಂತ ತೋಪುಗಳನ್ನೂ, ಕೋಗಿಲೆಗಳ ಹಿಂಡು ಒಂದನ್ನೊಂದು ಕೂಗುತ್ತಿರುವ ತೋಪುಗಳನ್ನೂ, ದೇವರಿಗೆ ನಾಯಕನಾದ ಶ್ರೀರಂಗನಾಥನು ನಿತ್ಯ ವಾಸಮಾಡುವ ತೋಪುಗಳನ್ನೂ ಆಭರಣವಾಗಿ ಹೊಂದಿರುವ ಶ್ರೀರಂಗ ಎಂದು ಹೇಳಲಾರದ ಮೂರ್ಖರು ಮೇಲೆ ಬಿದ್ದು ಊಟಮಾಡುವ ಆಹಾರವನ್ನು ಕಿತ್ತು ನೀವು ನಾಯಿಗಳಿಗೆ ಹಾಕಿ.'

ಶ್ರೀರಂಗನಾಥನನ್ನು ಬಿಟ್ಟು ನನಗೆ ಸ್ವರ್ಗ ಲೋಕವೂ ಬೇಕಾಗಿಲ್ಲ ಎಂದು ಆಳ್ವಾರ್‌ರವರು

'ಪಚ್ಚೈಮಾಮಲೈ ಪೋಲ್ ಮೇನಿ ಪವಳವಾಯ್ ಕಮಲಚ್ಚೆಂಗಣ್
ಅಚ್ಚುತಾ ಅಮರರೇರೇ ಆಯರ್ ತಮ್ ಕೋಳುನ್ದೇ ಎನ್ನುಂ
ಇಚ್ಚುವೈ ತವಿರ ಯಾನ್ ಪೋಯ್ ಇಂದಿರಲೋಕಮಾಳುಂ
ಅಚ್ಚುವೈ ಪೆರಿನುಂ ವೇಂಡೇನ್ ಅರಂಗಮಾನಹರುಳಾನೇ'

(ತಿರುಮಾಲೈ-2)

'ಶ್ರೀರಂಗ ಕ್ಷೇತ್ರದಲ್ಲಿರುವವನೇ, ಹಸಿರು ಬಣ್ಣದ ದೊಡ್ಡ ಪರ್ವತದಂತಹ ದೇಹವನ್ನೂ ಹವಳದಂತಹ ಅಧರವನ್ನೂ ಕೆಂದಾವರೆಯಂತಹ ಕಣ್ಣುಗಳನ್ನೂ ಉಳ್ಳ ಅಚ್ಯುತನೇ, ನಿತ್ಯಸೂರಿಗಳ ಪ್ರಭುವೇ, ಗೋಪಕುಲದ ಚಿಗುರೇ, ಎಂದೆಂದು ನನ್ನ ಬಾಯಿಯಿಂದ ಹೇಳುವುದರಿಂದಾದ ಈ ಅಮೃತದ ಸವಿಯನ್ನು ಬಿಡುವಂತೆ ನಾನು ಇಲ್ಲಿಂದ ಪರಮಪದಕ್ಕೆ ಹೋಗಿ ಆ ಲೋಕವನ್ನು ಆಳುವ ಅನುಭವರುಚಿಯನ್ನು ಪಡೆಯುವಂತಿದ್ದರೂ ನಾನದನ್ನು ಬಯಸುವುದಿಲ್ಲ.' ಎಂಬಲ್ಲಿ ಹೇಳಿದ್ದಾರೆ. ಶ್ರೀ ರಂಗನಾಥನನ್ನು ಬಿಟ್ಟು ಬೇರೆ ದೇವರಿಲ್ಲವೆಂದು ಆಳ್ವಾರ್‌ರವರು 'ಅವನಲ್ಲಾಲ್ ದೈವಮಿಲ್ಲೈ' ಎಂದು ಹೇಳಿದ್ದಾರೆ.

'ತಿರುಪ್ಪಳ್ಳಿ ಎಳ್ಳುಚ್ಚಿ'ಯಲ್ಲಿ ಆಳ್ವಾರ್‌ರವರು ಶ್ರೀರಂಗನಾಥನನ್ನು ಯೋಗನಿದ್ರೆಯಿಂದ ಎಬ್ಬಿಸಿ ಸುಪ್ರಭಾತ ಹಾಡಿದ್ದಾರೆ. ಪ್ರಾತಃಕಾಲದ ಸನ್ನಿವೇಶವನ್ನು ಬಹಳ ಸುಂದರವಾಗಿ ಇಲ್ಲಿ ವರ್ಣಿಸಿದ್ದಾರೆ. 'ಶ್ರೀ ರಂಗನಾಥನೇ ನಿದ್ದೆಯಿಂದೇಳು' ಎಂದು ಹಾಡಿದ್ದಾರೆ ಈ ಪ್ರಬಂಧದಲ್ಲಿ.

**ಆಂಡಾಳ್** ತನ್ನ ನಾಯ್‌ಚ್ಚಿಯಾರ್ ತಿರುಮೊಳಿಯ ಹನ್ನೊಂದನೆಯ ದಶಕದಲ್ಲಿ ಶ್ರೀ ರಂಗನಾಥನನ್ನು ಅನುಪಮವಾಗಿ ಕೊಂಡಾಡಿದ್ದಾಳೆ. ಶ್ರೀ ರಂಗನಾಥನನ್ನೇ ವರಿಸಿ ಅವನಲ್ಲೇ ಐಕ್ಯಳಾದ ಮಹಾನುಭಾವೆ ಇವಳು

'ಆ ಸರ್ವೇಶ್ವರನು ಮೆಚ್ಚಿಕೊಳ್ಳುತ್ತಿರುವ ತನ್ನ ಶ್ರೀ ಹಸ್ತದಲ್ಲಿರುವ ಶಂಖದೊಡನೆ ನಾನು ಸಂತೋಷಿಸುತ್ತಿರುವ ನನ್ನ ಕೈಯ್ಯಲ್ಲಿರುವ ಶಂಖದ ಬಳೆಗಳು ಹೋಲಲಾರವೋ? ಕ್ರೂರವಾದ ಮುಖಗಳನ್ನುಳ್ಳ ಆದಿಶೇಷನ ಮೇಲೆ ಶಯನಿಸಿರುವ ಆ ತಿರುವರಂಗರು ನನ್ನ ಮುಖವನ್ನೂ ನೋಡುತ್ತಿಲ್ಲ. ಕಷ್ಟ ಕಷ್ಟ ! ಅವರನ್ನು ನೆನೆಯಲೂ ಭಯವಾಗುತ್ತಿದೆ.' (ನಾ. ತಿ. 11-1)

'ಎಳ್ಳಿಲುಡೈಯ ಅಮ್ಮನೈಮೀರ್ ಎನ್ ಅರಂಗತ್ತು ಇನ್ ಅಮುದರ್
ಕುಳ್ಳಲಳ್ಳಹರ್ ವಾಯಳ್ಳಹರ್ ಕಣ್ಣಳ್ಳಹರ್ ಕೊಪ್ಪೂಳ್ಳಿಲ್
ಎಳ್ಳುಕಮಲಪ್ಪೂವಳ್ಳಹರ್ ಎಮ್ಮಾನಾರ್ ಎನ್ನುಡೈಯ
ಕಳ್ಳಲ್ ವಳೈಯೈತ್ತಾಮುಮ್ ಕಳ್ಳಲ್ ವಳೈಯೇ ಆಕ್ಕಿನರೇ'

(ನಾ. ತಿ. 11-2)

'ಸೌಂದರ್ಯವನ್ನುಳ್ಳ ತಾಯಿಯರೇ, ನನಗೆ ಪರಮ ಭೋಗ್ಯವಾದ ಅಮೃತವಾದವರಾಗಿ ಶ್ರೀರಂಗದಲ್ಲಿರುವವರೂ, ಚೆಲುವಾದ ತಲೆಗೂದಲುಳ್ಳವರೂ, ಚೆಂದುಟಿಯನ್ನುಳ್ಳವರೂ, ಸುಂದರವಾದ ಕಣ್ಣುಗಳನ್ನುಳ್ಳವರೂ ನಾಭಿಯಲ್ಲಿ ಸುಂದರವಾಗಿ ಎದ್ದಿರುವ ತಾವರೆ ಹೂವನ್ನುಳ್ಳವರೂ ಆದ ನನ್ನ ಸ್ವಾಮಿಯಾದ ಶ್ರೀ ರಂಗನಾಥನು ನನ್ನ ಕಾಲು ಬಳೆಯನ್ನು, ವಿರಹದ ಕಾರಣ ಕಳಚಿ ಹೋಗುವ ಬಳೆಯನ್ನಾಗಿ ಮಾಡಿಬಿಟ್ಟರು.'

'ಪೈಪ್ಪೊರುಳ್‌ಹಳ್ ಮುನ್ನಮೇ ಕೈಕ್ಕೊಂಡಾರ್ ಕಾವಿರಿನೀರ್
ಶೆಯ್ ಪುರಳ ಓಡುಂ ತಿರುವರಂಗಂ ಶೆಲ್ವನಾರ್

ಎಪ್ಪೊರುಳ್ಕ್ಕುಂ ನಿನ್ರು ಆರ್‌ಕ್ಕುಂ ಎಯ್‌ದಾದು, ನಾನ್ಮರೈಯಿನ್
ಶೊಲ್ ಪೊರುಳಾಯ್ ನಿನ್ರಾರ್ ಎನ್‌ಮೆಯ್‌ಪ್ಪೊರುಳುಂ
ಕೊಂಡಾರೇ' (ನಾ.ತಿ. 11–6)

'ಬಾಲ್ಯದಲ್ಲಿಯೇ ಕೈಯಲ್ಲಿದ್ದ ಬಳೆ ಮೊದಲಾದವನ್ನು ಕೈಕೊಂಡವರಾಗಿ, ಕಾವೇರಿಯ ಪ್ರವಾಹವು ಗದ್ದೆಗಳಲ್ಲಿ ಹೊರಳುವಂತೆ ಪ್ರವಹಿಸುತ್ತಿರುವ ಶ್ರೀರಂಗದಲ್ಲಿ ಇರುವ ಶ್ರೀಮಾನ್ ಆಗಿ ಎಲ್ಲ ವಸ್ತುಗಳಿಗೂ ಸುಲಭನಾಗಿ ನಿಂತಿರುವವನೂ, ಜ್ಞಾನಿಗಳಿಗೂ ಎಟುಕದಂತೆ ನಾಲ್ಕು ವೇದಗಳಿಂದ ಪ್ರತಿಪಾದ್ಯನಾಗಿರುವವನೂ ಆದ ಶ್ರೀ ರಂಗನಾಥನು ನನ್ನ ಆತ್ಮಾತ್ಮೀಯಗಳೆರಡನ್ನೂ ಕೈಕೊಂಡುಬಿಟ್ಟನು.'

**ನಮ್ಮಾಳ್ವಾರ್‌ರವರು** ತಮ್ಮ ತಿರುವಿರುತ್ತಂ ಪ್ರಬಂಧದ 28ನೆಯ ಪಾಶುರದಲ್ಲಿಯೂ ತಿರುವಾಯ್ಮೊಳಿ ದಿವ್ಯಪ್ರಬಂಧದಲ್ಲಿ 'ಕಂಗಲುಂ ಪಹಲುಂ' ಎಂಬ ದಶಕದಲ್ಲಿಯೂ (ತಿ. ಮೊ. 7-2) ಶ್ರೀ ರಂಗನಾಥನನ್ನು ಅನುಸಂಧಾನ ಮಾಡಿದ್ದಾರೆ. 'ಕಂಗಲುಂ ಪಹಲುಂ' ಎಂಬ ದಶಕದಲ್ಲಿ ನಮ್ಮಾಳ್ವಾರ್‌ರವರು ನಾಯಕೀಭಾವವನ್ನು ತಳೆದಿದ್ದಾರೆ. ಪರಾಂಕುಶ ನಾಯಕಿಯ ತಾಯಿ ತನ್ನ ಮಗಳ ಅವಸ್ಥೆಯನ್ನು ಶ್ರೀ ರಂಗನಾಥನಿಗೆ ನಿವೇದಿಸಿ 'ಇವಳ ವಿಷಯದಲ್ಲಿ ಏನನ್ನು ಮಾಡಬೇಕೆಂದಿದ್ದೀಯೆ ?' ಎಂದು ಆ ಶ್ರೀ ರಂಗನಾಥನನ್ನು ಕೇಳುತ್ತಾಳೆ ಈ ದಶಕದಲ್ಲಿ. 'ಶೆಮ್ ಕಯಲ್ ಪಾಯ್ ನೀರ್ ತಿರುವರಂಗತ್ತಾಯ್ ಇವಳ್ ತಿರತ್ತು ಎನ್ ಶೆಯ್‌ಹಿನ್ರಾಯ್'–'ಸ್ವಲ್ಪ ಕೆಂಬಣ್ಣವುಳ್ಳ ಮತ್ಸ್ಯಗಳೂ ಹರ್ಷ ಪ್ರಕರ್ಷದಿಂದ ಓಡಾಡುತ್ತಿರುವ ಜಲವನ್ನುಳ್ಳ ಶ್ರೀರಂಗದಲ್ಲಿರುವವನೇ, ಈ ಹೆಣ್ಣಿನ ವಿಷಯದಲ್ಲಿ ಏನನ್ನು ಮಾಡಲು ಯೋಚಿಸಿದ್ದೀಯೆ ?' ಶ್ರೀ ರಂಗಕ್ಷೇತ್ರದ ವೈಭವವನ್ನೂ ಅನೇಕಶಃ ಈ ದಶಕದಲ್ಲಿ ವರ್ಣಿಸಿದ್ದಾರೆ– 'ಎರಿನೀರ್ ತಿರುವರಂಗತ್ತಾಯ್' – 'ತರಂಗ ವಿಕ್ಷೇಪಶಾಲಿಗಳಾದ ಜಲಗಳನ್ನುಳ್ಳ ಶ್ರೀರಂಗದಲ್ಲಿ ನಿತ್ಯಸನ್ನಿಹಿತನಾದವನು', 'ತಿಣ್ಕೊಡಿಮದಿಳ್ ಶೂಳ್ ತಿರುವರಂಗತ್ತಾಯ್' – 'ಧೃಢವಾದ ಧ್ವಜಗಳಿಂದ ಅಲಂಕೃತವಾದಪ್ರಾಕಾರಗಳಿಂದಸುತ್ತುವರಿಯಲ್ಪಟ್ಟ ಶ್ರೀರಂಗದಲ್ಲಿರುವವನು'; 'ಶ್ಗೊನೀರ್ ತಿರುವರಂಗತ್ತಾಯ್' – 'ರಮಣೀಯವಾದ ಜಲಗಳನ್ನುಳ್ಳ

ಕ್ಷೇತ್ರ' ಎಂದೆಂದು.

'ನ್ಯೈಯಲ್ ಶೆಯ್‌ದೆನ್ನೈ ಮನಂ ಕವರ್‌ನ್ದಾನ್ ಎನ್ನುಂ
ಮಾಮಾಯನೇ ಎನ್ನುಂ

ಶೆಯ್ಯವಾಯ್ ಮಣಿಯೇ ಎನ್ನುಂ ತಣ್ ಪುನಲ್ ಶೂೞ್
ತಿರುವರಂಗತ್ತುಳಾಯ್ ಎನ್ನುಂ

ವೆಯ್ಯವಾಳ್ ತಂಡು ಶಂಗು ಶಕ್ಕರಂ ವಿಲ್ಲೇಂದುಂ ವಿಣ್ಣೋರ್
ಮುದಲೆನ್ನುಂ

ಪೈಗೊಳ್ ಪಾಂಬಣ್ಯೆಯಾಯ್ ಇವಳ್ ತಿರತ್ತರುಳಾಯ್ ಪಾವಿಯೇನ್
ಶೆಯಪ್ಪಾಲದುವೇ' (ತಿ.ವೊ. 7-2-6)

'ಪ್ರಣಯಿತ್ವ ಗುಣವನ್ನು ತೋರಿ ನನ್ನ ಮನಸ್ಸನ್ನು ಅಪಹರಿಸಿದನು ಎನ್ನುತ್ತಾಳೆ, ಮಹಾಶ್ಚರ್ಯಭೂತನೇ ಎನ್ನುತ್ತಾಳೆ ; ಅರುಣಾಧರವನ್ನುಳ್ಳ ನೀಲಮಣಿಯೇ ಎನ್ನುವಳು ; ತಂಪಾದ ಜಲಪ್ರವಾಹಗಳಿಂದ ಪರಿವೃತವಾದ ಶ್ರೀರಂಗದಲ್ಲಿ ನಿತ್ಯವೂ ಸನ್ನಿಹಿತನಾಗಿರುವನೇ ಎನ್ನುವಳು ; ಆಶ್ರಿತ ವಿರೋಧಿಗಳ ಬಗೆಗೆ ಉಗ್ರವಾದ ಖಡ್ಗ, ಗದೆ, ಶಂಖ, ಚಕ್ರ, ಶಾರ್ಙ್ಗ ಎಂಬವುಗಳನ್ನು ಆಶ್ರಿತ ರಕ್ಷಣಕ್ಕಾಗಿ ಧರಿಸಿಕೊಂಡಿರುವವನಾದ ನಿತ್ಯಸೂರಿ ನಿರ್ವಾಹಕನೇ ಎನ್ನುತ್ತಾಳೆ. ಫಣಗಳನ್ನು ಬಿಚ್ಚಿಕೊಂಡಿರುವ ಆದಿಶೇಷನ ಮೇಲೆ ಸುಖವಾಗಿ ಶಯಿನಿಸಿರುವವನೇ, ಇವಳ ವಿಷಯದಲ್ಲಿ ನೀನು ಕೃಪೆ ಮಾಡುತ್ತಿಲ್ಲ ! ಇವಳನ್ನು ಹೀಗೆ ಕಾಣುವುದಕ್ಕೆ ಕಾರಣವಾದ ಪಾಪವನ್ನುಳ್ಳವಳು ನಾನು !'

ಶ್ರೀರಂಗನಾಥನಲ್ಲಿ ಆಳ್ವಾರ್‌ರವರಿಗಿರುವ ಭಾವಬಂಧವನ್ನು ಇದು ಪ್ರತಿಬಿಂಬಿಸುತ್ತದೆ.



ಈ ಸ್ತೋತ್ರದ ಅನುವಾದವನ್ನು ಪ್ರಕಟಣೆ ಮಾಡುವುದಕ್ಕಾಗಿ ಉದಾರವಾಗಿ ಆರ್ಥಿಕ ನೆರವನ್ನಿತ್ತ ಶ್ರೀ ತಿರುಮಲೆ ತಿರುಪತಿ ದೇವಸ್ಥಾನದವರಿಗೆ ನಾನು ಅತ್ಯಂತ ಕೃತಜ್ಞನಾಗಿದ್ದೇನೆ. ತಿರುಮಲೆ ತಿರುಪತಿ ದೇವಸ್ಥಾನದ ನಿರ್ವಹಣಾಧಿಕಾರಿಗಳಾದ ಶ್ರೀ ಪಿ. ವಿ. ಆರ್. ಕೆ. ಪ್ರಸಾದ್ ಅವರಿಗೂ ಸಂಪಾದಕರಾದ ಶ್ರೀ ಕೆ.ಸುಬ್ಬಾರಾವ್ ಅವರಿಗೂ ನನ್ನ ಅನಂತ ಧನ್ಯವಾದಗಳು. ಹಿರಿಯರೂ ನನ್ನ ಗುರುಗಳೂ ಆದ ಶ್ರೀ ಎನ್. ರಂಗಸ್ವಾಮ್ಯಯ್ಯಂಗಾರ್ಯರು ಈ ಕೃತಿಯ ಪ್ರಕಟಣೆಗಾಗಿ ನೂರೊಂದು ರೂಪಾಯಿಗಳನ್ನು ಅನುಗ್ರಹಿಸಿ ಆಶೀರ್ವದಿಸಿದ್ದಾರೆ. ಅವರಿಗೆ ನನ್ನ ಕೃತಜ್ಞತೆಗಳು. ಈ ಕೃತಿಯ ಅಧ್ಯಯನದಲ್ಲಿ ನನಗೆ ಜೊತೆಯಾಗಿದ್ದವರು ಮಿತ್ರರಾದ ಶ್ರೀ ಲಕ್ಷ್ಮೀವರಾಹನ್ ಅವರು. ಅವರ ಸ್ನೇಹ ಮತ್ತು ಸಹವಾಸಗಳು ಈ ಅನುವಾದಕ್ಕೆ ಪ್ರೇರಣೆ ನೀಡಿದವು. ಅವರ ಉಪಕಾರವನ್ನು ನಾನು ಎಂದೂ ಮರೆಯಲಾರೆ. ಬೆಂಗಳೂರಿನ ಚಿತ್ರಾ ಪ್ರಿಂಟರ್ಸ್‌ನವರು ಈ ಕೃತಿಯನ್ನು ಅಚ್ಚುಕಟ್ಟಾಗಿ ಮುದ್ರಿಸಿ ಕೊಟ್ಟಿದ್ದಾರೆ. ಅವರಿಗೂ ನನ್ನ ವಂದನೆಗಳು.

ಸಹೃದಯರಾದ ಕನ್ನಡಿಗರು ಅತ್ಯಂತ ಭವ್ಯವಾದ ಈ ಸ್ತೋತ್ರವನ್ನು ಆದರದಿಂದ ಸ್ವಾಗತಿಸುವರೆಂದು ಆಶಿಸುತ್ತಾ ಸರ್ವಾಂತರನಾದ ಶ್ರೀರಂಗನಾಥನ ಪದಕಮಲಗಳಲ್ಲಿ ಭಕ್ತಿ ಪೂರ್ವಕವಾಗಿ ಈ ಕೃತಿಯನ್ನು ಸಮರ್ಪಿಸುತ್ತಿದ್ದೇನೆ.

ಬೆಂಗಳೂರು
15–8–1981

ಇಂತು ಸಜ್ಜನ ವಿಧೇಯ
ಎನ್. ಎಸ್. ಅನಂತರಂಗಾಚಾರ್ಯ.

ಶ್ರೀಮತೇ ವೇದಾಂತ ರಾಮಾನುಜ ಮಹಾದೇಶಿಕಾಯ ನಮಃ
ಸದ್ಬುದ್ಧಿ ಸಾಧುಸೇವೀ ಸಮುಚಿತ ಚರಿತಃ ತತ್ವಬೋಧಾಭಿಲಾಷೀ
ಶುಶೂಷು; ತ್ಯಕ್ತಮಾನಃ ಪ್ರಣಿಪತನಪರಃ ಪ್ರಶ್ನಕಾಲ ಪ್ರತೀಕ್ಷಃ
ಶಾಂತೋ ದಾಂತೋಽನವಸೂಯುಃ ಶರಣಮುಪಗತ ಶಾಸ್ತ್ರವಿಶ್ವಾಸಶಾಲೀ,

ಕೃತವಿತ್ ಮೊದಲಾದ ಶಿಷ್ಯಗುಣಸಂಪತ್ಪರಿಪೂರ್ಣರಾಗಿ ಬಾಳಿ ಬೆಳಗಿದ ಕಾರಣ ಭಗವದ್ರಾಮಾನುಜರ ಅತ್ಯಂತ ಅಂತರಂಗ ಶಿಷ್ಯ ಪದವಿಯನ್ನೇರಿದ್ದ ಶ್ರೀ ಕೂರತ್ತಾಳ್ವಾರ್‌ರವರ ತಪಃ ಫಲದಿಂದ ಅವತರಿಸಿದ ಪುತ್ರರತ್ನ ಶ್ರೀ ಪರಾಶರ ಭಟ್ಟಾರ್ಯರು ಭಗವದ್ರಾಮಾನುಜರಂತಹ ಆಚಾರ್ಯ ಗುಣಸಂಪತ್ಪರಿಪೂರ್ಣ ಮತ್ತು ಶ್ರೀ ಕೂರೇಶರಂತಹ ಶಿಷ್ಯ ಗುಣಸಂಪನ್ನರು ಅತ್ಯಂತ ವಿರಳವೆಂಬ ಸಂಪ್ರದಾಯ ನಾಣ್ನುಡಿಯನ್ನು ಸ್ಮರಿಸಬಹುದಾಗಿದೆ. ಅಖಿಲಾಂಡಕೋಟಿ ಬ್ರಹ್ಮಾಂಡ ನಾಯಕನಾದ ಶ್ರೀರಂಗರಾಜನು ತನ್ನ ದಿವ್ಯ ಗುಣಾನುಭೂತಿಯನ್ನು ದಯಪಾಲಿಸಿ ತನ್ನ ವಿಷಯವಾದ ಶ್ರೀರಂಗರಾಜಸ್ತವವೆಂಬ ಎರಡು ಶತಕಕ್ಕೂ ಮೀರಿದ ಸ್ತೋತ್ರರತ್ನವನ್ನು ಇವರ ಮುಖಾರವಿಂದದಿಂದ ಹಾಡಿಸಿಕೊಂಡು ಸಂತೋಷಿಸಿದನು. ಶ್ರೀರಂಗಕ್ಷೇತ್ರದ ದಿವ್ಯಪರಿಸರ, ಕಾವೇರೀ ನದಿಯ ಮಹತ್ವ, ಅರ್ಚಾಸಮಾಧಿಯ ಸೌಲಭ್ಯಾತಿಶಯ, ಅವತಾರ ಕಾಲದಲ್ಲಿ ಚೇತನೋಜ್ಜೀವನಾರ್ಥವಾಗಿ ತಾನು ನಡೆಸಿದ ದಿವ್ಯ ಚೇಷ್ಟಿತಗಳು ಮೊದಲಾದವುಗಳನ್ನು ಅತ್ಯಂತ ವಿಶದತಮವಾಗಿ ಸಂಶಯ ವಿಪರ್ಯಯಕ್ಕೆ ಅವಕಾಶವಿಲ್ಲದಂತೆ ಯಥಾರ್ಥವಾಗಿ ಕರುಣಿಸಿದ ಕಾರಣ ಪರಾಶರಭಟ್ಟಾರ್ಯರು ನಮ್ಮಂತಹ ಪಾಮರರೂ ಉಜ್ಜೀವಿಸುವಂತೆ ತಾನು ಅನುಭವಿಸಿದಂತೆಯೇ ಪೂರ್ವಶತಕ, ಉತ್ತರ ಶತಕವೆಂಬ ಎರಡು ಭಾಗಗಳಲ್ಲಿ ಅನುಗ್ರಹಿಸಿದ್ದಾರೆ. ಒಂದೊಂದು ಅನುಭವವೂ ತೇನುಂ, ಪಾಲುಂ, ಕನ್ನಲುಂ ಅಮುದುಂ ಎಂಬಂತೆ ಅನವರತವೂ ಬಾಯಿ ಚಪ್ಪರಿಸಿಕೊಂಡು ಅನುಭವಿಸಲು ಯೋಗ್ಯವಾದ ರೀತಿಯಲ್ಲಿದೆ ಎಂದನುಭವಿಸಿದ ಮಹನೀಯ ರೆಲ್ಲರೂ ಇದು ಅಪರ್ಯಾಪ್ತಾಮೃತವೆಂದು ಸಾರಿದ್ದಾರೆ.

ಈ ಸ್ತೋತ್ರ ಸಾಹಿತ್ಯದಲ್ಲಿ 'ಅಡಿಯೇಣ್‌ವಾಯ್‌ಮಡುತ್ತು ಪರುಹಿಕಳಿತ್ತೇನೇ' ದಾಸನು ರಸಪ್ರವಾಹದಲ್ಲಿ ಬಾಯಿಯಿಟ್ಟು ಕುಡಿದು ಆನಂದಪಟ್ಟನು ಎಂದೂ ತೊಂಡರ್ಕ್ಕಮುದುಣ್ಣ, ಶೊಲ್‌ಮಾಲೈಹಳ್‌ಶೊನ್ನೇರ್ ದಾಸರುಗಳಿಗೆ ಅಮೃತ ಪ್ರಾಶನಾರ್ಥವಾಗಿ ಅನುಭವಪೂರ್ಣ ಮಾತುಗಳ ಮುತ್ತಿನಹಾರವನ್ನು ಹೇಳಿದೆ ಎಂಬ ನಮ್ಮಾಳ್ವಾನಾರ್‌ರವರ ಶ್ರೀಸೂಕ್ತಿಯ ಅನುಷ್ಠಾನರೂಪವಾದ ದಿವ್ಯಕೃತಿ ವೇದಾಂತ ವಿದ್ವಾನ್, ವೇದಾಂತ ವಿದ್ವನ್ಮಣಿ, ದೇಶಿಕ ದರ್ಶನ ಚೂಡಾಮಣಿ, ಮಹಾ ಮಹೋಪಾಧ್ಯಾಯ, ವೈಕುಂಠವಾಸಿ ಡಾ|| ಎನ್.ಎಸ್. ಅನಂತರಂಗಾಚಾರ್ಯ ಮಹಾದೇಶಿಕರ

ಶ್ರೀರಂಗರಾಜಸ್ತವದ ಅರ್ಥ ವಿವರಣೆಯೊಂದಿಗೆ ಸಮಗ್ರ ಸರ್ವಾಂಗ ಸುಂದರವಾದ ವ್ಯಾಖ್ಯಾನ.

ಈ ಗ್ರಂಥದಲ್ಲಿ ಶ್ರೀ ಪರಾಶರಭಟ್ಟಾರ್ಯರ ಅನುಭೂತಿಯನ್ನು ಹೃದ್ಯವಾಗಿ ಸವಿದು ಅದೇ ಸವಿಯನ್ನು ಬಯಸುವ, ಸಾಮರ್ಥ್ಯವಿಲ್ಲದ ನಮ್ಮಂತಹ ಪಾಮರರಿಗೂ ದೊರಕಿಸಿಕೊಡುವ ಮಹದಾಶಯದೊಂದಿಗೆ 'ಯಾ ಪೆಟ್ರ ಇನ್ಬಂ ಪೆರುಹ ಇವ್ವೈಯಹಂ' ನಾನು ಪಡೆದ ಆನಂದವನ್ನು ಸಮಸ್ತ ಲೋಕದ ಜನರೂ ಪಡೆಯಲಿ ಎಂಬ ಉದಾರಭಾವದಿಂದ ಮೂಲದ ಅನುಭೂತಿಯನ್ನು ಧಕ್ಕೆಬರದಂತೆ ಸಾಕಷ್ಟು ವೃದ್ಧಿಪಡಿಸಿ ಕನ್ನಡಕ್ಕೆ ಭಾಷಾಂತರಿಸಿ, ಹೊರಹೊಮ್ಮುವ ಅನೇಕ ವಿಶೇಷಾರ್ಥಗಳಿಂದ ಪುಷ್ಟೀಕರಿಸಿ ಅನುಭಾವಿಗಳ ಮನಸ್ಸನ್ನು ಬಿಟ್ಟಗಲವಂತೆ ಕರುಣೆಸಿರುವ ಪರಮಪೂಜ್ಯ ಪ್ರಾತಸ್ಮರಣೀಯರಾದ ದಿ|| ಡಾ|| ಎನ್.ಎಸ್. ಅನಂತರಂಗಾಚಾರ್ಯರಿಗೆ ಏತ್ತಿ ಮನಳಳಿಲ್ ಜ್ಞಾನವಿತ್ತಕ್ಕೈ ಇರುಳಿನ್ನೈತ್ತುಂ ಮಾತ್ತಿನವರ್ಕು ಒರುಕ್ಕೈಮ್ಮಾರು ಮಾಯನುಂಕಾಣಹಿಲ್ಲಾ'' ಮನಸ್ಸಿನೊಳಗೆ ಜ್ಞಾನ ದೀಪಿಗೆಯನ್ನು ಹೊತ್ತಿಸಿ ಅಲ್ಲಿ ನೆಲೆಯಾಗಿದ್ದ ಅಜ್ಞಾನ ಅಂಧಕಾರವನ್ನು ಪರಿಪೂರ್ಣವಾಗಿ ಹೋಗಲಾಡಿಸಿದ ಆಚಾರ್ಯರ ಉಪಕಾರಕ್ಕೆ ಪ್ರತ್ಯುಪಕಾರವನ್ನು ಸರ್ವಜ್ಞನೂ ಸರ್ವಶಕ್ತನೂ ಆದ ಮಾಯಾಪಿ ಶ್ರೀಕೃಷ್ಣನೂ ಕಾಣನು ಎಂಬ ಸ್ವಾಮಿ ದೇಶಿಕರ ಶ್ರೀಸೂಕ್ತಿಯಂತೆ ಕಾಲತತ್ವವಿರುವವರೆಗೂ ಕೃತಜ್ಞತಾ ಪೂರ್ವಕ ಅನಂತ ಪ್ರಣಾಮಗಳನ್ನು ಸಲ್ಲಿಸಿದರೂ ಅವರ ಉಪಕಾರಕ್ಕೆಅದು ಎಣೆಯಾಗ ದೆಂದು ತಿಳಿದು ಅನವರತ ದಾಸ್ಯಭಾವವನ್ನು ಪಾರಂಪರ್ಯವಾಗಿ ಅನುಸಂಧಿಸುತ್ತೇವೆ.

ಈ ಗ್ರಂಥರತ್ನವನ್ನು ಪುನರ್ಮುದ್ರಿಸಿ ದಾಸರುಗಳು ಪೂಜ್ಯ ಮಾತಾಪಿತೃಗಳ ಶತಮಾನೋತ್ಸವದ ಸುಸಂದರ್ಭದಲ್ಲಿ ಶ್ರೀ ರಂಗರಾಜ ಮುಖೋಲ್ಲಾಸಾರ್ಥವಾಗಿ ದಿವ್ಯ ದಂಪತಿಗಳ ಚರಣಾರವಿಂದಗಳಲ್ಲಿಯೂ ಕಾರುಣ್ಯೈಕಾಂತಿನ ಎಂಬಂತೆ ಬಾಳುತ್ತಿರುವ ಭಕ್ತ ಶಿರೋಮಣಿಗಳ ಕರಕಮಲಗಳಲ್ಲಿಯೂ ಸಮರ್ಪಿಸಲು ಅನುಮತಿ ನೀಡಿದ ಸ್ವಾಮಿ ಕುಮಾರರುಗಳಾದ ಶ್ರೀ ಉ.ವೇ. ಶ್ರೀನಿವಾಸರಂಗಾಚಾರ್ಯಸ್ವಾಮಿ, ಶ್ರೀ ಉ.ವೇ. ನರಸಿಂಹಾಚಾರ್ಯಸ್ವಾಮಿ ಮತ್ತು ಶ್ರೀ ಉ.ವೇ. ರಘುಸ್ವಾಮಿಯವರಲ್ಲಿಯೂ ಕೃತಜ್ಞತಾಪೂರ್ವಕ ಅನಂತಾನಂತ ವಂದನೆಗಳನ್ನು ಸಮರ್ಪಿಸಿ ಹರ್ಷರಾಗಿದ್ದೇವೆ.

ಶ್ರೀಮನ್ನಾರಾಯಣ ದಾಸಚರನಾರವಿಂದರೇಣು

**ಶ್ರೀನಾಥದಾಸ ಮತ್ತು ಹೇಮಲತ, ಶ್ರೀಹರಿದಾಸ ಮತ್ತು ರಮಾಮಣಿ,**

**ರಾಧಾಕೃಷ್ಣದಾಸ ಮತ್ತು ಲಕ್ಷ್ಮೀ, ರಮೇಶದಾಸ ಮತ್ತು ತಾರಾ**

**ಮನ್ನಾರ್ ಶ್ರೀಕೃಷ್ಣ ಅಯ್ಯಂಗಾರ್ ಮತ್ತು ಶ್ರೀಮತಿ ಇಂದಿರಮ್ಮ ದಿವ್ಯ ದಂಪತಿಗಳ**

**ಪೌತ್ರ, ಪೌತ್ರಿ, ದಾಹಿತ್ರ ಪೌಹಿತ್ರಿ ಪ್ರಪೌತ್ರ, ಪ್ರಪೌತ್ರಿ ಮೊದಲಾದವರು.**

ಶ್ರೀಮತೇ ರಾಮಾನುಜಾಯ ನಮಃ

## ಪ್ರಾತರನುಸನ್ಧೇಯ ಶ್ಲೋಕದ್ವಯಂ ಶ್ಲೋತ್ರಕಯಂಚ

ಗ್ರಾಹಗ್ರಸ್ತೇ ಗಜೇನ್ದ್ರೇ ರುವತಿ ಸರಭಸಂ ತಾರ್ಕ್ಷ್ಯಮಾರುಹ್ಯ ಧಾವ ।
ನ್ವ್ಯಾಘೋರ್ಣ್ಣಮಾಲ್ಯಭೂಷಾವಸನಪರಿಕರೋ ಮೇಘಗಂ ಭೀರಘೋಷಃ ॥
ಆಭಿಬ್ರಾಣೋ ರಥಾಙ್ಗಂ ಶರಮಸಿ ಮಭಯಂ ಶಙ್ಖಚಾಪೌಸಖೇಟೌ ।
ಹಸ್ತೈಃ ಕೌಮೋದಕೀ ಮಪ್ಯವತು ಹರಿ ರಸಾ ವಂಹಸಾಂ ಸಂಹತೇ ರ್ನಃ ॥ ॥ 1 ॥

ನಕ್ರಾಕ್ರಾನ್ತೇ ಕರೀನ್ದ್ರೇ ಮುಕುಳಿತ ನಯನೇ ಮೂಲಮೂಲೇತಿಖಿನ್ನೇ ।
ನಾಹಂ ನಾಹಂ ನಚಾಹಂ ನಚ ಭವತಿ ಪುನ ಸ್ತಾದೃಶೋ ಮಾದೃಶೇಷು ॥
ಇತ್ಯೇವಂ ತ್ಯಕ್ತಹಸ್ತೇ ಸಪದಿ ಸುರಗಣೇ ಭಾವಶೂನ್ಯೇ ಸಮಸ್ತೇ ।
ಮೂಲಂ ಯತ್ಪ್ರಾದು ರಾಸೀತ್ಸದಿಶತು ಭಗವಾ ಮಂಗಳಂ ಸತತಂ ನಃ ॥ ॥ 2 ॥

ಪ್ರಾತಸ್ಮರಾಮಿ ಭವಭೀತಿ ಮಹಾರ್ತಿಶಾಂತ್ಯೈ ।
ನಾರಾಯಣಂ ಗರುಡವಾಹನ ಮಂಜನಾಭಮ್ ॥
ಗ್ರಾಹಾಭಿಭೂತ ಮದವಾರಣಂ ಮುಕ್ತಿಹೇತುಂ ।
ಚಕ್ರಾಯುಧಂ ತರುಣವಾರಿಜ ಪತ್ರನೇತ್ರಮ್ ॥ ॥ 3 ॥

ಪ್ರಾತರ್ನಮಾಮಿ ಮನಸಾ ವಚಸಾ ಚ ಮೂರ್ಧ್ನಾ ।
ಪಾದಾರವಿಂದಯುಗಳಂ ಪರಮಸ್ಯ ಪುಂಸಃ ।
ನಾರಾಯಣಸ್ಯ ನರಕಾರ್ಣವತಾರಣಸ್ಯ ।
ಪಾರಾಯಣ ಪ್ರವಣವಿಪ್ರಪರಾಯಣಸ್ಯ ॥ ॥ 4 ॥

ಪ್ರಾತರ್ಭಜಾಮಿ ಭಜತಾ ಮಭಯಂ ಕರಂ ತಂ ।
ಪ್ರಾಕ್ಸರ್ವಜನ್ಮ ಕೃತಪಾಪಭಯಾಪನುತ್ತ್ಯೈ ॥
ಯೋ ಗ್ರಾಹ ವಕ್ತ್ರಪತಿತಾಂಘ್ರಿಗಜೇಂದ್ರ ಘೋರ ।
ಶೋಕಪ್ರಣಾಶನ ಕರೋ ಧೃತಶಂಖಚಕ್ರಃ ॥ ॥ 5 ॥

ಶ್ಲೋಕತ್ರಯಮಿದಂ ಪುಣ್ಯಂ ಪ್ರಾತರುತ್ಥಾಯ ಯಃ ಪಠೇತ್ ।
ಲೋಕತ್ರಯಗುರು ಸ್ತಸ್ಮೈದದ್ಯಾದಾ ತ್ಮಪದಂ ಹರಿಃ ॥ ॥ 6 ॥

ಇತಿ ಶ್ಲೋಕದ್ವಯಂ ಶ್ಲೋಕತ್ರಯಂಚ ಸಂಪೂರ್ಣಂ

ಶ್ರೀಯೈನಮಃ

ಶ್ರೀಮತೇ ಹಯಗ್ರೀವಾಯ ನಮಃ

## ಶ್ರೀ ರಂಗನಾಥಸ್ತೋತ್ರಮ್

ಸಪ್ತಪ್ರಾಕಾರಮ್ಯೇ ಸರಸಿಜ ಮುಕುಳೋದ್ಭಾಸಮಾನೇ ವಿಮಾನೇ
ಕಾವೇರೀ ಮಧ್ಯದೇಶೇ ಫಣಿಪತಿಶಯನೇ ಶೇಷಪರ್ಯಂಕ ಭಾಗೇ ।
ನಿದ್ರಾಮುದ್ರಾಭಿರಾಮಂ ಕಟಿನಿಕಟಶಿರಃ ಪಾರ್ಶ್ವವಿನ್ಯಸ್ತಹಸ್ತಮ್
ಪದ್ಮಾಧಾತ್ರೀಕರಾಭ್ಯಾಂ ಪರಿಚಿತಚರಣಂ ರಂಗರಾಜಂ ಭಜೇಹಮ್ ॥ 1 ॥

ಕಸ್ತೂರೀ ಕಲಿತೋರ್ಧ್ವಪುಂಡ್ರತಿಲಕಂ ಕರ್ಣಾಂತಲೋಲೇಕ್ಷಣಮ್
ಮುಗ್ಧಸ್ಮೇರ ಮನೋಹರಾಧರದಳಂ ಮುಕ್ತಾಕಿರೀಟೋಜ್ಜ್ವಲಮ್ ।
ಪಶ್ಯನ್ಮಾನಸ ಪಶ್ಯತೋಹರರುಚಿಂ ಪರ್ಯಾಯ ಪಂಕೇರುಹಂ
ಶ್ರೀರಂಗಾಧಿಪತೇಃ ಕದಾನು ವದನಂ ಸೇವೇಯ ಭುಯೋಪ್ಯಹಮ್ ॥ 2 ॥

ಕದಾಹಂ ಕಾವೇರೀತಟಪರಿಸರೇ ರಂಗನಗರೇ
ಶಯಾನಂ ಭೋಗೀಂದ್ರೇ ಶತಮಖ ಮಣಿಶ್ಯಾಮಲರುಚಿಮ್ ।
ಉಪಾಸೀನಃ ಕ್ರೋಶನ್ ಮಧುಮಥನ ನಾರಾಯಣ ಹರೇ
ಮುರಾರೇ ಗೋವಿಂದೇ ತ್ಯನಿಶ ಮನುನೇಷ್ಯಾಮಿ ದಿವಸಾನ್ ॥ 3 ॥

ಕದಾಹಂ ಕಾವೇರೀ ವಿಮಲಸಲಿಲೇ ವೀತಕಲುಷೋ
ಭವೇಯಂ ತತ್ತೀರೇ ಶ್ರಮಮುಷಿ ವಸೇಯಂ ಘನವನೇ ।
ಕದಾ ವಾ ತತ್ಪುಣ್ಯೇ ಮಹತಿ ಪುಳಿನೇ ಮಂಗಲಗುಣಮ್
ಭಜೇಯಂ ರಂಗೇಶಂ ಕಮಲನಯನಂ ಶೇಷಶಯನಮ್ ॥ 4 ॥

ಪೂಗೀಕಂಠತ್ವಯಪರಿಸರಾಂ ಸ್ನಿಗ್ಧನೀರೋಪಕಂಠಾ
ಮಾವಿರ್ಮೋದ ಸ್ತಿಮಿತ ಶಕುನಾ ಮೋದಿತ ಬ್ರಹ್ಮಘೋಷಾಮ್ ।
ಮಾರ್ಗೇ ಮಾರ್ಗೇ ಪಥಿಕನಿವಹೈ ರುಚ್ಯಮಾನಾಪವರ್ಗಾಮ್
ಪಶ್ಯೇಯಂ ತ್ವಾಂ ಪುನರಪಿ ಪುರೀಂ ಶ್ರೀಮತೀಂ ರಂಗಧಾಮ್ನಃ ॥ 5 ॥

ನಜಾತು ಪೀತಾಮೃತಮೂರ್ಛಿ ತಾನಾಂ ನಾಕೌಕಸಾಂ ನಂದನವಾಟಿಕಾಸು ।
ರಂಗೇಶ್ವರ ತ್ವತ್ಪದ ಮಾಶ್ರಿತಾನಾಂ ರಥ್ಯಾಶುನಾ ಮನ್ಯತಮೋ ಭವೇಯಮ್

ಶ್ರೀರಂಗಂ ಕರಿಶೈಲ ಮಞ್ಜನಗಿರಿಂ ತಾರ್ಕ್ಷ್ಯಾದ್ರಿ ಸಿಂಹಾಚಲೇ
ಶ್ರೀ ಕೂರ್ಮಂ ಪುರುಷೋತ್ತಮಂಚ ಬದರೀನಾರಾಯಣಂ ನೈಮಿಶಮ್ ।
ಶ್ರೀಮದ್ದ್ವಾರವತೀ ಪ್ರಯಾಗ ಮಧುರಾ ಯೋಧ್ಯಾ ಗಯಾಃ ಪುಷ್ಕರಮ್
ಸಾಲಗ್ರಾಮ ಗಿರಿಂ ನಿಷೇವ್ಯ ರಮತೇ ರಾಮಾನುಜೋಽಯಂ ಮುನಿಃ ॥ 7 ॥

ತತೋನಿಕೃಷ್ಟೇ ಮಯಿಸನ್ನಿ ಕೃಷ್ಟೇ ಕಾಂ ನಿಷ್ಕೃತಿಂ ರಂಗಪತೇ ಕರೋಷಿ ।
ಅಸನ್ನಿ ಕೃಷ್ಟೇಸ್ಯ ನಿಕೃಷ್ಟ ಜಂತೋರ್ಮಿಥ್ಯಾಪವಾದೇನ ಕರೋಷಿ ಶಾಂತಿಮ್ ॥ 8 ॥

ಶ್ರೀ ರಂಗನಾಥ ಸ್ತೋತ್ರಮ್ ಸಮ್ಪೂರ್ಣಮ್

ಶ್ರೀಯೈನಮಃ

ಶ್ರೀಮತೇ ಹಯಗ್ರೀವಾಯ ನಮಃ

# ಶ್ರೀ ರಂಗನಾಥಸ್ತೋತ್ರಮ್

ಸಪ್ತಪ್ರಾಕಾರಮಧ್ಯೇ ಸರಸಿಜ ಮುಕುಳೋದ್ಭಾಸಮಾನೇ ವಿಮಾನೇ
ಕಾವೇರೀ ಮಧ್ಯದೇಶೇ ಫಣಿಪತಿಶಯನೇ ಶೇಷಪರ್ಯಂಕ ಭಾಗೇ ।
ನಿದ್ರಾಮುದ್ರಾಭಿರಾಮಂ ಕಟಿನಿಕಟಶಿರಃ ಪಾರ್ಶ್ವವಿನ್ಯಸ್ತಹಸ್ತಮ್
ಪದ್ಮಾಧಾತ್ರೀಕರಾಭ್ಯಾಂ ಪರಿಚಿತಚರಣಂ ರಂಗರಾಜಂ ಭಜೇಹಮ್ ॥ 1 ॥

ಕಸ್ತೂರೀ ಕಲಿತೋರ್ಧ್ವಪುಂಡ್ರತಿಲಕಂ ಕರ್ಣಾಂತಲೋಲೇಕ್ಷಣಮ್
ಮುಗ್ಧಸ್ಮೇರ ಮನೋಹರಾಧರದಳಂ ಮುಕ್ತಾಕಿರೀಟೋಜ್ಜ್ವಲಮ್ ।
ಪಶ್ಯನ್ಮಾನಸ ಪಶ್ಯತೋಹರರುಚಿಂ ಪರ್ಯಾಯ ಪಂಕೇರುಹಂ
ಶ್ರೀರಂಗಾಧಿಪತೇಃ ಕದಾನು ವದನಂ ಸೇವೇಯ ಭುಯೋಪ್ಯಹಮ್ ॥ 2 ॥

ಕದಾಹಂ ಕಾವೇರೀತಟಪರಿಸರೇ ರಂಗನಗರೇ
ಶಯಾನಂ ಭೋಗೀಂದ್ರೇ ಶತಮಖ ಮಣಿಶ್ಯಾಮಲರುಚಿಮ್ ।
ಉಪಾಸೀನಃ ಕ್ರೋಶನ್ ಮಧುಮಥನ ನಾರಾಯಣ ಹರೇ
ಮುರಾರೇ ಗೋವಿಂದೇ ತ್ಯನಿಶ ಮನುನೇಷ್ಯಾಮಿ ದಿವಸಾನ್ ॥ 3 ॥

ಕದಾಹಂ ಕಾವೇರೀ ವಿಮಲಸಲಿಲೇ ವೀತಕಲುಷೋ
ಭವೇಯಂ ತತ್ತೀರೇ ಶ್ರಮಮುಷಿ ವಸೇಯಂ ಘನವನೇ ।
ಕದಾ ವಾ ತತ್ಪುಣ್ಯೇ ಮಹತಿ ಪುಳಿನೇ ಮಂಗಲಗುಣಮ್
ಭಜೇಯಂ ರಂಗೇಶಂ ಕಮಲನಯನಂ ಶೇಷಶಯನಮ್ ॥ 4 ॥

ಪೂಗೀಕಂಠದ್ವಯಪರಿಸರಾಂ ಸ್ನಿಗ್ಧನೀರೋಪಕಂಠಾ
ಮಾವಿರ್ಮೋದ ಸ್ತಿಮಿತ ಶಕುನಾ ಮೋದಿತ ಬ್ರಹ್ಮಘೋಷಾಮ್ ।
ಮಾರ್ಗೇ ಮಾರ್ಗೇ ಪಥಿಕನಿವಹೈ ರುಜ್ಝ್ಯಮಾನಾಪವರ್ಗಾಮ್
ಪಶ್ಯೇಯಂ ತ್ವಾಂ ಪುನರಪಿ ಪುರೀಂ ಶ್ರೀಮತೀಂ ರಂಗಧಾಮ್ನಃ ॥ 5 ॥

ನಜಾತು ಪೀತಾಮೃತಮೂರ್ಛಿ ತಾನಾಂ ನಾಕೌಕಸಾಂ ನಂದನವಾಟಿಕಾಸು ।
ರಂಗೇಶ್ವರ ತ್ವತ್ಪದ ಮಾಶ್ರಿತಾನಾಂ ರಥ್ಯಾಶುನಾ ಮನ್ಯತಮೋ ಭವೇಯಮ್

ಶ್ರೀರಂಗಂ ಕರಿಶೈಲ ಮಞ್ಜನಗಿರಿಂ ತಾರ್ಕ್ಷ್ಯಾದ್ರಿ ಸಿಂಹಾಚಲೇ
ಶ್ರೀ ಕೂರ್ಮಂ ಪರುಷೋತ್ತಮಂಚ ಬದರೀನಾರಾಯಣಂ ನೈಮಿಶಮ್ ।
ಶ್ರೀಮದ್ದ್ವಾರವತೀ ಪ್ರಯಾಗ ಮಧುರಾ ಯೋಧ್ಯಾ ಗಯಾಃ ಪುಷ್ಕರಮ್
ಸಾಲಗ್ರಾಮ ಗಿರಿಂ ನಿಷೇವ್ಯ ರಮತೇ ರಾಮಾನುಜೋಽಯಂ ಮುನಿಃ ॥ 7 ॥

ತತೋಽನಿಕೃಷ್ಟೇ ಮಯಿಸನ್ನಿ ಕೃಷ್ಟೇ ಕಾಂ ನಿಷ್ಕೃತಿಂ ರಂಗಪತೇ ಕರೋಷಿ ।
ಅಸನ್ನಿ ಕೃಷ್ಟೇಸ್ಯ ನಿಕೃಷ್ಟ ಜಂತೋರ್ಮಿಥ್ಯಾಪವಾದೇನ ಕರೋಷಿ ಶಾಂತಿಮ್ ॥ 8 ॥

ಶ್ರೀ ರಂಗನಾಥ ಸ್ತೋತ್ರಮ್ ಸಮ್ಪೂರ್ಣಮ್

## ಶ್ರೀ ಅಪ್ರಮೇಯ ಮಂಗಳಾಷ್ಟಕಂ

ಶ್ರೀಮಾರ್ಗ ಭಕ್ತಿವಿವರ್ಧನೇ ಪ್ರತಿವರ್ಸ ದಿವ್ಯೇ ವಿಮಾನೇಚಯೋಃ
ಭಕ್ತಾನುಗ್ರಹಕಾಮ್ಯಯಾ, ವಿತನುತೇಸ್ಸೃಷ್ಟ್ಯಾದಿಕಾರ್ಸ್ವೇಚ್ಛಯಾ ॥
ಸೋಯಂ ಪದ್ಮಲತಾ ಸಹಾಯ ಮಹಿತೋ ರಾಮಾ ಪ್ರಮೇಯಾಹ್ವಯಃ
ಕುರ್ಯಾದ್ರಾಜ ವರೇಂದ್ರ, ಸಿಂಹನಗರೀ ನಾಥಃಸ್ಸದಾ ಮಂಗಳಂ ॥ 1 ॥

ಮರ್ತಂಡಾನ್ವಯಜಾತ್ಕೃತೇ ವಿಜಯ ಭೂಪಾಲತ್ಸು ಸಂಪೂಜಿತಃ ।
ತ್ರೇತಾಯಾಂ ಮುನಿಕಣ್ವ ಪೂಜಿತ ಪದೋಲಂಬ ಶ್ರವಾದ್ವಾಪರೇ ।
ವಿಜ್ಞಾನೇಶ್ವರ ಪೂಜಿತಃ ಕಲಿಯುಗೇ ರಾಮಾಪ್ರಮೇಯಾಹ್ವಯಃ
ಕುರ್ಯಾದ್ರಾಜ ವರೇಂದ್ರ, ಸಿಂಹನಗರೀ ನಾಥಃಸ್ಸದಾ ಮಂಗಳಂ ॥ 2 ॥

ಪಂಚಕ್ರೋಶ ಪವಿತ್ರ ದಿವ್ಯವಿಮಲಾ ತೀರ್ಥೇರ್ಥಧರೋಜ್ವಲೇ
ಪದ್ಮಾಲಂಕೃತ ಯಾಜ್ಞವಲ್ಕ್ಯಗಿರಿಶೈಸ್ತೀರ್ಥೈಃ ಪವಿತ್ರೀಕೃತೇ ॥
ಸ್ಥಾನೇ ಭಕ್ತಿ ವಿವರ್ಧನೇ ಪ್ರತಿವರ್ಸ ರಾಮಾಪ್ರಮೇಯಾಹ್ವಯಃ ।
ಕುರ್ಯಾದ್ರಾಜ ವರೇಂದ್ರ, ಸಿಂಹನಗರೀ ನಾಥಃಸ್ಸದಾ ಮಂಗಳಂ ॥ 3 ॥

ನಾಗಾದ್ಯೈಶ್ಚ ರಸಾತ ಲೇಥ ಕಪಿಲಾ ತ್ಸಂಪೂಜಿತ ಸರ್ವದಾ
ಬ್ರಹ್ಮರ್ಷಿ ಪ್ರವರೈಶ್ಚ ಪೂಜಿತ ಪದೋ ದೇವರ್ಷಿಭಿರ್ವಂದಿತಃ
ದೇವೇಂದ್ರಾದಿ ದಿಗೀಶಸುಸ್ತುತಪದೋ ರಾಮಾ ಪ್ರಮೇಯಾಹ್ವಯಃ
ಕುರ್ಯಾದ್ರಾಜ ವರೇಂದ್ರ, ಸಿಂಹನಗರೀ ನಾಥಸ್ಸದಾ ಮಂಗಳಂ ॥ 4 ॥

ವ್ಯಕ್ತಾವ್ಯಕ್ತವಪುಃ ಪುರಾಣ ಪುರುಷೋ ವೇದಾಂತ ವೇದ್ಯಾಕೃತಿಃ
ವಿಶ್ವಾತ್ಮಾ ಪ್ರಣತಾರ್ತಿನಾಶನ ಪಟು ಜ್ಞಾನೋಪದೇಷ್ಟಾಹರಿಃ
ದಿವ್ಯಜ್ಞಾನ ಮನೋಜ್ಞ, ಮಂಡಪನುತೋ ರಾಮಾಪ್ರಮೇಯಾಹ್ವಯಃ
ಕುರ್ಯಾದ್ರಾಜ ವರೇಂದ್ರಸಿಂಹನಗರೀ ನಾಥಸಾದಾ ಮಂಗಳಂ ॥ 5 ॥

ಲಕ್ಷ್ಮೀಶೋ ಧರಣೇಧವಃ ಪ್ರಭುವರೋ ನೀಳಾಪ್ರಿಯಸ್ಸನ್ನುತಃ ।
ವೇದವ್ಯಾಸ ಕೃತಾರ್ಚನೋ ಮುರರಿಪುಃ ಶ್ರೀವತ್ಸವಕ್ಷಾವಿಭುಃ
ಕುರ್ಯಾದ್ರಾಜ ವರೇಂದ್ರ, ಸಿಂಹನಗರೀ ನಾಥಸ್ಸದಾ ಮಂಗಳಂ । ।6 ॥

ಸ್ಥೈರ್ಯೌದಾರ್ಯಸುಧೈರ್ಯ ವೀರ್ಯ ವಿಲಸದ್ಗಾಂಭೀರ್ಯಶೌರ್ಯಾದಿಭಿಃ
ಚಾತುರ್ಯಾರ್ಜವ ಮಾರ್ದವ ಪ್ರಭೃತಿಭಿಃ ದಿವ್ಯೈರ್ಗುಣೈ ಭೂಷಿತಃ
ನಿತ್ಯಾನಂದ ಸುಖಪ್ರದಶ್ಶುಭಗುಣೋ ರಾಮಾಪ್ರಮೇಯಾಹ್ವಯಃ
ಕುರ್ಯಾದ್ರಾಜ ವರೇಂದ್ರ ಸಿಂಹನಗರೀ ನಾಥಸ್ಸದಾ ಮಂಗಳಂ ॥ 7 ॥

ಸರ್ವಜ್ಞೋದ್ಧೃತ ಸರ್ವಲೋಕವಿಭವ ಸರ್ವೇಶ್ವರೋಯಸ್ಸದಾ
ಸರ್ವಾಕಾರಯುತಶ್ಚ ಸರ್ವವಿನತಸ್ಸರ್ವಾಭಿಧಸ್ಸರ್ವಗಃ
ಸರ್ವಾಭೀಷ್ಟ ಫಲಪ್ರದಸ್ಸಭಗವಾನ್ ರಾಮಾಪ್ರಮೇಯಾಹ್ವಯಃ
ಕುರ್ಯಾದ್ರಾಜ ವರೇಂದ್ರ ಸಿಂಹನಗರೀ ನಾಥಸ್ಸದಾ ಮಂಗಳಂ ॥ 8 ॥

ವೃತರತ್ನ ಕುಲೋತ್ತಂಸ ವೇಂಕಟಾರ್ಯ ಸೂನುನಾ
ಅಪ್ರಮೇಯೇನ ರಚಿತಾಕೃತಿ ರ್ಭೂಯಾದ್ದರೇರ್ಮುದೇ ॥

## ಶ್ರೀಕೃಷ್ಣ ಸ್ತೋತ್ರ

ಬಾಲಾಯ ನೀಲ ವಪುಷೇ ನವ ಕಿಂಕಿಣೀಕ
ಜಾಲಾಭಿರಾಮ ಜಘನಾಯ ದಿಗಂಬರಾಯ
ಶಾರ್ದೂಲ ದಿವ್ಯ ನಖ ಭೂಷಣ ಭೂಷಿತಾಯ
ನಂದಾತ್ಮಜಾಯ ನವನೀತಮುಷೇ ನಮಸ್ತೆ

ತಮದ್ಭುತಂ ಬಾಲಕಂ ಅಂಬುಜೇಕ್ಷಣಂ
ಚತುರ್ಭುಜಂ ಶಂಖ ಗಧಾರ್ಯುದಾಯುಧಂ
ಶ್ರೀವತ್ಸ ಲಕ್ಷ್ಮ್ಂಗಳ ಶೋಭಿ ಕೌಸ್ತುಭಂ
ಪೀತಾಂಬರಂ ಸಾಂದ್ರಪಯೋದ ಸೌಭಗಂ

ಮಹಾರ್ಹ ವೈಡೂರ್ಯ ಕಿರೀಟ ಕುಂಡಲ
ತ್ವಿಷಾ ಪರಿಕ್ಷಕ್ತೆ ಸಹಸ್ರ ಕುಂತಲಂ
ಉದ್ದಾಮ ಕಾಂಚ್ಯಂಗದ ಕಂಕಣಾದಿಭಿಃ
ವಿರಾಜಮಾನಂ ವಸುದೇವ ಐಕ್ಷತಹ



ಶ್ರೀರಂಗರಾಜೋಭಗವಾನ್ ಶ್ರೀಭೂನೀಳಾ ಮನೋಹರಃ ಪ್ರಣವಾಲಯ ಮಧ್ಯಸ್ಥಃ ಪರಣವಾರ್ಥ ಪ್ರಕಾಶಕಃ



ಶ್ರಿಯಃ ಕಾಂತಾಯ ಕಲ್ಯಾಣ ನಿಧಯೇ ನಿಧಯೇರ್ಥಿನಾಂ ಶ್ರೀವೇಂಕಟ ನಿವಾಸಾಯ ಶ್ರೀನಿವಾಸಾಯ ಮಂಗಳಂ

## ಶ್ರೀ ಜ್ಞಾನಮಣ್ಡಪಕ್ಷೇತ್ರ ನಿಲಯ

ಶ್ರೀ ರಾಮಪ್ರಮೇಯಸ್ವಾಮಿ



ಶ್ರೀ ರಾಜೇಂದ್ರಸಿಂಹನಗರಿ ( ಮಳೂರು )

ಮೂಲದೇವರ ಸೇವೆ

# ಶ್ರೀ ಜ್ಞಾನಮಣ್ಡಪಕ್ಷೇತ್ರ ನಿಲಯ

ಶ್ರೀ ರಾಮಾಪ್ರಮೇಯಸ್ವಾಮಿ



**ಶ್ರೀ ರಾಜೇಂದ್ರಸಿಂಹನಗರಿ ( ಮಳೂರು )**

ರಥಾರೋಹಣಸೇವೆ



ಶ್ರೀ ವಿಷ್ಣು ಚಿತ್ತಕುಲನಂದನ ಕಲ್ಪವಲ್ಲೀಂ
ಶ್ರೀರಂಗರಾಜ ಹರಿಚಂದನ ಯೋಗ ದೃಶ್ಯಾಂ
ಸಾಕ್ಷಾತ್ ಕ್ಷಮಾಂ ಕರುಣಯಾ ಕಮಲಾಮಿವಾನ್ಯಾಂ
ಗೋದಾಮನನ್ಯ ಶರಣಃ ಶರಣಂ ಪ್ರಪದ್ಯೇ



ಶ್ರೀರಾಮಾಯ ರಾಮಭದ್ರಾಯ ರಾಮಚಂದ್ರಾಯ ವೇಧಸೇ
ರಘುನಾಥಾಯ ನಾಥಾಯ ಸೀತಾಯಾಃ ಪತಯೇ ನಮಃ

Funding: Tattva Heritage Foundation,Kolkata. Digitization: eGangotri.



ರಾಮಾನುಜೋಽಪುಷ್ಕರಾಕ್ಷೋ ಯತೀಂದ್ರಃ ಕರುಣಾಕರಃ
ಕಾಂತಿಮತ್ಯಾತ್ಮಜಃ ಶ್ರೀಮಾನ್ ಲೀಲಾಮಾನುಷ ವಿಗ್ರಹಃ



ಶ್ರೀಮಾನ್ವೇಂಕಟನಾಥಾರ್ಯಃ ಕವಿತಾರ್ಕಿಕ ಕೇಸರೀ
ವೇದಾಂತಾಚಾರ್ಯವರ್ಯೋಮೇ ಸನ್ನಿಧತ್ತಾಂ ಸದಾಹೃದಿ



ಶ್ರೀ ವೇದಾಂತ ರಾಮಾನುಜ
ಮಹಾದೇಶಿಕನ್



ಶ್ರೀ ಶ್ರೀನಿವಾಸ ರಾಮಾನುಜ
ಮಹಾದೇಶಿಕನ್



ಶ್ರೀ ರಂಗರಾಮಾನುಜ
ಮಹಾದೇಶಿಕನ್




ಶ್ರೀ ಶ್ರೀರಂಗಪ್ರಿಯ ಸ್ವಾಮಿಗಳು | ಶ್ರೀಮದಭಿನವ ವಾಗೀಶ ಬ್ರಹ್ಮತಂತ್ರ ಸ್ವತಂತ್ರ ಪರಕಾಲ ಮಹಾದೇಶಿಕರು | ಶ್ರೀ ರಂಗರಾಮಾನುಜ ಮಹಾದೇಶಿಕನ್



ಶ್ರೀಮತಿ ವೆಂಕಟಲಕ್ಷ್ಮಮ್ಮ ಮತ್ತು ಶ್ರೀ ತಿರುಮಲೆ ಅಪ್ರಮೇಯ ಅಯ್ಯಂಗಾರ್

(ಶ್ರೀಮತಿ ಮತ್ತು ಶ್ರೀ ಕೃಷ್ಣ ಅಯ್ಯಂಗಾರ್‌ರವರ ಪುತ್ರಿ, ಪೊಲ್ಲಾಚ್ಚಿ)

(ಶ್ರೀಮತಿ ಯದುಗಿರಿಯಮ್ಮ ಮತ್ತು ಶ್ರೀ ತಿರುಮಲೆ ವೆಂಕಟಕೃಷ್ಣಯ್ಯಂಗಾರ್‌ರವರ ಪುತ್ರ, ದೊಡ್ಡಮೊಳೂರು)

Funding: Tattva Heritage Foundation,Kolkata. Digitization: eGangotri.



ಶ್ರೀಮತಿ ಇಂದಿರಮ್ಮ ಮತ್ತು ಶ್ರೀ ತಿರುಮಲೆ ಮನ್ನಾರ್ ಕೃಷ್ಣಯ್ಯಂಗಾರ್

(ಶ್ರೀಮತಿ ರಂಗನಾಯಕಮ್ಮ ಮತ್ತು ಶ್ರೀ ಶ್ರೀಮಠಂ ವೆಂಕಟಾಚಾರ್ಯರವರ ಪುತ್ರಿ, ಶಾಂತಿಗ್ರಾಮ, ಹಾಸನ)

(ಶ್ರೀಮತಿ ವೆಂಕಟಲಕ್ಷ್ಮಮ್ಮ ಮತ್ತು ಶ್ರೀ ತಿರುಮಲೆ ಅಪ್ರಮೇಯ ಅಯ್ಯಂಗಾರ್‌ರವರ ಪುತ್ರ, ದೊಡ್ಡಮೊಳೂರು)

॥ ಶ್ರೀಃ ॥

# ಶ್ರೀ ರಂಗರಾಜಸ್ತವ

## ಪೂರ್ವ ಶತಕ

ಶ್ರೀ ಪರಾಶರ ಭಟ್ಟಾರ್ಯಃ ಶ್ರೀರಂಗೇಶ ಪುರೋಹಿತಃ ।
ಶ್ರೀ ವತ್ಸಾಂಕಸುತಃ ಶ್ರೀಮಾನ್ ಶ್ರೇಯಸೇ ಮೇಽಸ್ತುಭೂಯಸೇ ॥

ಶ್ರೀವತ್ಸಚಿಹ್ನಮಿಶ್ರೇಭ್ಯೋ ನಮಉಕ್ತಿಂ ಅಧೀಮಹೇ ।
ಯದುಕ್ತಯಃ ತ್ರಯೀಕಂಠೇ ಯಾಂತಿ ಮಂಗಳ
ಸೂತ್ರತಾಂ ॥ ॥೧॥

(ಯದುಕ್ತಯಃ) ಯಾರ ಶ್ರೀಸೂಕ್ತಿಗಳು (ತ್ರಯೀ ಕಂಠೇ) ವೇದ ವೆಂಬ ಸ್ತ್ರೀಯ ಕಂಠದಲ್ಲಿ (ಮಂಗಳ ಸೂತ್ರತಾಂ) ಮಂಗಳ ಸೂತ್ರವಾಗಿರುವ ಸ್ಥಿತಿಯನ್ನು (ಯಾಂತಿ) ಹೊಂದುತ್ತವೆಯೋ (ತೇಭ್ಯಃ ಶ್ರೀವತ್ಸಚಿಹ್ನ ಮಿಶ್ರೇಭ್ಯಃ) ಅಂಥ ಪೂಜ್ಯರಾದ ಶ್ರೀವತ್ಸಚಿಹ್ನಮಿಶ್ರರಲ್ಲಿ (ನಮಉಕ್ತಿಂ) ನಮಸ್ಕಾರೋಕ್ತಿಯನ್ನು (ಅಧೀಮಹೇ) ಅನುಸಂಧಾನ ಮಾಡುತ್ತೇವೆ.

ಈ ಶ್ಲೋಕದಲ್ಲಿ ಶ್ರೀ ಪರಾಶರಭಟ್ಟರು ತಮ್ಮ ತಂದೆಯವರೂ ಆಚಾರ್ಯರೂ ಆದ ಕೂರತ್ತಾಳ್ವಾನ್‌ರವರಿಗೆ ವಂದನೆಯನ್ನು ಸಲ್ಲಿಸಿದ್ದಾರೆ.

ಶ್ರೀ ಭಟ್ಟರಿಗೆ ಗೋವಿಂದ ಭಟ್ಟರು ಆಚಾರ್ಯರಾದಂತೆ ತಮ್ಮ ತಂದೆಯವರಾದ ಕೂರತ್ತಾಳ್ವಾನ್ ಅವರೂ ಆಚಾರ್ಯರೇ ಆಗಿದ್ದಾರೆ.

ಆಳ್ವಾನ್ ಅವರು ತಮ್ಮ ಪುತ್ರರಾದ ಭಟ್ಟರಿಗೆ ತಿರುವಾಯ್ಮೊಳಿಯನ್ನುಪದೇಶಿಸುತ್ತಿದ್ದಾಗ 'ವಣ್ಪುಹಳ್ನಿ ನಾರಣನ್ ತಿಣ್‌ಕಳ್ಲಾಲ್ ಶೇರೇ' (ತಿರು 1-2-10) ಎಂಬುದರ ವಿವರಣೆಯನ್ನು ಹೇಳಬೇಕಾಗಿಬಂತು. ಇಲ್ಲಿ ಮೂಲಮಂತ್ರದ ಅರ್ಥವನ್ನು ಆಚಾರ್ಯರಿಂದ ಕಲಿತುಕೊಳ್ಳಿ ಎಂದು ಪುತ್ರರಿಗೆ ಆಳ್ವಾನ್ ಅವರು ಹೇಳಿದರಂತೆ. ಆದರೆ ಕೂಡಲೇ ದೇಹಾದಿಗಳ ಅಸ್ಥಿರತೆಯನ್ನು ನೆನೆದು, ಅವರನ್ನು ಕರೆದು ತಾವೇ ಆ ಅರ್ಥಗಳನ್ನು ಉಪದೇಶಿಸಿದರಂತೆ. ಹೀಗೆ ಇವರಿಗೆ ಅಳ್ವಾನ್ ಅವರೂ ಆಚಾರ್ಯರಾದ ಕಾರಣ ಅವರ ವಂದನೆಯನ್ನು ಇಲ್ಲಿ ಮಾಡಿದ್ದಾರೆ. ಆಳ್ವಾನ್ ಅವರ ಪಂಚಸ್ತವಗಳು ಅವತರಿಸಿ ವೇದಗಳು ಉಪದೇಶಿಸುವ ಪರತತ್ವ ನಿರ್ಣಯವನ್ನು ದೃಢಪಡಿಸಿದವು. ತ್ರಯಿಕಂಠೇ ಎಂಬುದು ವೇದಾಂತವನ್ನೂ ಸೂಚಿಸುತ್ತದೆ. ವೇದಾಂತಾರ್ಥನಿರ್ಣಯವನ್ನು ಇವರು ತಮ್ಮ ಸೂಕ್ತಿಗಳಿಂದ ಪ್ರತಿಪಾದಿಸಿದರು.

**ರಾಮಾನುಜಪದಚ್ಛಾಯಾ ಗೋವಿಂದಾಹ್ವಾ ಅನಪಾಯಿನೀ ।**
**ತದಾಯತ್ತಸ್ವರೂಪಾ ಸಾ ಜೀಯಾನ್ಮದ್ವಿಶ್ರಮಸ್ಥಲೀ ॥ ॥೨॥**

(ಅನಪಾಯಿನೀ) ಯಾವ ಕಾಲದಲ್ಲಿಯೂ ರಾಮಾನುಜರೊಡನೆ ಅಗಲಿಕೆಯನ್ನು ಹೊಂದದಿರುವ (ರಾಮಾನುಜಪದಚ್ಛಾಯಾ) ಶ್ರೀ ರಾಮಾನುಜರ ಪಾದಗಳ ನೆರಳಾಗಿಯೂ (ತದಾಯತ್ತಸ್ವರೂಪಾ) ಆ ಪಾದಗಳಿಗೆ ಅಧೀನವಾದ ಸ್ವರೂಪವನ್ನುಳ್ಳುದೂ (ಗೋವಿಂದಾಹ್ವಾ) 'ಗೋವಿಂದ ಭಟ್ಟರು' ಎಂಬ ದಿವ್ಯನಾಮವನ್ನು ಹೊಂದಿರುವುದೂ ಆದ (ಸಾ) ಅಂಥ (ಮದ್ವಿಶ್ರಮಸ್ಥಲೀ) ತಾಪತ್ರಯತಪ್ತನಾದ ನನಗೆ ವಿಶ್ರಾಂತಿ ಸ್ಥಾನವಾದ ಎಂಬಾರ್ರವರು (ಜೀಯಾತ್) ಸರ್ವೋತ್ಕೃಷ್ಟರಾಗಿ ಜಯಿಸಲಿ.

ಈ ಶ್ಲೋಕದಲ್ಲಿ ತಮ್ಮ ಆಚಾರ್ಯರಾದ ಗೋವಿಂದಭಟ್ಟರನ್ನು ಸ್ತುತಿಸಿದ್ದಾರೆ. 'ಎಂಬಾರ್' ಎಂದರೆ 'ಎಂ ಪಾರ್'— ನಾನು ತಂಗುವ ಸ್ಥಳ ಎಂದೂ ಅರ್ಥವಾಗುತ್ತದೆ. ನೆರಳು ಹೇಗೆ ಪಾದವನ್ನು ಬಿಟ್ಟಿರಲಾರದೋ ಹಾಗೆಯೇ ರಾಮಾನುಜರನ್ನು ಅವರು ಬಿಟ್ಟಿರುತ್ತಿರಲಿಲ್ಲ. 'ನಿಳ್ಲಾಲುಂ

ಅಡಿತಾರುಂ ಆನೋಂ' (ಪೆರಿಯ ತಿರುವಂದಾದಿ-31) ಎಂದು ನಮ್ಮಾಳ್ವಾರ್‌ರವರು 'ನಾವು ಭಗವಂತನಿಗೆ ನೆರಳಂತೆಯೂ ಪಾದುಕೆಯಂತೆಯೂ ಪಾದರೇಖೆಯಂತೆಯೂ ಆದೆವು' ಎಂದು ತಿಳಿಸುವಂತೆ ಶ್ರೀ ಗೋವಿಂದ ಭಟ್ಟರವರು ಭಗವದ್ರಾಮಾನುಜರಲ್ಲಿ ವರ್ತಿಸುತ್ತಿದ್ದರೆಂಬುದನ್ನು ಇದು ತಿಳಿಸುತ್ತದೆ.

**ರಾಮಾನುಜಮುನಿರ್ಜೀಯಾತ್ ಯೋ ಹರೇರ್ಭಕ್ತಿಯಂತ್ರತಃ ।**
**ಕಲಿಕೋಲಾಹಲಕ್ರೀಡಾ ಮುಧಾಗ್ರಹಮಪಾಹರತ್ ॥ ॥೩॥**

(ಯಃ) ಯಾವ ರಾಮಾನುಜರು (ಹರೇಃ ಭಕ್ತಿಯಂತ್ರತಃ) ಭಗವಂತನಲ್ಲಿ ಉಂಟಾದ ಭಕ್ತಿ ಎಂಬುವ ಯಂತ್ರದಿಂದ (ಕಲಿಕೋಲಾಹಲ ಕ್ರೀಡಾ ಮುಧಾಗ್ರಹಂ) ಕಲಿಪುರುಷನ ಕೋಲಾಹಲದ ಆಟವಾದ ಹಾಳು ಪಿಶಾಚಿಯನ್ನು (ಅಪಾಹರತ್) ಹೋಗಲಾಡಿಸಿ ಓಡಿಸಿದರೋ ಅಂತಹ ರಾಮಾನುಜಮುನಿಗಳು (ಜೀಯಾತ್) ಸರ್ವೋತ್ಕೃಷ್ಟರಾಗಿ ಜಯಿಸಲಿ.

ಶ್ರೀ ಭಗವದ್ರಾಮಾನುಜರನ್ನು ಇಲ್ಲಿ ಸ್ತುತಿಸಿದ್ದಾರೆ. ತಿರುವಾಯ್ಮೊಳಿಯಲ್ಲಿ ನಮ್ಮಾಳ್ವಾರ್‌ರವರು ರಾಮಾನುಜರ ಅವತಾರವನ್ನು 'ಪೊಲಿಹ ಪೊಲಿಹ ಪೊಲಿಹ' ಎಂಬ ದಶಕದಲ್ಲಿ (ತಿರು 5–2–1) ಸೂಚಿಸಿದ್ದಾರೆ ಎಂಬುದು ಸಂಪ್ರದಾಯ. ಆ ಪಾಶುರದಲ್ಲಿ 'ಕಲಿಯುಂ ಕೆಡುಂ ಕಂಡುಕೊಣ್ಮಿನ್' ಎಂದು ಅವರು ಹೇಳಿದ್ದಾರೆ. ಅದನ್ನು ಇಲ್ಲಿ ಸೂಚಿಸಿದೆ. ರಾಮಾನುಶನೂತ್ತಂದಾದಿಯಲ್ಲಿ ರಾಮಾನುಜರನ್ನು ಆಶ್ರಯಿಸದವರನ್ನು ಕಲಿ ಬಾಧಿಸುವುದೆಂದೂ ರಾಮಾನುಜರನ್ನು ಆಶ್ರಯಿಸಿದವರು ಒಳ್ಳೆಯ ಜ್ಞಾನವನ್ನು ಹೊಂದುವರೆಂದೂ 'ಇರಾಮಾನುಶನ್ ಮಕ್ಕೈ ತೇರ್ನ್ದ ಉಲಹಿಲ್ ಪುರಿಯುನನ್‌ಜ್ಞಾನಂ, ಪೊರುಂದಾದವರ್ೖ ಪೊರುಂ ಕಲಿಯೇ' ಎಂದು ಹೇಳಿದ್ದಾರೆ. ಕಲಿಕೋಲಾಹಲವನ್ನು ಪಿಶಾಚಿಯೆಂದು ಹೇಳಿ ಅದನ್ನು ಭಗವದ್ಭಕ್ತಿ ಎಂಬ ಯಂತ್ರದಿಂದ ರಾಮಾನುಜರು ಉಚ್ಚಾಟನೆ ಮಾಡಿದರು ಎಂದು ವರ್ಣಿಸಿರುವುದು ಅರ್ಥಪೂರ್ಣವಾಗಿದೆ. ಲೋಕದಲ್ಲಿ ಭಕ್ತಿಮಾರ್ಗ ಮರೆಯಾಗಿ ಹೋಗುತ್ತಿದ್ದ ಕಾಲದಲ್ಲಿ ಆಚಾರ್ಯರು ಅವತರಿಸಿ ಭಗವಂತನಲ್ಲಿ

ಭಕ್ತಿ ಹೊಮ್ಮುವಂತೆ ಭಕ್ತಿಮಾರ್ಗದ ಪ್ರವರ್ತನವನ್ನು ಯಶಸ್ವಿಯಾಗಿ ಮಾಡಿದರೆಂಬುದನ್ನು ಇದು ಸೂಚಿಸುತ್ತದೆ.

**ವಿಧಾಯ ವೈದಿಕಂ ಮಾರ್ಗಂ ಅಕೌತಸ್ಕುತಕಂಟಕಂ ।**
**ನೇತಾರಂ ಭಗವದ್ಭಕ್ತೇಃ ಯಾಮುನಂ ಮನವಾಮಹೈ ॥ ॥೪॥**

(ವೈದಿಕಂ ಮಾರ್ಗಂ) ವೇದಾನುಸಾರವಾದ ಮಾರ್ಗವನ್ನು (ಅಕೌತಸ್ಕುತ ಕಂಟಕಂ) ದುರ್ವಾದಿಗಳೆಂಬುವ ಮುಳ್ಳುಗಳಿಲ್ಲದಂತೆ (ವಿಧಾಯ) ಮಾಡಿ (ಭಗವದ್ಭಕ್ತೇಃ) ಭಗವದ್ಭಕ್ತಿಯನ್ನು (ನೇತಾರಂ) ವೃದ್ಧಿಪಡಿಸಿ ಮುನ್ನಡೆಸಿದ (ಯಾಮುನಂ) ಶ್ರೀ ಆಳವಂದಾರ್ರವರನ್ನು (ಮನವಾಮಹೈ) ಧ್ಯಾನಿಸುತ್ತೇವೆ.

ವೈದಿಕಮಾರ್ಗಕ್ಕೆ ಉಂಟಾಗಿದ್ದ ತೊಂದರೆಗಳನ್ನು ಇವರು ನಿವಾರಿಸಿದರು. 'ಕುತಃ ಕುತಃ' ಎಂದು ದುರ್ವಾದ ಮಾಡುವವರು ಕೌತಸ್ಕುತರು. ಇವರಿಂದ ಉಂಟಾದ ಅಡಚಣೆಗಳನ್ನು ಪರಿಹರಿಸಿ ಭಕ್ತಿ ಮಾರ್ಗವನ್ನು ನಿಷ್ಕಂಟಕವಾಗಿ ಸ್ಥಾಪಿಸಿದರು ಇವರು ತಮ್ಮ ಸ್ತೋತ್ರರತ್ನಾದಿ ಗ್ರಂಥಗಳ ಮೂಲಕ. ಯಾಮುನರು ಭಗವದ್ರಾಮಾನುಜರ ಪರಮಾಚಾರ್ಯರು. ಇವರು ಸಿದ್ಧಿತ್ರಯ, ಗೀತಾರ್ಥ ಸಂಗ್ರಹ, ಸ್ತೋತ್ರ ರತ್ನ ಮೊದಲಾದ ಕೃತಿರತ್ನಗಳ ಮೂಲಕ ಭಗವಂತನಲ್ಲಿ ಭಕ್ತಿಯನ್ನು ಮಾಡುವುದೇ ಚೇತನನ ಪುರುಷಾರ್ಥವೆಂಬುದನ್ನು ಅತ್ಯಂತ ಪರಿಣಾಮ ಕಾರಿಯಾಗಿ ಉಪದೇಶಿಸಿದರು. 'ಸ್ವಧರ್ಮ ಜ್ಞಾನ ವೈರಾಗ್ಯ ಸಾಧ್ಯ ಭಕ್ತ್ಯೈಕ ಗೋಚರಃ । ನಾರಾಯಣಃ ಪರಂಬ್ರಹ್ಮ ಗೀತಾಶಾಸ್ತ್ರೇ ಸಮೀರಿತಃ ॥', 'ಜ್ಞಾನೀ ತು ಪರಮೈಕಾಂತೀ ತದಾಯತ್ತಾತ್ಮಜೀವನಃ। ತತ್ಸಂಶ್ಲೇಷವಿಯೋಗೈಕ ಸುಖದುಃಖಸ್ತದೇಕಧೀಃ ॥' 'ಏಕಾಂತಾತ್ಯಂತದಾಸ್ಯೈಕರತಿಸ್ತತ್ಪದ ಮಾಪ್ನುಯಾತ್' ಎಂದೂ ಗೀತಾರ್ಥಸಂಗ್ರಹದಲ್ಲಿಯೂ, 'ಯದಿ ಮೇ ನ ದಯಿಷ್ಯಸೇ ತತೋ ದಯನೀಯಸ್ತವ ನಾಥ ದುರ್ಲಭಃ', 'ಭಗವನ್ ಪಾಲಯ ಮಾಸ್ಮ ಜೀಹಪಃ', 'ಪರಿಚರೇಯಂ ತವ ಚರಣಯೋಃ', 'ತ್ವತ್ಪಾದ

ಮೂಲಂ ಶರಣಂ ಪ್ರಪದ್ಯೇ' ಎಂದು ಸ್ತೋತ್ರರತ್ನದಲ್ಲಿಯೂ ಭಕ್ತಿಭಾವವನ್ನು ತೋರಿ ಬೆಳೆಸಿದ್ದಾರೆ.

**ನೌಮಿ ನಾಥಮುನಿಂ ನಾಮ ಜೀವಮೂತಂ ಭಕ್ತ್ಯವಗ್ರಹೇ ।**
**ವೈರಾಗ್ಯ ಭಗವತ್ತತ್ತ್ವ ಜ್ಞಾನ ಭಕ್ತ್ಯಭಿವರ್ಷುಕಮ್ ॥ ॥೫॥**

(ಭಕ್ತ್ಯವಗ್ರಹೇ) ಭಕ್ತಿ ಎನ್ನುವ ಮಳೆ ಬೀಳದ ದುರ್ಭಿಕ್ಷ ಕಾಲದಲ್ಲಿ (ವೈರಾಗ್ಯ ಭಗವತ್ತತ್ತ್ವ ಜ್ಞಾನ-ಭಕ್ತ್ಯಭಿವರ್ಷುಕಂ) ವಿರಕ್ತಿ, ಭಗವಂತನನ್ನು ಕುರಿತ ಜ್ಞಾನ ಮತ್ತು ಭಕ್ತಿ ಎಂಬುವ ಇವನ್ನು ಯಾವಾಗಲೂ ಎಲ್ಲೆಲ್ಲೂ ವರ್ಷಿಸಬಲ್ಲ (ನಾಥಮುನಿಂ ನಾಮ) ಶ್ರೀಮನ್ನಾಥಮುನಿಗಳೆಂದು ಪ್ರಸಿದ್ಧರಾದ (ಜೀವ:ಊತಂ) ಮೇಘವನ್ನು (ನೌಮಿ) ಸ್ತುತಿಸುತ್ತೇನೆ.

ಶ್ರೀ ಮ ನ್ನಾ ಥ ಮು ನಿ ಗ ಳು ದರ್ಶನಸ್ಥಾಪನಾಚಾರ್ಯರುಗಳಲ್ಲಿ ಮೊದಲನೆಯವರು. ಭಕ್ತಿ ಎಂಬುವ ಮಳೆಯನ್ನು ಕರೆಯುವ ಮೇಘವೆಂದು ಅವರನ್ನು ಇಲ್ಲಿ ಸ್ತುತಿಸಿದ್ದಾರೆ. ಈಶ್ವರ ಮುನಿಗಳೆಂಬುವವರ ಸುಪುತ್ರರಾದ ಇವರು ಯೋಗದಶೆಯಲ್ಲಿ ನಮ್ಮಾಳ್ವಾರ್ರವರನ್ನು ಸಾಕ್ಷಾತ್ಕರಿಸಿಕೊಂಡು ಅವರಿಂದ ದಿವ್ಯ ಪ್ರಬಂಧಗಳನ್ನು ಪಡೆದುಕೊಂಡ ಮಹಾನುಭಾವರು. ದಿವ್ಯ ಪ್ರಬಂಧಗಳ ರಕ್ಷಣೆ ಮತ್ತು ಪ್ರವರ್ತನವನ್ನು ಮಾಡಿದ ಈ ಮಾನ್ಯರು ಭಕ್ತಿ ಮಾರ್ಗವನ್ನು ಬೆಳೆಸಿದವರು. ನ್ಯಾಯತತ್ವ ಮತ್ತು ಯೋಗ ರಹಸ್ಯವೆಂಬ ಕೃತಿಗಳನ್ನು ಇವರು ರಚಿಸಿದರು. 'ಭೂಯೋ ನಮಃ ಅಪರಿಮಿತ ಅಚ್ಯುತ ಭಕ್ತಿತತ್ವ ಜ್ಞಾನಾಮೃತಾಬ್ಧಿ ಪರಿವಾಹ ಶುಭೈಃವಚೋಭಿಃ । ಲೋಕೇ ಅವತೀರ್ಣ – ಪರಮಾರ್ಥ – ಸಮಗ್ರ – ಭಕ್ತಿಯೋಗಾಯ ನಾಥಮುನಯೇ ಯಮಿನಾಂ ವರಾಯ ॥ ' ಎಂದು ಆಳವಂದಾರ್ರವರೂ ' ನಾಥೇನ ಮುನಿ ನಾಥೇನ ಭವೇಯಂ ನಾಥವಾನಹಂ । ಯಸ್ಯ ನೈಗಮಿಕಂ ತತ್ವಂ ಹಸ್ತಾ ಮಲಕತಾಂ ಗತಂ॥ ' ಎಂದು ವೇದಾಂತ ದೇಶಿಕರೂ ಇವರನ್ನು ಸ್ತುತಿಸಿದ್ದಾರೆ. ಲೋಕದಲ್ಲಿ ವೇದ ಬಾಹ್ಯ ಸಿದ್ಧಾಂತಗಳು ಪ್ರಚಾರವಾಗಿದ್ದ ಕಾಲದಲ್ಲಿ ಭಗವತ್ ಸ್ವರೂಪವನ್ನೂ ಭಗವದ್ಭಕ್ತಿಯನ್ನೂ ಪ್ರಚಾರ ಮಾಡಿದರು ಇವರು.

**ಋಷಿಂ ಜುಷಾಮಹೇ ಕೃಷ್ಣತೃಷ್ಣಾತತ್ತ್ವಮಿವೋದಿತಂ ।**
**ಸಹಸ್ರಶಾಖಾಂ ಯೋಽದ್ರಾಕ್ಷೀತ್ ದ್ರಾವಿಡೀಂ**
**ಬ್ರಹ್ಮಸಂಹಿತಾಂ ॥ ॥೬॥**

(ಯಃ) ಯಾರು (ಸಹಸ್ರಶಾಖಾಂ) ಸಹಸ್ರಪಾಶುರಗಳನ್ನೊಳಗೊಂಡು (ದ್ರಾಮಿಡೀಂ) ತಮಿಳು ಭಾಷೆಯಲ್ಲಿರುವುದಾದ (ಬ್ರಹ್ಮಸಂಹಿತಾಂ) ತಿರುವಾಯ್ಮೊಳಿ ಎಂಬ ಉಪನಿಷತ್ತನ್ನು (ಅದ್ರಾಕ್ಷೀತ್) ಸಾಕ್ಷಾತ್ಕರಿಸಿದರೋ (ತಂ) ಅಂಥ (ಉದಿತಂ) ರೂಪುಗೊಂಡಂತೆ ಬಂದ (ಕೃಷ್ಣತೃಷ್ಣಾತತ್ತ್ವಮಿವ ಸ್ಥಿತಂ) ಭಗವಂತನಲ್ಲಿರುವ ಭಕ್ತಿಯೆಂಬ ತತ್ತ್ವವೇ ರೂಪುಗೊಂಡಂತೆ ಆಗಿರುವ (ಋಷಿಂ) ನಮ್ಮಾಳ್ವಾರ್‌ರವರನ್ನು (ಜುಷಾಮಹೇ) ಸೇವಿಸುತ್ತೇವೆ.

ಈ ಶ್ಲೋಕದಲ್ಲಿ ನಮ್ಮಾಳ್ವಾರ್‌ರವರನ್ನು ಸ್ತುತಿಸಿದೆ. ನಮ್ಮಾಳ್ವಾರ್‌ರವರು ನಾಥಮುನಿಗಳಿಗೆ ಯೋಗದಶೆಯಲ್ಲಿ ಪ್ರತ್ಯಕ್ಷರಾಗಿ ನಾಲ್ಕು ಸಹಸ್ರದಿವ್ಯಪ್ರಬಂಧಗಳನ್ನು ಉಪದೇಶಿಸಿ ಅವರಿಗೆ ಆಚಾರ್ಯರಾದರು. ತಿರುವಾಯ್ಮೊಳಿ ಪ್ರಬಂಧವೂ ವೇದದಂತೆಯೇ ಪವಿತ್ರವಾದುದು. ಅದು ದ್ರಾವಿಡವೇದ. ಅದನ್ನು ನಮ್ಮಾಳ್ವಾರ್‌ರವರು ಕಂಡರೆಂದು ಹೇಳಿ ನಮ್ಮಾಳ್ವಾರ್‌ರವರೂ ದ್ರಷ್ಟಾರರೇ ಎಂಬುದನ್ನು ಇಲ್ಲಿ 'ಋಷಿ', 'ಅದ್ರಾಕ್ಷೀತ್' ಎಂಬವುಗಳಿಂದ ಅನುಸಂಧಾನ ಮಾಡಿದೆ. ದ್ರಾವಿಡ ವೇದವನ್ನೂ 'ಸಂಹಿತೆ' ಎಂದು ಹೇಳಿ ಇದರಲ್ಲಿಯೂ ಸಹಸ್ರಶಾಖೆಗಳಿವೆ ಎಂದು ಸ್ತುತಿಸಿದೆ. ತಿರುವಾಯ್ಮೊಳಿಯ ಸಹಸ್ರಪಾಶುರಗಳನ್ನು ಇದು ಸೂಚಿಸುತ್ತದೆ. ನಮ್ಮಾಳ್ವಾರ್‌ರವರು ತಮ್ಮ ದಿವ್ಯಪ್ರಬಂಧದಲ್ಲಿ ಅಪೂರ್ವವಾದ ರೀತಿಯಲ್ಲಿ ಕೃಷ್ಣಪ್ರೇಮವನ್ನು ವ್ಯಕ್ತಮಾಡಿರುವುದರಿಂದ 'ಕೃಷ್ಣನಲ್ಲಿರುವ ಭಕ್ತಿಯೇ ರೂಪುಗೊಂಡು ನಮ್ಮಾಳ್ವಾರರಾಗಿ ಪರಿಣಮಿಸಿದೆ' ಎಂದು ಇಲ್ಲಿ ಅನುಭವಿಸಿದ್ದಾರೆ.

**ನಮಃ ಶ್ರೀರಂಗನಾಯಕ್ಯೈ ಯದ್ಭ್ರೂವಿಭ್ರಮಭೇದತಃ ।**
**ಈಶೇಶಿತವ್ಯ ವೈಷಮ್ಯ ನಿಮ್ನೋನ್ನತಮಿದಂ ಜಗತ್ ॥ ॥೭॥**

(ಇದಂಜಗತ್) ಈ ಲೋಕವು (ಯದ್ಭ್ರೂವಿಭ್ರಮ ಭೇದತಃ) ಯಾವ ದೇವಿಯ ಹುಬ್ಬುಗಳ ಚಲನೆಯ ವ್ಯತ್ಯಾಸದಿಂದ (ಈಶ ಈಶಿತವ್ಯ ವೈಷಮ್ಯ ನಿಮ್ನೋನ್ನತಂ) ಐಶ್ವರ್ಯದಿಂದ ಮೇಲ್ಪಟ್ಟವರು ಕೆಳಗಿನವರು ಎಂಬ ಭೇಧ ಗಳಿಂದ ಹಳ್ಳದಿಣ್ಣೆಗಳನ್ನು ಒಳಗೊಂಡಿದೆಯೋ ಅಂಥ (ಶ್ರೀರಂಗನಾಯಕ್ಯೈ) ಶ್ರೀರಂಗನಾಯಕಿಗೆ (ನಮಃ) ನಮಸ್ಕಾರವು.

ತಮ್ಮ ಆಚಾರ್ಯರಿಂದ ಆರಂಭಿಸಿ ಭಗವಂತನವರೆಗೂ ಆಚಾರ್ಯ ಪರಂಪರೆಯನ್ನು ಅನುಸಂಧಾನ ಮಾಡುವ ಸಂದರ್ಭದಲ್ಲಿ ಶ್ರೀನಮ್ಮಾಳ್ವಾ ರ್ರವರನ್ನು ವಂದಿಸಿದ ಮೇಲೆ ಇಲ್ಲಿ ಶ್ರೀರಂಗನಾಯಕೀ ದೇವಿಯನ್ನು ವಂದಿಸಿ ದ್ದಾರೆ. 'ಯದ್ಭ್ರೂಭಂಗಾಃ ಪ್ರಮಾಣಂ ಸ್ಥಿರಚರರಚನಾ – ತಾರತಮ್ಯೇ ಮುರಾರೇಃ' ಎಂದು ಶ್ರೀಗುಣರತ್ನಕೋಶದಲ್ಲಿ ಅನುಭವಿಸಿರುವಂತೆ ಇಲ್ಲಿಯೂ ಶ್ರೀದೇವಿಯ ಹುಬ್ಬುಗಳ ಚಲನೆಗನುಸಾರ ಈ ಲೋಕದಲ್ಲಿ ಧನಿಕರು, ದರಿದ್ರರು, ಒಡೆಯರು, ದಾಸರು ಮೊದಲಾದ ಭೇದಗಳಾಗುವುವೆಂದು ನಿರೂಪಿಸಿದ್ದಾರೆ. ದೇವಿಯ ಕಟಾಕ್ಷಗಳಿಗೆ ಪಾತ್ರರಾದವರು ಸಕಲವಿಧವಾದ ಸಮೃದ್ಧಿಯನ್ನೂ ಹೊಂದುತ್ತಾರೆ. "ತ್ವಯಾ ದೇವಿ ಪರಿತ್ಯಕ್ತಂ ಸಕಲಂ ಭುವನತ್ರಯಂ। ವಿನಷ್ಟಪ್ರಾಯಮಭವತ್ ತ್ವಯೇದಾನೀಂ ಸಮೇಧಿತಂ॥ ದಾರಾಃ ಪುತ್ರಾ ಸ್ತಥಾಗಾರ – ಸುಹೃದ್ಧಾನ್ಯಧನಾದಿಕಂ। ಭವಂತ್ಯೇತನ್ಮಹಾಭಾಗೇ ನಿತ್ಯಂ ತ್ವದ್ವೀಕ್ಷಣಾತ್ನೃಣಾಂ"॥ ಎಂದು ದೇವಿಯ ಕಟಾಕ್ಷದ ಪ್ರಭಾವವನ್ನು ನಿರೂಪಿಸಿದ್ದಾರೆ. ಶ್ರೀದೇವಿಯನ್ನು ಪ್ರಸನ್ನಗೊಳಿಸಿಕೊಳ್ಳದೆ ಹೋದರೆ ಯಾವ ಶ್ರೇಯಸ್ಸೂ ನಮಗುಂಟಾಗದು ಎಂಬುದನ್ನು 'ಶ್ರೇಯೋ ನಹ್ಯರ ವಿಂದ ಲೋಚನಮನಃಕಾಂತಾಪ್ರಸಾದಾದೃತೇ ಸಂಸೃತ್ಯಕ್ಷರವೈಷ್ಣವಾಧ್ವಸು ನೃಣಾಂ ಸಂಭಾವ್ಯತೇ ಕರ್ಹಿಚಿತ್' । ಎಂದು ಭಗವದ್ಯಾಮುನರು ಹೇಳಿರು ವುದನ್ನು ಇಲ್ಲಿ ಅನುಸಂಧಾನ ಮಾಡಬೇಕು. 'ಸರ್ವಕಾಮಪ್ರದಾಂ ರಮ್ಯಾಂ ಸಂಸಾರಾರ್ಣವತಾರಿಣೀಂ। ಕ್ಷಿಪ್ರಪ್ರಸಾದಿನೀಂ ಲಕ್ಷ್ಮೀಂ ಶರಣ್ಯಾಂ ಅನುಚಿಂತ ಯೇತ್ ॥' ಎಂಬುದು ಬ್ರಹ್ಮದೇವನ ವಚನ.

**ಶ್ರೀಸ್ತನಾಭರಣಂ ತೇಜಃಶ್ರೀರಂಗೇಶಯಮಾಶ್ರಯೇ ।**
**ಚಿಂತಾಮಣಿಮಿವೋದ್ಭಾತಂ ಉತ್ಸಂಗೇಽನಂತಭೋಗಿನಃ ॥ ॥೮॥**

(ಶ್ರೀಸ್ತನಾಭರಣಂ) ಶ್ರೀದೇವಿಯ ಸ್ತನಮಂಡಲವನ್ನು ಅಲಂಕಾರವನ್ನಾಗಿ ಉಳ್ಳವನೂ (ಅನಂತಭೋಗಿನಃ) ಆದಿಶೇಷನ (ಉತ್ಸಂಗೇ) ಮಡಿಲಿನಲ್ಲಿ (ಉದ್ಭಾತಂ) ಪ್ರಕಾಶಿಸುವ (ಚಿಂತಾಮಣಿಮಿವ) ಚಿಂತಾಮಣಿಯು ಹಾಗಿರುವವನೂ (ಶ್ರೀರಂಗೇಶಯಂ) ಶ್ರೀರಂಗದಲ್ಲಿ ಶಯಿನಿಸುವವನೂ ಆದ (ತೇಜಃ) ಶ್ರೀರಂಗನಾಥನೆಂಬ ತೇಜಸ್ಸನ್ನು (ಆಶ್ರಯೇ) ಆಶ್ರಯಿಸುತ್ತೇನೆ.

ಪರಮಗುರುವಾದ ಶ್ರೀರಂಗನಾಥನನ್ನು ಇಲ್ಲಿ ಸ್ತುತಿಸಿದೆ. ಇಲ್ಲಿಂದ ಶ್ರೀರಂಗರಾಜಸ್ತವ ಆರಂಭವಾಗುತ್ತದೆ. 'ಶೋದಿವೆಳ್ಳತ್ತಿನ್ನುಳ್ಳೇ ಎಳ್ಳುವದು ಓರುರು' ಎಂದು ನಮ್ಮಾಳ್ವಾರ್‌ರವರೂ 'ಮಣಿಯೇ ಮಣಿಮಾಣಿಕ್ಕಮೇ ಮದುಶೂದಾ ಪಣಿಯಾಯ್ ಎನಕ್ಕು ಉಯ್ಯುಂ ವಹೈ ಪರಮ್ ಶೋದೀ' (ಪೆರಿಯತಿರುಮೊಳಿ 11–8–8) ಎಂದು ತಿರುಮಂಗೈಯಾಳ್ವಾರ್‌ರವರೂ ಅನುಭವಿಸಿರುವುದಕ್ಕನುಸಾರವಾಗಿ ಇಲ್ಲಿ ಶ್ರೀರಂಗನಾಥನನ್ನು ಸ್ತುತಿಸಿದ್ದಾರೆ. ಶ್ರೀರಂಗದಲ್ಲಿ ಆದಿಶೇಷನ ಮಡಿಲಿನಲ್ಲಿ ಶಯಿನಿಸಿರುವ ಚಿಂತಾಮಣಿಯಂತೆ ಅವನು ಶೋಭಿಸಿದ್ದಾನೆ. ಬೆಳ್ಳಗಿರುವ ಅನಂತನ ಶಯನದ ಮೇಲೆ ಹರಿತ ವರ್ಣದ ಮಣಿ ಬೆಳಗುವಂತೆ ಸ್ವಾಮಿ ವಿರಾಜಿಸುತ್ತಿದ್ದಾನೆ. 'ಪಚ್ಚೈಮಾಮಲೆ ಪೋಲ್‌ಮೇನಿ' ಎಂದು ತೊಂಡರಡಿಪ್ಪೊಡಿಯಾಳ್ವಾರ್ ಅವರು ಶ್ರೀರಂಗನಾಥನನ್ನು ಅನುಭವಿಸಿದ್ದಾರೆ. 'ಶ್ರೀರಂಗನಾಥನೆಂಬ ಆ ತೇಜಸ್ಸನ್ನು ನಾನು ಆಶ್ರಯಿಸುತ್ತೇನೆ' ಎಂದು ಇಲ್ಲಿ ಭಟ್ಟರವರು ಶರಣಾಗತಿ ಮಾಡಿದ್ದಾರೆ.

**ಅಸ್ತಿ ವಸ್ತ್ವಿದಮಿತ್ಥಂತ್ವ-ಪ್ರಸಂಖ್ಯಾನ ಪರಾಙ್ಮುಖಮ್ ।**
**ಶ್ರೀಮತ್ಯಾಯತನೇ ಲಕ್ಷ್ಮೀಪದಲಾಕ್ಷೈಕಲಕ್ಷಣಮ್ ॥ ॥೯॥**

(ಇದಮಿತ್ಥಂತ್ವ—ಪ್ರಸಂಖ್ಯಾನ—ಪರಾಙ್ಮುಖಮ್) ಇದು, ಇಂಥದು ಎಂದು ಎಣಿಸಲಾಗದುದೂ (ಲಕ್ಷ್ಮೀಪದ—ಲಾಕ್ಷೈಕಲಕ್ಷಣಂ) ಶ್ರೀದೇವಿಯ

ಪಾದದ ಅರಗಿನ ಗುರುತೊಂದನ್ನೇ ಗುರುತನ್ನಾಗಿ ಉಳ್ಳುದೂ (ವಸ್ತು) ಆದ ಪರಮತತ್ತ್ವವು (ಶ್ರೀಮತಿಆಯತನೇ) ಶ್ರೀರಂಗದ ಹಿರಿಯ ಆಲಯದಲ್ಲಿ (ಅಸ್ತಿ) ಇದೆ.

ಶ್ರೀರಂಗದ ಪೆರಿಯಕೋಯಿಲ್‌ನಲ್ಲಿ ಬೆಳಗುತ್ತಿರುವುದು ಪರತತ್ತ್ವವೇ ಎಂದು ಇಲ್ಲಿ ಹೇಳಿದೆ. ಭಗವಂತನ ಸ್ವರೂಪವನ್ನು 'ಇದು ಇಂಥದು' ಎಂದು ತಿಳಿಯುವುದಕ್ಕಾಗಲೀ ವರ್ಣಿಸುವುದಕ್ಕಾಗಲೀ ಆಗುವುದಿಲ್ಲ. 'ನೋ ನವೇ ಡೇತಿ ವೇದಚ' ಎಂದು ಕೇನೋಪನಿಷತ್ತು ಹೇಳಿ ಭಗವಂತನ ಸ್ವರೂಪವನ್ನು ಪೂರ್ಣವಾಗಿ ತಿಳಿಯುವುದಕ್ಕಾಗುವುದಿಲ್ಲವೆಂದು ಪ್ರತಿಪಾದಿಸಿದೆ. 'ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ' ಎಂದು ತೈತ್ತಿರೀಯ ಉಪ ನಿಷತ್ತು ಹೇಳಿ ಭಗವಂತನನ್ನು ಸಮಗ್ರವಾಗಿ ತಿಳಿಯುವುದಕ್ಕೂ ಹೇಳುವು ದಕ್ಕೂ ಆಗುವುದಿಲ್ಲವೆಂದು ಹೇಳುತ್ತದೆ. ಆದರೆ ಇತರರು ಹೇಳುವಂತೆ ಭಗವಂತನು ಅವಾಚ್ಯನೂ ಅವೇದ್ಯನೂ ಆಗಿಲ್ಲ. ಅವನನ್ನು ಪೂರ್ಣವಾಗಿ ನಾವು ತಿಳಿಯುವುದಕ್ಕಾಗುವುದಿಲ್ಲವೆಂದು ನಾವು ತಿಳಿಯಬಹುದು. ಪರಬ್ರಹ್ಮ ವಸ್ತುವಿನ ಅಸಾಧಾರಣವಾದ ಸ್ವರೂಪನಿರೂಪಕ ಧರ್ಮದಲ್ಲಿ 'ಶ್ರೀವಿಶಿಷ್ಟ ತ್ವವೂ' ಸೇರಿರುವುದೆಂಬುದನ್ನು 'ಲಕ್ಷ್ಮೀಪದಲಾಕ್ಷೈಕಲಕ್ಷಣಂ' ಎಂಬುದ ರಿಂದ ಸೂಚಿಸಿದೆ. ಹೇಳುವವರು ತಮ್ಮ ಸಾಮರ್ಥ್ಯ ಎಷ್ಟೋ ಅಷ್ಟು ಮಾತ್ರ ಹೇಳಬಹುದು. ಪೂರ್ತಿ ಯಾರೂ ಅವನ ಸ್ವರೂಪವನ್ನು ವರ್ಣಿಸಲಾರರು ಎಂಬುದನ್ನು 'ಪೇಶುವಾರ್ ಎವ್ವಳವು ಪೇಶುವರ್ ಅವ್ವಳವೇ' ಎಂದು ಪೇಯಾಳ್ವಾರ್‌ರವರು ಹೇಳಿರುವುದನ್ನು ಸ್ಮರಿಸಿಕೊಳ್ಳಬಹುದು.

**ಲಕ್ಷ್ಮೀ-ಕಲ್ಪಲತೋತ್ತುಂಗಸ್ತನ-ಸ್ತಬಕ-ಚಂಚಲಃ ।**
**ಶ್ರೀರಂಗರಾಜಭೃಂಗೋ ಮೇ ರಮತಾಂ ಮಾನಸಾಂಬುಜೇ ॥ ॥೧೦॥**

(ಲಕ್ಷ್ಮೀ—ಕಲ್ಪಲತೋತ್ತುಂಗ—ಸ್ತನ—ಸ್ತಬಕ ಚಂಚಲಃ) ಶ್ರೀದೇವಿ ಎನ್ನುವ ಕಲ್ಪವಲ್ಲಿಯಲ್ಲಿರುವ ಉನ್ನತವಾದ ಸ್ತನಗಳೆಂಬ ಹೂಗೊಂಚಲಿನಲ್ಲಿ ಸುಳಿಯುತ್ತಲಿರುವ (ಶ್ರೀರಂಗರಾಜಭೃಂಗಃ) ಶ್ರೀರಂಗನಾಥನೆನ್ನುವ

ದುಂಬಿಯು (ಮೇ) ನನ್ನ (ಮಾನಸಾಂಬುಜೇ) ಮನಸ್ಸೆಂಬ ತಾವರೆ ಹೂವಿನಲ್ಲಿ (ರಮತಾಂ) ಪ್ರೀತಿಯಿಂದ ರಮಿಸಲಿ.

ಇತರ ಹೂಗಳ ಸುತ್ತ ದುಂಬಿ ಸುತ್ತುತ್ತಾ ಮೊರೆಯುತ್ತದೆ. ಆದರೆ ತಾವರೆ ಹೂವಿನಲ್ಲಿಯಾದರೋ ಒಂದು ಕಡೆ ಮುಳುಗಿ ಅಲ್ಲಿಯೇ ನೆಲಸಿರುತ್ತದೆ. ಹಾಗೆ ಆ ಭೃಂಗ ನನ್ನ ಮನಸ್ಸಿನಲ್ಲಿ ಬಂದು ನೆಲಸಲಿ ಎಂದು ಬೇಡಿದೆ. ಶ್ರೀರಂಗರಾಜನನ್ನು ಭೃಂಗವೆಂದು ರೂಪಣ ಮಾಡಿದೆ ಇಲ್ಲಿ. ಶ್ರೀದೇವಿಯನ್ನು ಕಲ್ಪಲತೆ ಎಂದು ಭಾವಿಸಿ ದೇವಿಯ ಸ್ತನಮಂಡಲವನ್ನು ಹೂಗೊಂಚಲೆಂದು ವರ್ಣಿಸಿದೆ. ಶ್ರೀರಂಗರಾಜನೆಂಬಭೃಂಗ ಈ ಹೂಗೊಂಚಲಿನಲ್ಲಿ ಸುಳಿಯುವವನಾಗಿದ್ದಾನೆ. ಅಂಥ ಸ್ವಾಮಿ ನನ್ನ ಮನಸ್ಸೆಂಬ ಕಮಲದಲ್ಲಿ ಬಂದು ನೆಲಸಬೇಕೆಂದು ಇಲ್ಲಿ ಪ್ರಾರ್ಥಿಸಿದೆ.

ಸ್ವಸ್ತಿ ಶ್ರೀಸ್ತನಕಸ್ತೂರೀ–ಮಕರೀ–ಮುದ್ರಿತೋರಸಃ ।
ಶ್ರೀರಂಗರಾಜಾಚ್ಛರದಶ್ಶತಮಾಶಾಸ್ಮಹೇ ತಮಾಂ ॥ ॥೧೧॥

(ಶ್ರೀಸ್ತನ ಕಸ್ತೂರೀ ಮಕರೀ ಮುದ್ರಿತೋರಸಃ) ಶ್ರೀದೇವಿಯ ಸ್ತನ ಮಂಡಲದಲ್ಲಿ ಚಿತ್ರಿತವಾದ ಮಕರಿಕಾಪತ್ರಗಳಿಂದ ಮುದ್ರಿಸಲ್ಪಟ್ಟ ವಕ್ಷಃಸ್ಥಲವನ್ನುಳ್ಳ (ಶ್ರೀರಂಗರಾಜಾತ್) ಶ್ರೀರಂಗನಾಥನಿಂದ (ಸ್ವಸ್ತಿ) ಕ್ಷೇಮವನ್ನು, ಮಂಗಲವನ್ನು (ಶತಂಶರದಃ) ನೂರುವರ್ಷಗಳ ಕಾಲ (ಆಶಾಸ್ಮಹೇ ತಮಾಂ) ಅತಿಶಯವಾಗಿ ಪ್ರಾರ್ಥಿಸುತ್ತೇವೆ.

ಶ್ರೀದೇವಿಯೊಡನೆ ನಿತ್ಯ ಸಂಶ್ಲೇಷವನ್ನು ಪೊಂದಿರುವವನೂ, ಕಾರುಣ್ಯಮಯಿಯಾದ ದೇವಿಯ ಇಂಗಿತಕ್ಕನುಸಾರವಾಗಿ ಅನುಗ್ರಹವನ್ನು ಮಾಡುವವನೂ ಆದ ಶ್ರೀರಂಗನಾಥನು ನಮಗೆ ಎಲ್ಲ ಕಾಲವೂ ಮಂಗಳವನ್ನುಂಟು ಮಾಡಲಿ ಎಂದು ಇಲ್ಲಿ ಪ್ರಾರ್ಥನೆ ಸಲ್ಲಿಸಲಾಗಿದೆ. 'ಶತಂ ಶರದಃ' ಎಂಬುದು ಇಲ್ಲಿರುವ ಕಾಲವೆಲ್ಲಾ ಎಂಬ ಅರ್ಥವನ್ನು ಹೊಂದಿದೆ. ಈ ಲೋಕದಲ್ಲಿ ಅವನ ಕಟ್ಟಳೆಗನುಸಾರ ನಾವಿರುವಷ್ಟು ಕಾಲವೂ ಅವನು ನಮಗೆ ಕ್ಷೇಮವನ್ನುಂಟು

ಮಾಡಲಿ ಎಂಬ ಭಾವ. 'ಸ್ವಸ್ತಿ' ಎಂಬುವುದು ಕೇವಲ ಐಹಿಕವಾದ ಸುಖ ಸಂಪತ್ತನ್ನು ಮಾತ್ರ ಸೂಚಿಸದೆ ಭಗವಂತನ ಅರ್ಚನೆ, ಚಿಂತನೆ, ನಾಮ ಸಂಕೀರ್ತನೆ, ಮಹಿಮಾತಿಶಯದ ಶ್ರವಣ ಮೊದಲಾದವುಗಳಿಂದ ಅವನಲ್ಲಿ ನಮ್ಮ ಮನಸ್ಸು ಪ್ರವಣವಾಗುವಂತಹ ಮಂಗಳವನ್ನೂ ಇಲ್ಲಿ ಆಶಿಸಿದೆ. 'ಯನ್ಮುಹೂರ್ತಂ ಕ್ಷಣಂ ವಾಪಿ ವಾಸುದೇವೋ ನ ಚಿಂತ್ಯತೇ। ಸಾ ಹಾನಿಸ್ತನ್ಮಹಚ್ಛಿದ್ರಂ ಸಾ ಭ್ರಾಂತಿಃ ಸಾ ಚ ವಿಕ್ರಿಯಾ ॥' ಎಂದು ಹೇಳಿದಂತಹ ಹಾನಿ ಉಂಟಾಗದಿರಬೇಕೆಂದೂ 'ಮಚ್ಚಿತ್ತಾಃ ಮದ್ಗತಪ್ರಾಣಾಃ ಬೋಧಯಂತಃ ಪರಸ್ಪರಂ। ಕಥಯಂತಶ್ಚ ಮಾಂ ನಿತ್ಯಂ ತುಷ್ಯಂತಿ ಚ ರಮಂತಿ ಚ ॥' ಎಂದು ಹೇಳಿದಂತೆ ಮಂಗಳವಾಗಬೇಕೆಂದೂ ಇಲ್ಲಿ ಪ್ರಾರ್ಥಿಸಿದೆ.

**ಪಾತು ಪ್ರಣತರಕ್ಷಾಯಾಂ ವಿಲಂಬಮಸಹನ್ನಿವ ।**
**ಸದಾ ಪಂಚಾಯುಧೀಂ ಬಿಭ್ರತ್ಸನಃ ಶ್ರೀರಂಗನಾಯಕಃ ॥ ॥೧೨॥**

(ಪ್ರಣತರಕ್ಷಾಯಾಂ) ಆಶ್ರಿತರನ್ನು ಕಾಪಾಡುವುದರಲ್ಲಿ (ವಿಲಂಬಂ) ಕಾಲವಿಲಂಬವನ್ನು (ಅಸಹನ್ನಿವ) ಸಹಿಸಲಾರದೆ ಇರುವನೋ ಎಂಬಂತೆ (ಸದಾ) ಯಾವಾಗಲೂ (ಪಂಚಾಯುಧೀಂ) ಪಂಚಾಯುಧಗಳನ್ನು (ಬಿಭ್ರತ್) ಧರಿಸಿ ಕೊಂಡಿರುವ (ಸಃ ಶ್ರೀರಂಗನಾಯಕಃ) ಆ ಶ್ರೀರಂಗನಾಥನು (ನಃ) ನಮ್ಮನ್ನು (ಪಾತು) ರಕ್ಷಿಸಲಿ.

ಭಗವಂತನು ತನ್ನ ಶ್ರೀಹಸ್ತಗಳಲ್ಲಿ ಪಂಚಾಯುಧವನ್ನು ಎಡೆಬಿಡದೆ ಯಾವಾಗಲೂ ಧರಿಸಿರುವುದು ಏತಕ್ಕೆ ? ತನ್ನ ಆಶ್ರಿತರಿಗೆ ಏನಾದರೂ ಆಪತ್ತು ಬಂದರೆ ಕೂಡಲೇ ಅದನ್ನು ಪರಿಹಾರ ಮಾಡುವುದಕ್ಕೆ. ಆಗ ಆಯುಧಗಳನ್ನು ಹುಡುಕಿಕೊಂಡು ಹೋಗದೆ ಇರುವುದಕ್ಕೂ ಆದರಿಂದ ಆಗುವ ವಿಳಂಬವನ್ನು ತಪ್ಪಿಸುವುದಕ್ಕೂ ಸ್ವಾಮಿ ಹೀಗೆ ಆಯುಧಗಳನ್ನೆಲ್ಲಾ ತನ್ನ ಶ್ರೀಹಸ್ತಗಳಲ್ಲಿ ಧರಿಸಿದ್ದಾನೆ ಎಂದು ಇಲ್ಲಿ ಅನುಭವಿಸಿದೆ. 'ಎಪ್ಪೋದುಂ ಕೈಕ್ಕೊಳ್ಳಾ ನೇಮಿಯಾನ್ ನಮ್ಮೇಲ್ ವಿನೈಕಡಿವಾನ್' ಎಂದು ನಮ್ಮಾಳ್ವಾರವರು ಪೆರಿಯತಿರುವಂದಾದಿಯಲ್ಲಿ ಹೇಳಿರುವುದನ್ನು ಅನುಸಂಧಾನ ಮಾಡಬೇಕು.

ಅಮತಂ ಮತಂ ಮತಮಥಾಮತಂ ಸ್ತುತಂ
ಪರಿನಿಂದಿತಂ ಭವತಿ ನಿಂದಿತಂ ಸ್ತುತಂ ।
ಇತಿ ರಂಗರಾಜಮುದಜುಘೂಷತ್ತ್ರಯೀ
ಸ್ತುಮಹೇ ವಯಂ ಕಿಮಿತಿ ತನ್ನ ಶಕ್ನುಮಃ ॥ ॥೧೩॥

(ಅಮತಂ) ಪರಬ್ರಹ್ಮವನ್ನು ಅರಿಯಲಸಾಧ್ಯವಾದುದು ಎಂದು ತಿಳಿದರೆ (ಮತಂಭವತಿ) ಆ ಪರಬ್ರಹ್ಮವಸ್ತು ಅರಿಯಲ್ಪಟ್ಟದಾಗುತ್ತದೆ. (ಅಥ) ಮತ್ತೂ (ಮತಂ) ಪರಬ್ರಹ್ಮವಸ್ತುವನ್ನು ಅರಿಯಲು ಸಾಧ್ಯವೆಂದು ತಿಳಿದರೆ (ಅಮತಂಭವತಿ) ಅರಿಯಲ್ಪಡದಿರುವುದಾಗುತ್ತದೆ. (ಸ್ತುತಂ) ಪರಬ್ರಹ್ಮವಸ್ತುವನ್ನು ಸ್ತೋತ್ರ ಮಾಡಿ ಮುಗಿಸಬಹುದೆಂದು ಭಾವಿಸಿದರೆ (ಪರಿನಿಂದಿತಂ ಭವತಿ) ಅದು ನಿಂದಿಸಲ್ಪಟ್ಟಂತೆ ಆಗುತ್ತದೆ. (ನಿಂದಿತಂ) ಇರುವಂತೆ ಆ ಪರಬ್ರಹ್ಮ ವಸ್ತುವನ್ನು ಸ್ತುತಿಸಲ್ಪಡುವುದಕ್ಕಾಗುವುದಿಲ್ಲವೆಂದು ತಿಳಿದರೆ (ಸ್ತುತಂಭವತಿ) ಸ್ತುತಿಸಲ್ಪಟ್ಟುದಾಗಿ ಆಗುತ್ತದೆ. (ಇತಿ) ಈ ವಿಧವಾಗಿ (ತ್ರಯೀ) ವೇದವು (ಉದಜುಘೂಷತ್) ಬ್ರಹ್ಮವಸ್ತುವನ್ನು ಕುರಿತು ಉದ್ಘೋಷಿಸುತ್ತದೆ. ಹೀಗೆ ಇರುವ (ತಂ ರಂಗರಾಜಂ) ಆ ರಂಗರಾಜನನ್ನು (ವಯಂ) ಅರಿವಿಲ್ಲದ ನಾವು (ಕಿಮಿತಿ) ಏನೆಂಬುದಾಗಿ (ಸ್ತುಮಹೇ) ಸ್ತುತಿಸತೊಡಗುವೆವು. (ನಶಕ್ನುಮಃ) ನಾವು ಸ್ತುತಿಸಲು ಶಕ್ತರಲ್ಲ.

ಮಹಾಮಹಿಮನೂ ಅವಾಙ್ಮನಸಗೋಚರನೂ ಆದ ಪರಮಾತ್ಮನನ್ನು ಪೂರ್ಣವಾಗಿ ಸ್ತುತಿಸುವುದು ಸಾಧ್ಯವಿಲ್ಲವೆಂಬುದನ್ನು ನಿರೂಪಿಸುತ್ತಾರೆ ಇಲ್ಲಿಂದ ಹತ್ತೊಂಬತ್ತನೆಯ ಶ್ಲೋಕ ಪೂರ್ತಿಯಾಗಿ. ಕೇನೋಪನಿಷತ್ತು ಭಗವಂತನನ್ನು ವರ್ಣಿಸುವಾಗ 'ಯಸ್ಯಾಮತಂ ತಸ್ಯಮತಂ ಮತಂ ಯಸ್ಯ ನ ವೇದ ಸಃ । ಅವಿಜ್ಞಾತಂ ವಿಜಾನತಾಂ ವಿಜ್ಞಾತಮವಿಜಾನತಾಂ ॥ ಎಂದೂ 'ನಾಹಂ ಮನ್ಯೇ ಸುವೇದೇತಿ ನೋ ನ ವೇದೇತಿ ವೇದ ಚ । ಯೋನಸ್ತದ್ವೇದ ತದ್ವೇದ ನೋ ನವೇದೇತಿ ವೇದಚ ॥' ಎಂದು ನಿರೂಪಿಸುತ್ತದೆ. 'ನಾನು ಬ್ರಹ್ಮವಸ್ತುವನ್ನು ಪೂರ್ಣವಾಗಿ ತಿಳಿದಿದ್ದೇನೆ ಎಂದು ಭಾವಿಸುವುದಿಲ್ಲ.

ತಿಳಿದಿಲ್ಲವೆಂದೂ ಭಾವಿಸುವುದಿಲ್ಲ. ಆದರೆ ತಿಳಿದಿದ್ದೇನೆ'. ಪೂರ್ಣವಾಗಿ ತಿಳಿಯದೆ ಇರುವುದೂ ಉಂಟು. ಹಾಗೆಯೇ ಕಿಂಚಿತ್ ತಿಳಿದಿರುವುದೂ ಉಂಟು. ಯಾರು ಹೀಗೆ 'ನೋ ನ ವೇದ ಇತಿ ವೇದ ಚ ಇತಿ' ಎಂದು ತಿಳಿದಿದ್ದಾರೆ ಅವರಿಗೆ ಬ್ರಹ್ಮಸ್ವರೂಪ ಗೊತ್ತು.

ಬ್ರಹ್ಮವಸ್ತು ಪರಿಚ್ಛಿನ್ನವಾದುದು ಎಂದು ಯಾರು ತಿಳಿಯುವುದಿಲ್ಲವೋ ಅವರು ಬ್ರಹ್ಮವಸ್ತುವನ್ನು ಅರಿಯುತ್ತಾರೆ. ಆದರೆ ಯಾರು ಬ್ರಹ್ಮವಸ್ತು ಪರಿಚ್ಛಿನ್ನವಾದುದು ಎಂದು ತಿಳಿಯುವರೋ ಅವರು ಬ್ರಹ್ಮವನ್ನು ತಿಳಿದಿಲ್ಲ. ಬ್ರಹ್ಮವಸ್ತು ಇಷ್ಟು ಎಂದು ಪರಿಚ್ಛಿನ್ನವಾದ ಜ್ಞಾನ ಹೊಂದಿದವರಿಗೆ ಅದು ಅವಿಜ್ಞಾತವಾಗಿದೆ. ಬ್ರಹ್ಮವಸ್ತು ಪರಿಚ್ಛಿನ್ನವಾದುದು ಎಂಬ ಜ್ಞಾನವನ್ನು ಹೊಂದದವರಿಗೆ ಅದು ವಿಜ್ಞಾತವಾಗಿದೆ'. ತೈತ್ತಿರೀಯ ಉಪನಿಷತ್ತು 'ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ' ಎಂದು ಹೇಳಿ ಅಪರಿಮಿತವಾದ ಗುಣವುಳ್ಳ ಆ ಭಗವಂತನ ಗುಣಗಳನ್ನು ಇಷ್ಟೆಂದು ತಿಳಿಯುವುದಕ್ಕೂ ಹೇಳುವುದಕ್ಕೂ ಸಾಧ್ಯವಿಲ್ಲವೆಂದು ಉದ್ಘೋಷಿಸುತ್ತದೆ. ಆದುದರಿಂದ ಬ್ರಹ್ಮವಸ್ತುವನ್ನು ಪೂರ್ಣವಾಗಿ ತಿಳಿಯುವುದಕ್ಕೆ ಆಗದು. ಆದರೆ ಅದು ಅವೇದ್ಯವೂ ಅಲ್ಲ. ಹಾಗಿದ್ದಿದ್ದರೆ 'ಬ್ರಹ್ಮವಿದಾಪ್ನೋತಿ ಪರಂ', 'ತಮೇವಂ ವಿದಿತ್ವಾ ಅತಿಮೃತ್ಯುಮೇತಿ' ಮೊದಲಾದ ಉಪನಿಷದ್ವಾಕ್ಯಗಳು ಇರುತ್ತಿರಲಿಲ್ಲ. ನಮ್ಮಾಳ್ವಾರ್‌ರವರು ಪೆರಿಯ ತಿರುವಂದಾದಿಯಲ್ಲಿ,

'ಪುಹ ಪ್ಪೆರ್ರೀವ್ ಪಡ್ಡಿಪ್ಪೋಂ ಪುಹ ಪ್ಪೆರೋಂ ಪಡ್ಡಿಯೋವ್
ಇಹಪ್ಪೆರ್ರೀವ್ ಮತಿಪ್ಪೋಂ ಮದಿಯೋಂ—ಇಹಪ್ಪೆರೋವ್ ಮತ್ತು
ಎಂಗಣ್ಮಾಲ್ ಶೆಂಗಣ್ಮಾಲ್ ಶೀರಲ್ ನೀ ತೀವಿನೈಯೋವ್
ಎಂಗಣ್ಮಾಲ್ ಕಂಡಾಯ್ ಇವೈ'. ಎಂದು ಹೇಳಿರುವುದನ್ನು

ಅನುಸಂಧಾನ ಮಾಡಬಹುದು.

**ಯದಿ ಮೇ ಸಹಸ್ರವದನಾದಿವೈಭವಂ**
**ನಿಜಮರ್ಪಯೇತ್ ಸ ಕಿಲ ರಂಗಚಂದ್ರಮಾಃ ।**
**ಅಥ ಶೇಷವನ್ಮಮ ಚ ತದ್ವದೇವ ವಾ**
**ಸ್ತುತಿಶಕ್ತ್ಯಭಾವವಿಭವೇಽಪಿ ಭಾಗಿತಾ ॥** ॥೧೪॥

(ಸಃ ರಂಗಚಂದ್ರಮಾಃ) ಆ ಶ್ರೀರಂಗನಾಥನು (ನಿಜಂ) ತನ್ನದಾದ (ಸಹಸ್ರ ವದನಾದಿ ವೈಭವಂ) ಸಾವಿರ ಬಾಯಿಗಳೇ ಮೊದಲಾದ ವೈಭವವನ್ನು (ಮೇ) ನನಗೆ (ಅರ್ಪಯೇತ್ ಯದಿ) ಅನುಗ್ರಹಿಸಿಕೊಟ್ಟರೂ ಕೂಡ (ಅ ಥ) ತದನಂತರ (ಶೇಷವತ್) ಆದಿಶೇಷನಂತೆಯೋ (ತದ್ವತ್ ಏವವಾ) ಅಥವಾ ಆ ಭಗವಂತನಂತೆಯೋ (ಮಮಚ) ನನಗೂ (ಸ್ತುತಿಶಕ್ತಿ ಅಭಾವ ವಿಭಾವೇ ಅಪಿ) ಸ್ತೋತ್ರವನ್ನು ಮಾಡುವುದರಲ್ಲಿ ಶಕ್ತಿ ಇಲ್ಲದೆ ಇರುವ ವೈಭವದಲ್ಲಿಯೂ ಸಹ (ಭಾಗಿತಾ) ಭಾಗವು ಉಂಟಾಗುವುದು.

ಭಗವಂತನ ಮಹಿಮೆಯು ಅಪಾರವಾದುದು. ಅದನ್ನು 'ಸಹಸ್ರ ಶೀರ್ಷಾ ಪುರುಷಃ' ಎಂಬ ಮಹಿಮೆಯುನ್ನುಳ್ಳ ಅವನೂ ಪೂರ್ಣವಾಗಿ ತಿಳಿಯ ಲಾರ, ಹೇಳಲಾರ. ಹಾಗೆಯೇ ಸಹಸ್ರವದನನಾದ ಆದಿಶೇಷನೂ ಸಹ ಭಗವಂತನ ಮಹಿಮೆಯನ್ನು ಸ್ತುತಿಸಿ ಮುಗಿಸಲಾರನು. ಆ ಭಗವಂತನು ನಮಗೆ ಸಹಸ್ರ ವದನಗಳನ್ನು ಕೊಟ್ಟರೂ ಸಹ ನಾವು ಅವನಂತೆಯೋ ಅವನ ವೈಭವ ವನ್ನು ವರ್ಣಿಸುವುದರಲ್ಲಿ ಅಶಕ್ತರಾಗುತ್ತೇವೆ. 'ಕ ಈಂ ಸ್ತವ ತ್ ಕಃ ಪೃಣಾತ್ ಕೋ ಯಜಾತೇ' (ಋ.ವೇ. 6-47-15) ಎಂದು ಋಗ್ವೇದ ಶ್ರುತಿ ಅವನನ್ನು ಯಾರೂ ಪೂರ್ಣವಾಗಿ ಸ್ತುತಿಸಲಾರರೆಂದು ಹೇಳುತ್ತದೆ. ಅನೇಕರು ಸೇರಿ ವರ್ಣಿಸಿದರೂ ಮುಗಿಯದು ಅವನ ಮಹಿಮೆ. ನಮ್ಮಾಳ್ವಾರ್‌ರವರು 'ಜ್ಞಾಲಂ ಉಂಡುಮಿೞ್ನ್ದ ಮಾಲೈ ಎಣ್ಣಮಾರರಿಯಮಾಟ್ಟೇನ್' ಎಂದೂ, 'ವಲ್ಲ ದೋರ್ ವಣ್ಣಂಶೊನ್ನಾಲ್ ಅದುವೇ ಉನಕ್ಕಾಂ ವಣ್ಣಮೇ' ಎಂದೂ, 'ಅಮ್ ವಣ್ಣಂ ಇನ್ನದು ಒನ್ರು ಎನ್ರು ಅರಿವದರಿಯ ಅರಿಯೈ' ಎಂದೂ ಅನುಭವಿಸಿ ರುವುದನು ಅನುಸಂಧಾನ ಮಾಡಬಹುದು.

ಸೋ ಅಂಗ ವೇದ ಯದಿ ವಾ ನಕಿಲೇತಿ ವೇದಃ
ಸಂದೇಗ್ಧ್ಯನರ್ಘವಿದಮಾತ್ಮನಿ ರಂಗನಾಥಂ ।
ಸ್ಥಾನೇ ಯದೇಷ ಖಲು ದೋಷಮಲೀಮಸಾಭಿಃ
ಮದ್ವಾಗ್ಭಿರೈಶಮತಿಶಾಯನಮಾವೃಣೋತಿ ॥ ॥೧೫॥

(ವೇದಃ) ವೇದವು (ಸೋ ಅಂಗವೇದ ಯದಿವಾ ನವೇದ ಇತಿ) ಅವನೂ ತನ್ನ ಹಿರಿಮೆಯನ್ನು ತಿಳಿದನೋ ಇಲ್ಲವೋ ಎಂದು ಹೇಳಿ (ಅನರ್ಘವಿದಂ ರಂಗನಾಥಂ) ಶ್ರೇಷ್ಠವಾದ ಜ್ಞಾನವನ್ನುಳ್ಳ ಸರ್ವಜ್ಞನಾದ ಭಗವಂತನನ್ನು ಕುರಿತು (ಆತ್ಮನಿ) ತನ್ನಲ್ಲಿ (ಸಂದೇಗ್ಧಿ) ಸಂದೇಹಪಡುತ್ತಿದೆ. (ತತ್ ಸ್ಥಾನೇ) ಹಾಗೆ ಸಂದೇಹಪಡುವುದು ತಕ್ಕುದೇ ಆಗಿದೆ. (ಏಷಃ) ಈ ರಂಗನಾಥನು (ದೋಷಮಲೀಮಸಾಭಿಃ) ದೋಷಗಳಿಂದ ಮಲಿನವಾದ (ಮದ್ವಾಗ್ಭಿಃ) ನನ್ನ ಮಾತುಗಳಿಂದ (ಐಶಂ) ತನ್ನ ಸರ್ವೇಶ್ವರತ್ವಕ್ಕೆ ತಕ್ಕುದಾದ (ಅತಿಶಾಯನಂ) ಅತಿಶಯವನ್ನು (ಆವೃಣೋತಿ) ಮರೆಸಿಕೊಳ್ಳುತ್ತಾನೆ.

ತೈತ್ತಿರೀಯದಲ್ಲಿ 'ಅಸ್ಯಾಧ್ಯಕ್ಷಃ ಪರಮೇ ವ್ಯೋಮನ್ ಸೋ ಅಂಗವೇದ ಯದಿವಾ ನವೇದ' ಎಂಬ ಶ್ರುತಿವಾಕ್ಯವಿದೆ. ಭಗವಂತನ ಮಹಿಮೆ ಎಷ್ಟು ಅಪಾರವೆಂಬುದನ್ನು ಈ ಸೂಕ್ತಿ ತಿಳಿಸುತ್ತದೆ. ಆ ಭಗವಂತನೂ ತನ್ನ ಮಹಿಮೆಯನ್ನು ತಿಳಿದಿದ್ದಾನೋ ಇಲ್ಲವೋ ಎಂದು ಶ್ರುತಿ ಸಂದೇಹಪಡುತ್ತಿದೆ. ಈ ಮಹಿಮಾತಿಶಯವನ್ನು ಆ ಸ್ವಾಮಿ ನನ್ನ ಸ್ತೋತ್ರ ರೂಪವಾದ ಮಾತುಗಳಿಂದ ಮರೆಮಾಡಿಕೊಳ್ಳುತ್ತಿದ್ದಾನೆ.

ಸ್ವಂ ಸಂಸ್ಕೃತದ್ರಾವಿಡವೇದ–ಸೂಕ್ತ್ಯೈಃ
ಭ್ರಾಂತಂ ಮದುಕ್ತ್ಯೈಃ ಮಲಿನೀಕರೋತಿ ।
ಶ್ರೀರಂಗಕವ್ರ್ಯಃ ಕಲಭಂ ಕ ಏವ
ಸ್ನಾತ್ವಾಪಿ ಧೂಲೀರಸಿಕಂ ನಿಷೇದ್ಧಾ ॥ ॥೧೬॥

(ಶ್ರೀ ರಂಗ ಕಮ್ರಃ) ಶ್ರೀ ರಂಗದಲ್ಲಿ ವಾಸ ಮಾಡುವುದರಲ್ಲಿ ಆಶೆಯುಳ್ಳ ಶ್ರೀ ರಂಗನಾಥನು (ಸಂಸ್ಕೃತದ್ರಾವಿಡ ವೇದ ಸೂಕ್ತೈಃ) ಸಂಸ್ಕೃತ ವೇದ ಮತ್ತು ದ್ರಾವಿಡ ವೇದ ಇವುಗಳ ಸೂಕ್ತಿಗಳಿಂದ (ಭಾಂತಂ) ಪ್ರಕಾಶಿಸುತ್ತಿರುವ (ಸ್ವಂ) ತನ್ನನ್ನು (ಮದುಕ್ತೈಃ) ನನ್ನ ಮಾತುಗಳಿಂದ (ಮಲಿನೀಕರೋತಿ) ಮಲಿನಗೊಳಿಸಿಕೊಳ್ಳುತ್ತಾನೆ. (ಸ್ನಾತ್ವಾಪಿ) ಸ್ನಾನ ಮಾಡಿದ ಮೇಲೆಯೂ (ಧೂಲೀರಸಿಕಂ) ಧೂಳಿಯನ್ನು ಮೇಲೆ ಹಾಕಿ ಕೊಳ್ಳುವುಧಕ್ಕೆ ಆಶೆಗೊಂಡ (ಕಲಭಂ) ಆನೆಯನ್ನು (ಕಃಏವ) ಯಾರು ತಾನೇ (ನಿಷೇದ್ಧಾ) ತಡೆಯ ಬಲ್ಲರು ?

ಭಗವಂತನ ಸ್ವರೂಪರೂಪ ವಿಭಾವಾದಿಗಳನ್ನು ಸಂಸ್ಕೃತ ವೇದಗಳು ಹೇಗೋ ಹಾಗೆ ದ್ರಾವಿಡ ಭಾಷೆಯಲ್ಲಿರುವ ದಿವ್ಯ ಪ್ರಬಂಧಗಳೂ ತಿಳಿಯ ಪಡಿಸುತ್ತವೆ. ಅಂಥ ಅಪಾರ ಮಹಿಮನನ್ನು ನಾವು ಸ್ತುತಿಸುವುದೆಂದರೆ ಅವನಿಗೆ ನಾವು ದೋಷವನ್ನೇ ಉಂಟು ಮಾಡಿದಂತೆ ಆಗುತ್ತದೆ. ಅವನ ಮಹಿಮೆಗೆ ತಕ್ಕಂತೆ ಅವನನ್ನು ಸ್ತುತಿಸದೆ ಇರುವುದು ಅವನ ಮಹಿಮೆಯನ್ನು ಕಡಿಮೆ ಮಾಡಿದಂತಾಗಿ ದೋಷಾವಹವಾಗುತ್ತದೆ. ಆದರೆ ಆ ಸ್ವಾಮಿ ತನ್ನನ್ನು ನಾವು ಸ್ತುತಿಸುವಂತೆ ಮಾಡುತ್ತಿದ್ದಾನೆ. ತಾನೇ ತನಗೆ ದೋಷವನ್ನವನು ಉಂಟುಮಾಡಿಕೊಂಡರೆ ತಡೆಯುವವರು ಯಾರು ? ಆನೆ ಸ್ನಾನ ಮಾಡಿದ ಮೇಲೆ ತನ್ನ ಮೈಮೇಲೆ ತಾನೇ ಧೂಳಿಯನ್ನು ಹಾಕಿ ಕೊಳ್ಳಲು ಬಯಸುವುದಿಲ್ಲವೇ ? ಅದನ್ನು ತಡೆಯಬಲ್ಲವರಾರು ? ಭಗವಂತನ ವಾತ್ಸಲ್ಯ ಹಾಗೂ ಔದಾರ್ಯ ಗುಣಗಳನ್ನು ಇದು ಪ್ರಕಾಶ ಪಡಿಸುತ್ತದೆ.

ಕಿಂತು ಪ್ರಪತ್ತಿ ಬಲ–ತಾರಿತ–ವಿಷ್ಣುಮಾಯಾ
ಮುದ್ವಂಶರಾಜಕುಲ–ದುರ್ಲಲಿತಂ ಕಿಲೈವಂ ।
ಶ್ರೀರಂಗರಾಜಕಮುಲಾಪಪದಲಾಲಿತತ್ವಂ
ಯದ್ವಾಪರಾಧ್ಯತಿ ಮಮ ಸ್ತುತಿಸಾಹಸೇಽಸ್ಮಿನ್ ॥ ॥೧೭॥

(ಕಿಂತು) ಆದರೂ (ಪ್ರಪತ್ತಿಬಲ) ಶರಣಾಗತಿಯ ಬಲದಿಂದ (ತಾರಿತ) ದಾಟಿಸಲ್ಪಟ್ಟ (ವಿಷ್ಣುಮಾಯಾ) ಭಗವಂತನ ಮಾಯೆಯನ್ನುಳ್ಳ (ಮದ್ವಂಶೆ) ನನ್ನ ವಂಶದಲ್ಲಿ ಹಿಂದಿನ ಹಿರಿಯರ (ರಾಜಕುಲದುರ್ಲಲಿತಂ) ಶ್ರೇಷ್ಠವಾದ ಕುಲದಲ್ಲಿ ಹುಟ್ಟಿದುದರಿಂದ ಉಂಟಾದ ಕುಲದ ಮದವು (ಏವಂ ಕಿಲ) ಹೀಗೆ ಸ್ತೋತ್ರ ಮಾಡುವುದರಲ್ಲಿ ಕೈಹಾಕುವಂತೆ ಮಾಡಿತಲ್ಲವೇ? (ಯದ್ವಾ) ಅಲ್ಲದೆ ಹೋದರೆ (ಶ್ರೀ ರಂಗರಾಜ ಕಮಲಾ) ಶ್ರೀ ರಂಗನಾಥ ಮತ್ತು ಶ್ರೀ ರಂಗನಾಯಕಿ ಇವರ (ಪದ) ಪಾದಗಳಲ್ಲಿ (ಲಾಲಿತತ್ವಂ) ಲಾಲನೆ ಮಾಡಿ ಬೆಳೆಸಲ್ಪಟ್ಟದು (ಮಮ) ನನಗುಂಟಾದ (ಅಸ್ಮಿನ್ ಸ್ತುತಿಸಾಹಸೇ) ಈ ಸ್ತೋತ್ರ ಮಾಡಬೇಕೆಂಬುವ ಸಾಹಸದಲ್ಲಿ (ಅಪರಾಧ್ಯತಿ) ಅಪರಾಧ ವೆಸಗಿದೆ.

ಹಾಗಾದರೆ ಭಗವಂತನನ್ನು ಸ್ತೋತ್ರ ಮಾಡುವ ಸಾಹಸಕ್ಕೆ ಏಕೆ ಕೈ ಹಾಕಿದಿರಿ ? ಎಂದು ಕೇಳಿದರೆ ಅದಕ್ಕೆ ಉತ್ತರ ಇಲ್ಲಿದೆ. ಭಗವಂತನಲ್ಲಿ ಶರಣಾಗತಿ ಮಾಡಿ ಅದರಿಂದ ಭಗವಂತನ ಅನುಗ್ರಹ ಪಡೆದುಕೊಂಡು ಅವನ ಮಾಯೆಯನ್ನು ದಾಟಿದ ಮಹಾಮಹಿಮರ ವಂಶದಲ್ಲಿ ತಾವು ಜನಿಸಿದವರೆಂಬ ಭಾವ ಹೀಗೆ ಅವನನ್ನು ಸ್ತೋತ್ರ ಮಾಡುವುದಕ್ಕೆ ಪ್ರೇರೇಪಿಸಿರಬೇಕು ಎಂದು ಅನುಭವಿಸಿದ್ದಾರೆ. ಶ್ರೀ ರಂಗನಾಥನೂ ಶ್ರೀ ರಂಗನಾಯಕೀದೇವಿಯೂ ತಮ್ಮನ್ನು ಕರುಣಾಕಟಾಕ್ಷಗಳಿಂದ ನೋಡಿ ಬೆಳೆಸಿದುದು ಇದಕ್ಕೆ ಕಾರಣ ವಾಗಿರಬೇಕೆಂದು ಹೇಳಿದ್ದಾರೆ. ಜನ್ಮಪ್ರಭೃತಿ ತಮಗೆ ಭಗವಂತನ ಅನುಗ್ರಹ ಉಂಟಾದುದನ್ನೂ ಹಿರಿಯರ ಅನುಗ್ರಹದ ಕಾರಣ ಭಗವತ್ಪರತೆ ಉಂಟಾದುದನ್ನೂ ಅನುಸಂಧಾನ ಮಾಡಿ ಆ ಪರಾತ್ಪರನನ್ನು ಸ್ತೋತ್ರ ಮಾಡದೆ ಆತ್ಮಧಾರಣವು ತಮಗೆ ಸಾಧ್ಯವಾಗದೆ ಇದ್ದ ದೆಶೆಯನ್ನು ಸೂಚಿಸಿದ್ದಾರೆ. ಅವನನ್ನು ಸ್ತುತಿಸುವುದು ತಮಗೆ ಸ್ವರೂಪವೇ ಆಗಿದೆ ಎಂದು ನಿರೂಪಿಸಿದ್ದಾರೆ.

ನಾಥಸ್ಯ ಚ ಸ್ವಮಹಿಮಾರ್ಣವ-ಪಾರದೃಶ್ವ-
ವಿಜ್ಞಾನ-ವಾಗ್ವಿಲಸಿತಂ ಸಹತೇ ನ ವೇದಃ ।
ಆಪೇಕ್ಷಿಕಂ ಯದಿ ತದಸ್ತಿ ಮಮಾಪಿ ತೇನ
ಶ್ರೀರಂಗಿಣಃ ಸ್ತುತಿವಿಧಾವಹಮಧ್ಯಕಾರ್ಷಂ ॥ ॥೧೮॥

(ವೇದಃ ಚ) ವೇದವೂ ಕೂಡ (ನಾಥಸ್ಯ) ಜಗನ್ನಾಥನಾದ ಸ್ವಾಮಿಗೆ (ಸ್ವಮಹಿಮ-ಅರ್ಣವ-ಪಾರದೃಶ್ವ-ವಿಜ್ಞಾನವಾಗ್ವಿಲಸಿತಂ ನ ಸಹತೇ) ಭಗವಂತನ ವೈಭವದ ಸಾಗರವನ್ನು ದಾಟುವ ಜ್ಞಾನವಿರುವುದಾಗಿ ಹೇಳಲಾರದೆ ನಿಂತಿದೆ. (ಆಪೇಕ್ಷಿಕಂ ಯದಿ) ಸರ್ವಜ್ಞನಾದ ಭಗವಂತನನ್ನು ಸ್ತುತಿಸುವುದರಲ್ಲಿ ತನಗಿಂತ ಕಡಿಮೆಯಾಗಿರುವವರಿಗಿಂತ ತಾನು ಸ್ತುತಿಸಲು ಶಕ್ತನೆಂಬ ಆಪೇಕ್ಷಿಕವಾದ ಅಧಿಕಾರ ಇರುವುದೆಂದರೆ (ತತ್) ಆ ಅಧಿಕಾರವು (ಮಮಾಪಿ ಅಸ್ತಿ) ನನಗೂ ಇದೆ. (ತೇನ) ಆದರಿಂದ (ಶ್ರೀ ರಂಗಿಣಃ) ಶ್ರೀ ರಂಗನಾಥನ (ಸ್ತುತಿವಿಧೌ) ಸ್ತೋತ್ರದ ರಚನೆಯಲ್ಲಿ (ಅಹಂ) ನಾನು (ಅಧ್ಯಕಾರ್ಷಂ) ಅಧಿಕಾರಿಯಾಗಿ ಅನ್ವಯಿಸಿದೆನು.

ಆಳವಂದಾರ್ ಅವರು 'ಯದ್ವಾ ಶ್ರಮಾವಧಿ ಯಥಾಮತಿ ವಾಪಿ ಅಶಕ್ತಃ' ಎಂದು ಹೇಳಿರುವುದಕ್ಕೆ ಇದು ಸದೃಶವಾಗಿದೆ. ಸರ್ವಜ್ಞನಾದ ಭಗವಂತನಿಗೇ ಅವನ ಮಹಿಮೆ ತಿಳಿಯದೆಂದು ವೇದ ಹೇಳುವುದಷ್ಟೇ? ಹಾಗಿರಲು ವೇದವು ಭಗವಂತನನ್ನು ಹೇಗೆ ಸ್ತುತಿಸಬಲ್ಲದು? ವೇದಕ್ಕೆ ಆಪೇಕ್ಷಿಕವಾದ ಅಧಿಕಾರ ಉಂಟೆಂದು ಹೇಳಬಹುದು. ತನಗಿಂತಲೂ ಜ್ಞಾನದಲ್ಲಿ ಕಡಿಮೆಯಾಗಿರುವವರಿಗಿಂತ ತಾನು ವಿಶಿಷ್ಟನಾಗಿರುವುದರಿಂದ ತನಗೆ ಅಧಿಕಾರವಿದೆ ಎಂದು ತಿಳಿದರೆ ಅದು ಆಪೇಕ್ಷಿಕವಾದ ಅಧಿಕಾರ. ಅಂಥ ಅಧಿಕಾರವು ತಮಗೂ ಬರುವುದೆಂದು ಇಲ್ಲಿ ಭಟ್ಟರವರು ಅನುಸಂಧಾನ ಮಾಡಿದ್ದಾರೆ. ಭಗವಂತನನ್ನು ಸ್ತುತಿಸುವುದಕ್ಕೆ ತಮಗೂ ಅಧಿಕಾರ ಉಂಟೆಂದು ಹೀಗೆ ಇಲ್ಲಿ ಸಮರ್ಥಿಸಿಕೊಂಡಿದ್ದಾರೆ.

ಅನ್ಯತ್ರಾತದ್ಗುಣೋಕ್ತಿರ್ಭಗವತಿ ನ
ತದುತ್ಕರ್ಷಚೌರ್ಯೈಃ ಪರೇಷಾಂ
ಸ್ತುತ್ಯತ್ವಾದ್ಯಾವದರ್ಥಾ ಫಣಿತಿರಪಿ
ತಥಾ ತಸ್ಯ ನಿಸ್ಸೀಮಕತ್ವಾತ್ ।
ಆಮ್ನಾಯಾನಾಮಸೀಮ್ನಾಮಪಿ ಹರಿವಿಭವೇ
ವರ್ಷಬಿಂದೋರಿವಾಬ್ಧೌ
ಸಂಬಂಧಾತ್ ಸ್ವಾತ್ಮಲಾಭೋ ನ ತು ಕಬಲನತಃ
ಸ್ತೋತುರೇವಂ ನ ಕಿಂ ಮೇ ॥ ॥೧೯॥

(ಅತದ್ಗುಣೋಕ್ತಿಃ) ಸ್ತುತಿಸಲ್ಪಡುವವರಲ್ಲಿ ಇಲ್ಲದ ಗುಣಗಳನ್ನು ಆರೋಪಿಸಿ ಮಾಡುವ ಸ್ತುತಿಯು (ಅನ್ಯತ್ರ) ಭಗವಂತನನ್ನು ಬಿಟ್ಟು ಬೇರೆಯವರ ಬಗೆಗೆ ಆಗಬಹುದು. (ಭಗವತಿ) ಗುಣಸಾಗರನಾದ ಭಗವಂತನಲ್ಲಿ (ನ) ಅದು ಅಸಂಭಾವಿತ. ಏಕೆಂದರೆ (ತದುತ್ಕರ್ಷ ಚೌರ್ಯೈಃ) ಆ ಭಗವಂತನ ಹಿರಿಮೆಗಳನ್ನು ಕಳ್ಳತನ ಮಾಡಿ (ಪರೇಷಾಂ ಸ್ತುತ್ಯತ್ವಾತ್) ಮತ್ತೊಬ್ಬರನ್ನು ಸ್ತುತಿಸಬೇಕಾಗಿರುವುದರಿಂದ. (ಯಾವತ್ ಅರ್ಥಾ ಫಣಿತಿಃ ಅಪಿ) ಹಿರಿಮೆಯು ಇರುವಷ್ಟು ಸ್ತುತಿಸಿ ಹೇಳುವ ಮಾತೂ ಸಹ (ತಥಾ) ಹಾಗೆಯೇ ಭಗವಂತನ ಬಗೆಗೆ ಅಸಂಭಾವಿತವು. ಏಕೆಂದರೆ (ತಸ್ಯ ನಿಸ್ಸೀಮಕತ್ವಾತ್) ಭಗವಂತನ ಹಿರಿಮೆ ಎಲ್ಲೆ ಮೀರಿರುವುದರಿಂದ. ಆದರೆ ವೇದಗಳು ಹೇಗೆ ಸ್ತುತಿಸಿದವು ಎಂದು ಕೇಳಿದರೆ (ಅಸೀಮ್ನಾಂ) ಎಲ್ಲೆ ಇಲ್ಲದ (ಆಮ್ನಾಯಾನಾಂ ಅಪಿ) ವೇದಗಳಿಗೂ (ವರ್ಷಬಿಂದೋಃ ಅಬ್ಧೌ ಇವ ಹರಿವಿಭವೇ ಸಂಬಂಧಾತ್ ಸ್ವಾತ್ಮಲಾಭಃ) ಮಳೆಯ ಹನಿ ಸಮುದ್ರದಲ್ಲಿ ಬೀಳುವುದರಿಂದ ಸತ್ತೆಯನ್ನು ಹೊಂದುವಂತೆ ಭಗವಂತನ ಹಿರಿಮೆಯನ್ನು ಹೇಳುವುದರಲ್ಲಿ ಅನ್ವಯಿಸಿರುವುದರಿಂದ ಅವು ತಮ್ಮ ಸ್ವರೂಪ ಲಾಭವನ್ನು ಪಡೆಯುತ್ತವೆ-ಅಷ್ಟೇ. (ನ ತು ಕಬಲನತಃ) ಆದರೆ ಭಗವದ್ವೈಭವವನ್ನು ಪೂರ್ಣವಾಗಿ ಕಬಳಿಸುವುದರಿಂದ ಎಂದರೆ ಅನುಭವಿಸುವುದರಿಂದ ಅಲ್ಲ. (ಸ್ತೋತುಃ ಮಮ) ಸ್ತೋತ್ರ ಮಾಡಲು ಹೊರಟ ನನಗೂ (ಏವಂ ನ ಕಿಂ ?) ಹೀಗೆ ಸಂಬಂಧದಿಂದ ಸ್ವಾತ್ಮಲಾಭ ಏಕೆ ಆಗದು ?

ಸ್ತೋತ್ರ ಮಾಡುವುದು ಎರಡು ಬಗೆಯಾಗಿ ಆಗಬಹುದು. ಒಬ್ಬರಲ್ಲಿ ಇಲ್ಲದೆ ಇರುವ ಗುಣಗಳನ್ನು ಅವರಲ್ಲಿ ಆರೋಪಮಾಡಿ ಹೇಳಬಹುದು. ಅಥವಾ ಇರುವ ಗುಣಗಳನ್ನೆಲ್ಲಾ ಪೂರ್ಣವಾಗಿ ಹೇಳಬಹುದು. ಇವೆರಡು ಬಗೆಯಲ್ಲಿಯೂ ಭಗವಂತನನ್ನು ಸ್ತುತಿಸುವುದಕ್ಕಾಗದು. ಭಗವಂತನಲ್ಲಿ ಇಲ್ಲದೆ ಇರುವ ಗುಣಗಳನ್ನು ಹೇಳುವುದೆಂಬುದು ಆಗದ ಮಾತು. ಅವನಲ್ಲಿ ಇಲ್ಲದ ಗುಣಗಳೇ ಇಲ್ಲ. ಇತರರ ಬಗೆಗೆ ಅದು ಸಾಧ್ಯವಾಗಬಹುದಷ್ಟೇ ? ಹಾಗೆಯೇ ಅವನಲ್ಲಿರುವ ಗುಣಗಳನ್ನೆಲ್ಲಾ ಪೂರ್ಣವಾಗಿ ಸ್ತುತಿಸುವುದೂ ಅಸಾಧ್ಯ. ಏಕೆಂದರೆ ಅವನ ಗುಣಗಳು ಅಪರಿಚ್ಛಿನ್ನವಾದವು. ಅವು ಗಳನ್ನೆಲ್ಲಾ ಹೇಳುವುದು ಅಸಂಭವ.

'ಮತಿಕ್ಷಯಾತ್ ನಿವರ್ತಂತೇ ನ ಗೋವಿಂದ ಗುಣಕ್ಷಯಾತ್' ಎಂದಲ್ಲವೇ ಅನುಭವಿಸಿರುವುದು ? ಹಾಗಾದರೆ ವೇದಗಳು ಹೇಗೆ ಅವನನ್ನು ಸ್ತುತಿಸಬಲ್ಲವು ? ಅವೂ ಸಹ ಅವನ ಗುಣಗಳ ಒಂದಂಶವನ್ನು ಮಾತ್ರ ವರ್ಣಿಸುತ್ತವೆ ; ಪೂರ್ಣವಾಗಿ ಅವನ ವೈಭವವನ್ನು ತಿಳಿಯಲಿಲ್ಲ ಹಾಗೂ ಹೇಳಲಿಲ್ಲ. 'ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ' ಎಂದಂತೆ. ವೇದಗಳು ಅವನನ್ನು ಸ್ತುತಿಸಿ ಸ್ವರೂಪ ಲಾಭವನ್ನು ಪಡೆಯುತ್ತವೆ. ಹಾಗೆಯೇ ನಮಗೂ ಭಗವಂತನನ್ನು ನಮ್ಮ ಬುದ್ಧಿಗನುಸಾರ ಶಕ್ತಿಗನುಸಾರ ಸ್ತುತಿಸಿದರೇನೇ ಸ್ವರೂಪಲಾಭವಾಗುತ್ತದೆ. ಆದುದರಿಂದ ಅವನನ್ನು ಸ್ತುತಿಸುವುದು ನಮಗೆ ಸ್ವರೂಪ ಪ್ರಾಪ್ತವಾದುದೇ ಆಗಿದೆ.

**ಕಾವೇರೀಮವಗಾಹಿಷೀಯ ಭಗವದ್ಭೋಗಾಂತರಾಯೀಭವತ್**
**ಕರ್ಮಕ್ಲೇಶ-ಫಲಾಶಯ-ಪ್ರಶಮನೋದ್ವೇಲಾಮಲ-ಸ್ರೋತಸಂ ।**
**ಜಂತೋಸ್ಸಂಸರತೋಽರ್ಚಿರಾದಿ-ಸರಣಿ-ವ್ಯಾಸಂಗ-ಭಂಗಾಯ ಯಾ**
**ಲೋಕೇಽಸ್ಮಿನ್ವಿರಜೇವ ವೇಲ್ಲಿತಜಲಾ ಶ್ರೀರಂಗಮಾಲಿಂಗತಿ ॥ ॥೨೦॥**

(ಯಾ) ಯಾವ ನದಿಯು (ಸಂಸರತಃ) ಸಂಸಾರಿಯಾದ (ಜಂತೋಃ) ಪ್ರಾಣಿಗೆ (ಅರ್ಚಿರಾದಿ ಸರಣಿವ್ಯಾಸಂಗ ಭಂಗಾಯ) ಅರ್ಚಿರಾದಿ ಮಾರ್ಗದಲ್ಲಿ

ಹೋಗಿ ಪಟ್ಟ ಶ್ರಮದ ಪರಿಹಾರಕ್ಕಾಗಿ (ಅಸ್ಮಿನ್ ಲೋಕೇ) ಈ ಲೋಕದಲ್ಲಿ (ವೇಲ್ಲಿತಜಲಾ) ಅಲೆಗಳಿಂದ ತುಳುಕುವ ತೀರ್ಥವನ್ನುಳ್ಳ (ವಿರಜಾ ಇವ) ವಿರಜಾನದಿಯಂತೆ ಇರುತ್ತಾ (ಶ್ರೀರಂಗಂ) ಶ್ರೀರಂಗ ಕ್ಷೇತ್ರವನ್ನು (ಆಲಿಂಗತಿ) ಆಲಂಗಿಸಿಕೊಂಡಿರುವುದೋ (ತಾಂ) ಅಂಥ (ಭಗವದ್ಭೋಗ) ಭಗವಂತನ ಅನುಭವಕ್ಕೆ (ಅಂತರಾಯೀ ಭವತ್) ವಿಘ್ನಗಳಾಗಿರುವ (ಕರ್ಮ) ಪುಣ್ಯಪಾಪ ರೂಪ ಕರ್ಮಗಳೇನು (ಕ್ಲೇಶ) ಅವಿದ್ಯಾದಿ ಕಷ್ಟಗಳೇನು (ಫಲ) ಕರ್ಮಫಲ ಗಳೇನು (ಆಶಯ) ವಾಸನೆ ಮೊದಲಾದುವೇನು ಇವುಗಳನ್ನು (ಪ್ರಶಮನ) ಹೋಗಲಾಡಿಸುವುದೂ (ಉದ್ವೇಲ) ದಡವನ್ನು ಮೀರಿ ಹರಿಯುವುದೂ (ಅಮಲ) ನಿರ್ಮಲವಾಗಿರುವುದೂ ಆದ (ಸ್ರೋತಸಂ) ಪ್ರವಾಹವನ್ನುಳ್ಳ (ಕಾವೇರೀಂ) ಕಾವೇರೀ ನದಿಯಲ್ಲಿ (ಅವಗಾಹಿಷೀಯ) ಮುಳುಗಿ ಅವಗಾಹ ಸ್ನಾನ ಮಾಡುತ್ತೇನೆ.

'ಕಾವೇರೀ ವಿರಜಾ ಸೇಯಂ ವೈಕುಂಠಂ ರಂಗಮಂದಿರಂ ।
ವಾಸುದೇವೋ ರಂಗೇಶಃ ಪ್ರತ್ಯಕ್ಷಂ ಪರಮಂ ಪದಂ ॥

ಎಂದು ಹೇಳಿದಂತೆ ಕಾವೇರಿಯು ವಿರಜಾ ನದಿಯೆಂದೂ ಶ್ರೀರಂಗನಾಥನೇ ಪರವಾಸುದೇವನೆಂದೂ ಶ್ರೀ ರಂಗನಾಥನ ಮಂದಿರವೇ ವೈಕುಂಠವೆಂದೂ ಇಲ್ಲಿ ಭಾವಿಸಿದೆ. ದೇವಸ್ಥಾನಕ್ಕೆ ಹೋಗುವ ಮಾರ್ಗವೇ ಅರ್ಚಿರಾದಿ ಮಾರ್ಗ. ಅಂಥ ದಿವ್ಯವಾದ ಕಾವೇರಿಯ ತೀರ್ಥದಲ್ಲಿ ನಾನು ವಿರಜಾನದಿಯಲ್ಲಿ ಸ್ನಾನ ಮಾಡುವಂತೆ ಅವಗಾಹಿಸುತ್ತೇನೆ ಎಂದು ಇಲ್ಲಿ ಅನುಭವಿಸಿದೆ.

ದುಗ್ಧಾಬ್ಧಿರ್ಜನಕೋ ಜನನ್ಯಹಮಿಯಂ ಶ್ರೀರೇವ ಪುತ್ರೀ ವರಃ
ಶ್ರೀರಂಗೇಶ್ವರ ಏತದರ್ಹಮಿಹ ಕಿಂ ಕುರ್ಯಾಮಿತೀವಾಕುಲಾ ।
ಚಂಚಚ್ಚಾಮರ–ಚಂದ್ರ–ಚಂದನ–ಮಹಾಮಾಣಿಕ್ಯ
ಮುಕ್ತೋತ್ಕರಾನ್
ಕಾವೇರೀ ಲಹರೀಕರೈರ್ವಿದಧತೀ ಪರ್ಯೇತಿ ಸಾ ಸೇವ್ಯತಾಂ ॥೨೧॥

(ದುಗ್ಧಾಬ್ಧಿಃ) ಕ್ಷೀರ ಸಾಗರವು (ಜನಕಃ) ತಂದೆಯು. (ಅಹಂ) ಆ ಸಾಗರ ಪತ್ನಿಯಾದ ನಾನು (ಜನನೀ) ತಾಯಿ. (ಇಯಂ ಶ್ರೀಃ ಏವ) ಈ ಶ್ರೀ ರಂಗನಾಯಕಿಯೇ (ಪುತ್ರೀ) ಮಗಳು. (ಶ್ರೀ ರಂಗೇಶ್ವರಃ) ಶ್ರೀ ರಂಗನಾಥನು (ವರಃ) ಮದುಮಗ. (ಇಹ) ಹೀಗೆ ಇರಲು (ಏತತ್ ಅರ್ಹಂ) ಈ ಮಗಳಿಗೂ ಅಳಿಯನಿಗೂ ತಕ್ಕುದಾದ (ಕಿಂಕುರ್ಯಾಂ) ಯಾವ ಉಡುಗೊರೆಯನ್ನು ಕೊಡಲಿ? (ಇತಿ) ಹೀಗೆಂದು (ಕಾವೇರೀ) ಕಾವೇರಿಯು (ಆಕುಲಾ ಇವ) ವ್ಯಾಕುಲಗೊಂಡಂತೆ (ಚಂಚತ್) ಪ್ರಕಾಶಿಸುವ (ಚಾಮರ) ಚಾಮರಗಳೇನು (ಚಂದ್ರ) ಪಚ್ಚಕರ್ಪೂರವೇನು (ಚಂದನ) ಶ್ರೀಗಂಧದ ಮರಗಳೇನು (ಮಹಾಮಾಣಿಕ್ಯ) ಬೆಲೆಬಾಳುವ ರತ್ನಗಳೇನು (ಮುಕ್ತ) ಮುತ್ತುಗಳೇನು ಇವುಗಳ (ಉತ್ಕರಾನ್) ಸಮೂಹವನ್ನು (ಲಹರೀಕರೈಃ) ಅಲೆಗಳಾದ ಕೈಗಳಿಂದ (ವಿದಧತೀ ಸತಿ) ಧರಿಸಿಕೊಂಡು ಬಂದು (ಪರ್ಯೇತಿ) ಹರಿಯುತ್ತಿದೆ. (ಸಾ) ಅಂಥ ಕಾವೇರಿಯು (ಸೇವ್ಯತಾಂ) ಜನಗಳಿಂದ ಸೇವಿಸಲ್ಪಡಬೇಕು.

ಕಾವೇರೀ ನದಿಯು ಹೇಗೆ ಮಾನ್ಯನಾದ ಶ್ರೀ ರಂಗನಾಥನನ್ನು ಸನ್ಮಾನಿಸುತ್ತಿದೆ ಎಂದು ಸುಂದರವಾಗಿ ಇಲ್ಲಿ ವರ್ಣಿಸಿದ್ದಾರೆ. ಕಾವೇರಿಯು ಸಮುದ್ರರಾಜನ ಪತ್ನಿಯೆಂದೂ ಶ್ರೀ ರಂಗನಾಯಕಿಯು ಇವರ ಮಗಳೆಂದೂ ಶ್ರೀ ರಂಗನಾಥನೂ ಅಳಿಯನೆಂದೂ ಚಿತ್ರಿಸಿ ಅಂಥ ಸನ್ಮಾನ್ಯನಾದ ಅಳಿಯನಿಗೆ ತಕ್ಕ ಉಡುಗೊರೆಯನ್ನು ತನ್ನ ಅ ಲೆ ಗ ಳೆಂ ಬ ಕೈಗಳಿಂದ ಅವಳು ಕೊಡುತ್ತಿದ್ದಾಳೆಂದು ಇಲ್ಲಿ ಉತ್ಪ್ರೇಕ್ಷಿಸಿದೆ. ಅಂಥ ಕಾವೇರೀ ನದಿಯನ್ನು ಸೇವಿಸಿ ಎಂದು ಉಪದೇಶಿಸಿದ್ದಾರೆ.

**ತೀರ್ಥಂ ಶುಂಧತಿ ಪಾತಿ ನಂದನತರೂನ್ ರಥ್ಯಾಂಗಣಾನ್ಯುಕ್ಷತಿ**
**ಸ್ನಾನೀಯಾರ್ಹಣಪಾನವಾರಿ ವಹತಿ ಸ್ನಾತಃ ಪುನೀತೇ ಜನಾನ್।**
**ಶ್ಯಾಮಂ ವೇದರಹೋ ವ್ಯನಕ್ತಿ ಪುಲಿನೇ ಫೇನೈರ್ಹಸಂತೀವ ತತ್**
**ಗಂಗಾಂ ವಿಷ್ಣುಪದೀತ್ವ ಮಾತ್ರ-ಮುಖರಾಂ ಹೇಮಾಪಗಾ**
**ಹಂತ್ಯಘಂ ॥ ॥೨೨॥**

(ಹೇಮಾಪಗಾ) ಸ್ವರ್ಣವೆಂದು ಕರೆಯಲ್ಪಡುವ ಕಾವೇರೀ ನದಿಯು (ತೀರ್ಥಂ) ತೀರ್ಥವೆಂಬ ಹೆಸರು ಪಡೆದ ಪುಣ್ಯ ಜಲಗಳನ್ನು (ಶುಂಧತಿ) ಪರಿಶುದ್ಧಗೊಳಿಸುತ್ತದೆ. (ನಂದನತರೂನ್) ನಂದನ ವನದಲ್ಲಿರುವ ವೃಕ್ಷಗಳನ್ನು (ಪಾತಿ) ಕಾಪಾಡುತ್ತದೆ. (ರಥ್ಯಾಂಗಣಾನಿ) ರಸ್ತೆಗಳನ್ನೂ ನಾಲ್ಕು ರಸ್ತೆಗಳು ಸೇರುವ ಚೌಕಗಳನ್ನೂ (ಉಕ್ಷತಿ) ನೆನೆಸುತ್ತದೆ. (ಸ್ನಾನೀಯಾರ್ಹಣ ಪಾನವಾರಿ) ಭಗವಂತನ ಸ್ನಾನಕ್ಕೂ, ಭಗವಂತನ ಪೂಜೆಗೂ ಪಾನೀಯಕ್ಕೂ ಯೋಗ್ಯವಾದ ತೀರ್ಥವನ್ನು (ವಹತಿ) ವಹಿಸಿಕೊಂಡಿದೆ. (ಸ್ನಾತಃ) ಸ್ನಾನ ಮಾಡುವ (ಜನಾನ್) ಜನಗಳನ್ನು (ಪುನೀತೇ) ಶುದ್ಧಿಗೊಳಿಸುತ್ತದೆ. (ಶ್ಯಾಮಂ) ಕಪ್ಪು ಬಣ್ಣವುಳ್ಳದಾಗಿ (ವೇದರಹಃ) ವೇದಗಳ ರಹಸ್ಯ ತತ್ತ್ವವಾದ ಭಗವಂತನನ್ನು (ಪುಲಿನೇ) ತನ್ನ ನಡುವೆ ಇರುವ ಮಳಲಿನ ದ್ವೀಪದಲ್ಲಿ (ವ್ಯನಕ್ತಿ) ತೋರಿಸಿಕೊಡುತ್ತದೆ. (ತತ್) ಆದುದರಿಂದ (ವಿಷ್ಣುಪದೀತ್ವ ಮಾತ್ರ ಮುಖರಾಂ) ಭಗವಂತನ ಪಾದದಿಂದ ಹುಟ್ಟಿದುದೆಂಬುವುದಷ್ಟರಿಂದಲೇ ಅಹಂಕಾರಗೊಂಡು ಗರ್ಜಿಸುವ (ಗಂಗಾಂ) ಗಂಗಾ ನದಿಯನ್ನು (ಫೇನೈಃ) ನೊರೆಗಳಿಂದ (ಹಸಂತೀ ಇವ ಸ್ಥಿತಾ) ಹಾಸ್ಯ ಮಾಡುವಂತೆ ಇರುತ್ತಿರುವವಳಾಗಿ ಇವಳು (ಅಘಂ) ನಮ್ಮ ಪಾಪವನ್ನು (ಹಂತು) ಹೋಗಲಾಡಿಸಲಿ.

ತುಲಾ ಕಾವೇರಿ ಮಾಹಾತ್ಮ್ಯದಲ್ಲಿ ಹೇಳಿರುವಂತೆ ತುಲಾ ಮಾಸದಲ್ಲಿ ಎಲ್ಲ ತೀರ್ಥಗಳೂ ಕಾವೇರಿಯಲ್ಲಿ ಬಂದು ಮಿಂದು ತಮ್ಮ ಪಾಪವನ್ನು ಹೋಗಲಾಡಿಸಿಕೊಳ್ಳುವುವಂತೆ. ಕಾವೇರಿಗೆ ಭಗವಂತನೊಡನೆ ನಿತ್ಯ ಸಂಬಂಧವಿದೆ. ಕಾವೇರೀ ನದಿಯು ಬಹುಮುಖವಾದ ಹಿರಿಮೆಯನ್ನು ಹೊಂದಿ ಗಂಗಾನದಿಗಿಂತಲೂ ಹೆಚ್ಚಳವನ್ನು ಹೊಂದಿದೆ ಎಂದು ಇಲ್ಲಿ ವರ್ಣಿಸಿದೆ. ಗಂಗಾನದಿ ಭಗವಂತನ ಪಾದದಲ್ಲಿ ಹುಟ್ಟಿದ ಕಾರಣದಿಂದಲೇ ಆಹಂಕಾರಗೊಂಡಿದೆ ಎಂದು ಉತ್ಪ್ರೇಕ್ಷಿಸಿ ಆ ಗಂಗಾನದಿಗಿಲ್ಲದ ಅನೇಕ ಅತಿಶಯಗಳು ಕಾವೇರೀ ನದಿಗೆ ಇವೆಯೆಂದು ಇಲ್ಲಿ ಅನುಭವಿಸಿದೆ. ತೊಂಡರಡಿಪ್ಪೊಡಿಯಾಳ್ವಾರ್ರವರು ' ಕಂಗೈಯಿಲ್ ಪುನಿದ ಮಾಯ ಕಾವಿರಿನಡುವುಪಾಟ್ಟು, ಪೂಂಗುನೀರ್ ಪರಂದು ಪಾಯುಂ ಪೂಂ ಪೊಳ್ದಿಲ್ ಅರಂಗಂತನ್ನುಳ್, ಎಾಗಣ್ಮಾಲಿರೈವನೀಶನ್ ಕಿಡಂದದೋರ್ ಕಿಡಕ್ಕೈ

ಕಂಡುಂ, ಎಂಗನುಂ ಮರಂದು ವಾಳ್ಗಿ ಹೇನ್ ಏ ಟ್ರೈಯೇನೇಟ್ರೈಯೇನೇ' ಎಂದು ಅನುಭವಿಸಿರುವುದನ್ನು ಕಾಣಬಹುದು.

**ಅಗಣಿತಗುಣಾವದ್ಯಂ ಸರ್ವಂ ಸ್ಥಿರತ್ರಸಮಪ್ರತಿ-**
**ಕ್ರಿಯಮಪಿ ಪಯಃಪೂರೈರಾಪ್ಯಾಯಯಂತ್ಯನುಜಾಗ್ರತೀ ।**
**ಪ್ರವಹತಿ ಜಗದ್ಧಾತ್ರೀಭೂತ್ವೇವ ರಂಗಪತೇರ್ದಯಾ**
**ಶಿಶಿರಮಧುರಾಽಗಾಧಾ ಸಾ ನಃ ಪುನಾತು ಮರುದ್ವೃಧಾ ॥ ॥೨೩॥**

(ಯಾ) ಯಾವ ಕಾವೇರಿಯು (ಅಪ್ರತಿಕ್ರಿಯಮಪಿ) ಪ್ರಾಯಶ್ಚಿತ್ತ ಯೋಗ್ಯತೆಯೂ ಇಲ್ಲದ (ಸ್ಥಿರತ್ರಸಂ ಸರ್ವಂ) ಸ್ಥಾವರ ಜಂಗಮ ಪದಾರ್ಥಗಳನ್ನೆಲ್ಲಾ (ಅಗಣಿತಗುಣಾವದ್ಯಂ ಯಥಾ ತಥಾ) ಗುಣ ದೋಷಗಳನ್ನು ಎಣಿಸದೆ ಇರುವ ರೀತಿಯಲ್ಲಿ (ಪಯಃ ಪೂರೈಃ) ಜಲ ಪ್ರವಾಹಗಳಿಂದ (ಆಪ್ಯಾಯಯಂತೀ ಸತೀ) ತೃಪ್ತಿ ಪಡಿಸುತ್ತಾ ಇರುತ್ತಿದ್ದು (ಅನುಜಾಗ್ರತೀ) ಜೊತೆಯಲ್ಲಿಯೇ ಎಚ್ಚರವಾಗಿರುತ್ತಾ ಇದ್ದು (ರಂಗಪತೇಃ) ಶ್ರೀ ರಂಗನಾಥನ (ದಯಾಇವ) ಕರುಣೆಯಂತೆ (ಜಗದ್ಧಾತ್ರೀ ಭೂತ್ವಾ) ಜಗತ್ತಿಗೆಲ್ಲಾ ದಾದಿಯಾಗಿ (ಪ್ರವಹತಿ) ಹರಿಯುತ್ತಿದೆಯೇ (ಸಾ) ಅಂಥ (ಶಿಶಿರ – ಮಧುರಾ – ಅಗಾಧಾ) ತಂಪಾಗಿಯೂ ಮಧುರವಾಗಿಯೂ ಆಳವಾಗಿಯೂ ಇರುವ (ಮರುದ್ವೃಧಾ) ಕಾವೇರೀ ನದಿಯು ನಃ) ನಮ್ಮನ್ನು (ಪುನಾತು) ಪರಿಶುದ್ಧಿಗೊಳಿಸಲಿ.

ಶ್ರೀ ರಂಗನಾಥನ ದಯೆಯೇ ಕಾವೇರಿಯಾಗಿ ಪ್ರವಹಿಸುತ್ತಿದೆ ಎಂದು ಇಲ್ಲಿ ಅನುಭವಿಸಿದ್ದಾರೆ. ಭಗವಂತನ ದಯೆ ಹೇಗೆ ಯಾವ ತಾರತಮ್ಯವನ್ನು ನೋಡದೆ ಆಶ್ರಯಿಸುವವರೆಲ್ಲರ ಪಾಪಗಳನ್ನೂ ಹೋಗಲಾಡಿಸುವುದೋ ಹಾಗೆಯೇ ಈ ಕಾವೇರಿ ನದಿಯೂ ಸಹ ತನ್ನ ಜಲಗಳಿಂದ ಎಲ್ಲರಿಗೂ ತೃಪ್ತಿಯನ್ನುಂಟುಮಾಡುತ್ತದೆ. ಭಗವದ್ದಯೆಗೂ ಕಾವೇರಿಗೂ ಸಾಮ್ಯ ಅನೇಕಾಂಶಗಳಲ್ಲಿದೆ. ಭಗವಂತನ ದಯೆ ಹೇಗೆ ಶೀತಲವೂ ಮಧುರವೂ ಆಗಿದೆಯೋ ಹಾಗೆಯೇ ಕಾವೇರಿಯ ಪ್ರವಾಹವೂ ಶೀತಲವೂ ಮಧುರವೂ ಗಾಢವೂ ಆಗಿದೆ.

ತರಲತನು-ತರಂಗೈರ್ಮಂದಮಾಂದೋಲ್ಯಮಾನ-
ಸ್ವತಟವಿಟಪಿರಾಜೀ-ಮಂಜರೀ-ಸುಪ್ತ-ಭೃಂಗಾ ।
ಕ್ಷಿಪತು ಕನಕನಾಮ್ನೀ ನಿಮ್ನಗಾ ನಾರಿಕೇಲ-
ಕ್ರಮುಕಜ-ಮಕರಂದೈರ್ಮಾಂಸಲಾಪಾ ಮದಂಹಃ ॥ ॥೨೪॥

(ತರಲತನು ತರಂಗೈಃ) ಚಂಚಲವಾದ ಕಿರು ಅಲೆಗಳಿಂದ (ಮಂದಂ) ಮೆಲ್ಲ ಮೆಲ್ಲನೆ (ಆಂದೋಲ್ಯಮಾನ) ತೂಗಿಸಲ್ಪಡುವ (ಸ್ವತಟ ವಿಟಪಿ ರಾಜೀ) ತನ್ನ ದಡದಲ್ಲಿರುವ ತೋಟಗಳಲ್ಲಿನ (ಮಂಜರೀ) ಹೂಗೊಂಚಲುಗಳಲ್ಲಿ (ಸುಪ್ತ ಭೃಂಗಾ) ನಿದ್ರಿಸುವ ದುಂಬಿಗಳನ್ನುಳ್ಳುದೂ (ನಾರಿಕೇಳ ಕ್ರಮುಕಜ ಮಕರಂದೈಃ) ತೆಂಗುಗಳಿಂದಲೂ ಅಡಿಕೆ ಮರಗಳಿಂದಲೂ ಹರಿಯುವ ಮಕರಂದಗಳಿಂದ (ಮಾಂಸಲಾಪಾ) ಅಭಿವೃದ್ಧವಾದ ಜಲವುಳ್ಳುದೂ (ಕನಕನಾಮ್ನೀ) ಪೊನ್ನಿ ಎಂಬ ಹೆಸರುಳ್ಳುದೂ ಆದ (ನಿಮ್ನಗಾ) ಕಾವೇರಿ ನದಿಯು (ಮದಂಹಃ) ನನ್ನ ಪಾಪವನ್ನು (ಕ್ಷಿಪತು) ಹೋಗಲಾಡಿಸಲಿ.

ಈ ಶ್ಲೋಕದಲ್ಲಿಯೂ ಕಾವೇರೀ ನದಿಯ ವರ್ಣನೆಯನ್ನು ಮಾಡಿದೆ. ನದಿಯ ತೀರದಲ್ಲಿರುವ ಸುಂದರವಾದ ತೋಟಗಳಲ್ಲಿ ಹೂಗೊಂಚಲುಗಳೂ ಅವುಗಳಲ್ಲಿ ಮೊರೆಯುವ ದುಂಬಿಗಳೂ ಇರುತ್ತವೆ. ನದಿಯ ಅಲೆಗಳು ಒಂದರ ಹಿಂದೆ ಒಂದರಂತೆ ಮೆಲ್ಲಮೆಲ್ಲನೆ ಏಳುತ್ತಾ ಇರುವುದರಿಂದ ಈ ಅಲೆಗಳು ದಡದಲ್ಲಿರುವ ವೃಕ್ಷಗಳ ಹೂಗಳಲ್ಲಿರುವ ದುಂಬಿಗಳನ್ನು ತೂಗಿ ನಿದ್ರೆಮಾಡಿಸುತ್ತಿವೋ ಎಂಬಂತೆ ಇವೆ ಎಂದು ಇಲ್ಲಿ ಕಲ್ಪನೆ ಮಾಡಿದೆ. ನಮ್ಮ ಪಾಪವನ್ನು ಇಂಥ ಕಾವೇರೀಯು ಹೋಗಲಾಡಿಸಲೆಂದು ಇಲ್ಲಿ ಬೇಡಿದೆ.

ಕದಳ-ವಕುಳ-ಜಂಬೂ-ಪೂಗ-ಮಾಕಂದ-ಕಂಠ
ದ್ವಯಸ-ಸರಸ-ನೀರಾಮಂತರಾ ಸಹ್ಯಕನ್ಯಾಂ ।
ಪ್ರಬಲಜಲಪಿಪಾಸಾ ಲಂಬಮಾನಾಂಬುದೌಘ
ಭ್ರಮಕರ-ತರುಬೃಂದಂ ವಂದ್ಯತಾಮಂತರೀಪಂ ॥ ॥೨೫॥

(ಕದಳ) ಬಾಳೆಗಿಡಗಳೇನು (ವಕುಳ) ಬಕುಳ ವೃಕ್ಷಗಳೇನು (ಜಂಬೂ) ನೇರಿಳೆಮರಗಳೇನು (ಪೂಗ) ಅಡಿಕೆ ಮರಗಳೇನು (ಮಾಕಂದ) ಸಿಹಿ ಮಾವಿನ ಮರಗಳೇನು ಇವುಗಳ (ಕಂಠದ್ವಯಸ) ಕುತ್ತಿಗೆಯವರೆಗೂ ತುಂಬಿಕೊಂಡು (ಸರಸ) ಮಾಧುರ್ಯದಿಂದ ಕೂಡಿದ (ನೀರಾಂ) ತೀರ್ಥವನ್ನುಳ್ಳ (ಸಹ್ಯಕನ್ಯಾಂ ಅಂತರಾ) ಕಾವೇರಿ ನದಿಯ ನಡುವೆ ಬಂದು (ಪ್ರಬಲ ಜಲಪಿಪಾಸಾ) ಅಧಿಕವಾದ ಬಾಯಾರಿಕೆಯಿಂದ (ಲಂಬಮಾನ) ಕೆಳಗೆ ಇಳಿದಿರುವ (ಅಂಬುದೌಘ) ಮೇಘ ಸಮೂಹಗಳೋ ಎಂದು (ಭ್ರಮಕರ) ಭ್ರಮವನ್ನುಂಟು ಮಾಡುವ (ತರುಬೃಂದಂ) ತೋಪುಗಳ ಸಮೂಹವನ್ನುಳ್ಳ (ಅಂತರೀಪಂ) ದ್ವೀಪವು (ವಂದ್ಯತಾಂ) ನಮಿಸಲ್ಪಡಲಿ.

ತೀರದ ವೃಕ್ಷಗಳ ಕಂಠಪ್ರದೇಶದವರೆಗೆ ಕಾವೇರಿಯ ಪ್ರವಾಹ ತುಂಬಿಕೊಂಡಿತ್ತು. ನೋಡುವುದಕ್ಕೆ ಆ ತೋಪುಗಳು ಮೇಘಗಳ ಸಮೂಹಗಳಂತೆ ಕಂಡು ಬಂದವೆಂದು ಉತ್ಪ್ರೇಕ್ಷೆ ಮಾಡಲಾಗಿದೆ. ಬಹಳವಾಗಿ ಬಾಯಾರಿದ ನೀಲವಾದ ಮೇಘಗಳು ನದಿಯ ಮೇಲೆ ಬಾಗಿ ನೀರನ್ನು ಹೀರುತ್ತಿರುವುವೋ ಎಂಬಂತೆ ನದಿಯ ಪ್ರವಾಹದಲ್ಲಿ ನಿಂತ ವೃಕ್ಷಗಳ ಶ್ಯಾಮಲವಾದ ಮೇಲ್ಭಾಗಗಳು ಸಾಂದ್ರವಾದ ಹಸಿರು ಎಲೆಗಳ ಕಾರಣ ಕಂಡುಬರುತ್ತವೆ ಎಂದು ವರ್ಣಿಸಲಾಗಿದೆ. ಶ್ರೀರಂಗ ಕ್ಷೇತ್ರದ ಸೊಂಪುತಂಪುಗಳನ್ನಿವು ಸೂಚಿಸುತ್ತವೆ.

**ಯದ್ವಿಷ್ಣೋಃ ಪದಮತಮಃ ಪರೋರಜೋಽಗ್ರ್ಯಂ**
**ಮುಕ್ತಾನಾಮನುವಿರಜಂ ವಿದೀಪ್ರಮಾಹುಃ ।**
**ತತ್ಪುಣ್ಯಂ ಪುಲಿನಮಿದಂ ತಯೋರ್ದ್ವಯೋರ್ಮಧ್ಯೇ**
**ಕಾವೇರೀ ಸ್ಫುರತಿ ತದೀಕ್ಷಿಷೀಯ ನಿತ್ಯಂ ॥ ॥೨೬॥**

(ಅನುವಿರಜಂ) ವಿರಜಾನದಿಯ ಸಮೀಪದಲ್ಲಿ (ಅತಮಃ) ತಮೋಗುಣ ರಹಿತವಾದುದೂ (ಪರೋರಜಃ) ರಜೋಗುಣವಿಲ್ಲದುದೂ (ಅಗ್ರ್ಯಂ) ಶ್ರೇಷ್ಠವಾದುದೂ ಆದ (ಯದ್ವಿಷ್ಣೋಃ ಪದಂ) ಯಾವ ಪರಮಪದವು (ಮುಕ್ತಾನಾಂ ವಿದೀಪ್ರಂ ಆಹುಃ) ಮುಕ್ತರುಗಳಿಗೆ ಪ್ರಕಾಶಿಸುವುದೆಂಬುವುದಾಗಿ

ವೈದಿಕರು ಹೇಳುವರೋ (ತತ್) ಆ (ಪುಣ್ಯಂ) ಪವಿತ್ರವಾದ (ಪುಲಿನಂ) ವಿರಜಾ ನದಿಯ ಮಳಲ ದಂಡೆಯು (ಅದ್ಯ) ಈ ಸಂಸಾರ ದೆಶೆಯಲ್ಲಿಯೂ (ಇದಂತಯಾ) ಇದು ಎಂದು ಪ್ರತ್ಯಕ್ಷವಾಗಿ ತೋರಿಸುವುದಕ್ಕಾಗುವಂತೆ (ಮಧ್ಯೇ ಕಾವೇರೀ) ಕಾವೇರೀ ನದಿಯ ನಡುವೆ (ಸ್ಫುರತಿ) ಪ್ರಕಾಶಿಸುತ್ತಿದೆ. (ತತ್) ಅಂಥ ಸ್ಥಾನವನ್ನು (ನಿತ್ಯಂ) ಎಡೆಬಿಡದೆ (ಈಕ್ಷಿಷೀಯ) ಕಂಡು ಕೊಂಡು ಇರುವಂತೆ ಆಗಲಿ.

ವಿರಜಾ ನದಿಯ ದಡದಲ್ಲಿ ಪರಮಪದ ಇದೆ. ಇದು ರಜಸ್ತಮಸ್ಸುಗಳ ಸಂಬಂಧವಿಲ್ಲದಿದೆ. ನಿತ್ಯಮುಕ್ತರಿಗೆ ಇದು ಸ್ವಯಂ ಪ್ರಕಾಶವಾಗಿರುತ್ತದೆ. ಅಲ್ಲಿ ಹೇಗೆ ಪರಮಪದನಾಥನು ಗೋಚರಿಸುವನೋ ಹಾಗೆಯೇ ಇಲ್ಲಿ ಕಾವೇರೀ ತೀರದಲ್ಲಿ ಶ್ರೀರಂಗ ಕ್ಷೇತ್ರವೆಂಬ ಪರಮಪದದಲ್ಲಿ ಶ್ರೀರಂಗನಾಥನು ವಿರಾಜಿಸು ತ್ತಿದ್ದಾನೆ. ನಿತ್ಯಮುಕ್ತರಿಗೆ ಗೋಚರವಾಗುವ ಆ ಪರಮಪದ ಸಂಸಾರ ದಶೆಯಲ್ಲಿರುವವರೂ ತಮ್ಮ ಕಣ್ಣುಗಳಿಂದ ಕಾಣುವಂತೆ ಕಾವೇರೀ ನದಿಯ ಮಧ್ಯದಲ್ಲಿ ಇಲ್ಲಿಯೇ ಬೆಳಗುತ್ತಿದೆ. ಇದನ್ನೆಂದೆಂದೂ ನಾವು ನೋಡು ವಂತಾಗಲಿ ಎಂದು ಇಲ್ಲಿ ಆಶಿಸಿದೆ.

ತ್ರಯ್ಯಂತ ಪ್ರಹತಿಮತೀಷು ವೈಷ್ಣವಾನಾಂ
ಪ್ರಾಪ್ಯಾಸು ಪ್ರಚುರಭವಶ್ರಮಾಪಹಾಸು ।
ಕಾವೇರೀ ಪರಿಚರಿತಾಸು ಪಾವನೀಷು
ಶ್ರೀರಂಗೋಪವನ-ತಟೀಷು ವರ್ತಿಷೀಯ ॥ ॥೨೭॥

(ತ್ರಯ್ಯಂತ ಪ್ರಹತಿಮತೀಷು) ವೇದಾಂತಗಳ ನಿರಂತರವಾದ ಅಭ್ಯಾಸ ವನ್ನುಳ್ಳವೂ (ಪ್ರಚುರ) ಪ್ರಬಲವಾದ (ಭವಶ್ರಮ) ಸಂಸಾರ ತಾಪಗಳನ್ನು (ಅಪಹಾಸು) ಹೋಗಲಾಡಿಸುವುವೂ (ಪಾವನೀಷು) ಪರಿಶುದ್ಧಗಳಾದವೂ (ವೈಷ್ಣವಾನಾಂ) ಶ್ರೀವೈಷ್ಣವರಿಗೆ (ಪ್ರಾಪ್ಯಾಸು) ಪ್ರವೇಶಿಸುವಸ್ಥಾನಗಳಾದವೂ (ಕಾವೇರೀ ಪರಿಚರಿತಾಸು) ಕಾವೇರಿಯಿಂದ ಸೇವಿಸಲ್ಪಡುವುವಾದವೂ ಆದ

(ಶ್ರೀ ರಂಗೋಪವನ ತಟೀಷು) ಶ್ರೀರಂಗದ ತೋಟಗಳ ಪ್ರಾಂತದಲ್ಲಿ (ವರ್ತಿಷೀಯ) ಬಾಳುವಂತೆ ಆಗಲಿ.

ಇಲ್ಲಿ ವೇದಘೋಷ ಸತತವಾಗಿರುತ್ತದೆ. ನಿರಂತರವಾಗಿ ಆಗುವ ವೇದ ಪಠಣವನ್ನು 'ಪ್ರಹತಿಮತೀಷು' ಎಂದು ಹೇಳಿದೆ. ಹೇಗೆ ಪರಮಪದದಲ್ಲಿ ಸಾಮಗಾನವೋ ಹಾಗೆ ಇಲ್ಲಿ ವೇದಘೋಷ ಇದೆ. 'ತ್ರಯ್ಯಂತ' ಎಂಬುದು ಸಂಸ್ಕೃತ ಮತ್ತು ದ್ರಾವಿಡ ವೇದಗಳೆರಡನ್ನೂ ಹೇಳುತ್ತದೆ. ಇಂಥ ಪವಿತ್ರವಾದ ಕ್ಷೇತ್ರದ ಪರಿಸರಗಳಲ್ಲಿ ನಾನು ಇರುವಂತಾಗಲಿ ಎಂದು ಆಶಿಸಿದೆ ಇಲ್ಲಿ. ಸಂಸಾರ ತಾಪಗಳನ್ನು ಹೋಗಲಾಡಿಸುವ ದಿವ್ಯಕ್ಷೇತ್ರ ಇದು. ಶ್ರೀವೈಷ್ಣವರು ಬಂದು ಸೇರಲು ಆಶಿಸುವಂಥದೂ, 'ತೆಳ್‌ನೀರ್ ಪೊನ್ನಿ ತಿರೈಕ್ಕೈಯಾಲ್ ಅಡಿವರುಡ ಪಳ್ಳಿಕ್ಕೊಳ್ಳುಂ ಕರುಮಣಿಯೈ ಕೋಮಳತ್ತೈ' ನಾಥನನ್ನಾಗಿ ಹೊಂದಿರುವ ಕ್ಷೇತ್ರ ಇದು. ಈ ಕ್ಷೇತ್ರವಾಸವೇ ನಮಗೆ ಪರಮೋಪಾದೇಯವಾದುದು.

**ಸ್ಫುರಿತ-ಶಫರ-ದೀರ್ಯನ್ನಾಲಿಕೇರೀ-ಗುಳುಚ್ಛ**
**ಪ್ರಸ್ರುಮರ-ಮಧುಕುಲ್ಯಾ-ವರ್ಧಿತಾನೋಕಹಾನಿ ।**
**ರತಿಮವಿರತಿ ರಂಗಾರಾಮ-ರಮ್ಯಸ್ಥಲಾನಿ**
**ಕ್ರಮುಕ-ಪನಸ-ಮೋಚಾ-ಮೇಚಕಾನಿ ಕ್ರಿಯಾಸುಃ ॥ ॥೨೮॥**

(ಸ್ಫುರಿತ ಶಫರ ದೀರ್ಯತ್) ಮೇಲೆ ನೆಗೆದ ಮೀನುಗಳ ಸ್ಪರ್ಶದಿಂದ ಒಡೆದ (ನಾಳಿಕೇರೀ ಗುಳುಚ್ಛ) ತೆಂಗಿನ ಕಾಯಿಗಳ ಗೊಂಚಲುಗಳಿಂದ (ಪ್ರಸ್ರುಮರ) ಪ್ರವಹಿಸಿದ (ಮಧು) ಎಳನೀರಿನ (ಕುಲ್ಯಾ) ಕಾಲುವೆಗಳಿಂದ (ವರ್ಧಿತ) ಬೆಳಸಲ್ಪಟ್ಟ (ಅನೋಕಹಾನಿ) ಮರಗಳನ್ನುಳ್ಳವೂ, (ಕ್ರಮುಕ) ಅಡಿಕೆ ಮರಗಳು (ಪನಸ) ಹಲಸಿನಮರಗಳು (ಮೋಚ) ಬಾಳೆಗಿಡಗಳು ಮೊದಲಾದವುಗಳಿಂದ (ಮೇಚಕಾನಿ) ಕಪ್ಪಾಗಿ ಮಾಡಲ್ಪಟ್ಟವೂ ಆದ (ರಂಗಾರಾಮ ರಮ್ಯಸ್ಥಲಾನಿ) ಶ್ರೀರಂಗಕ್ಕೆ ಸೇರಿದ ತೋಟಗಳ ರಮ್ಯವಾದ ಸ್ಥಳಗಳು (ಅವಿರತಿ) ಎಡೆಬಿಡದ (ರತಿಂ) ಸಂತೋಷವನ್ನು (ಕ್ರಿಯಾಸುಃ) ಮಾಡುವಂತಾಗಲಿ.

ತೋಪುಗಳಿಂದ ಸುತ್ತುವರಿಯಲ್ಪಟ್ಟಿದ್ದು ಶ್ರೀರಂಗಕ್ಷೇತ್ರ. ಕ್ಷೇತ್ರವನ್ನು ವರ್ಣಿಸುವ ಮುನ್ನ ಕಾವೇರೀ ನದಿಯನ್ನು ವರ್ಣಿಸಿ ಆ ನದಿಯ ತೀರದಲ್ಲಿ ಸೊಂಪಾಗಿ ಬೆಳೆದ ತೋಪುಗಳನ್ನು ಇಲ್ಲಿ ವರ್ಣಿಸಿದ್ದಾರೆ. 'ಮಡಲ್ ಎಡುತ್ತ ನೆಡು ತೆಂಗಿನ್ ಪಟ್ಟಂಗಳ್ ವೀಟ್ಟ ಮಾಂಕನಿಹಳ್ ತಿರಟ್ಟು ಉರುಟ್ಟಾ ಮಲರ್‌ಶುಮುಂದು ವರುಂ ಸೀರ್' ಎಂದೂ 'ಕಳಿ ಮಲರ್ ಶೇರ್ ಪೊಟ್ಟಿಲ್ ಅರಂಗತ್ತು,' 'ಶೇಲ್ ಆರ್‌ನ್ದ ನೀಡು ಕಟ್ಟನಿ ಶೋಲೈಶೂಟ್ಟನ್ದ', ಎಂದೂ ವರ್ಣಿಸಿರುವಂತೆ ಹೂಗಳ ಮಕರಂದವು ಸ್ರವಿಸುತ್ತಿರುವ ತೋಪುಗಳಾಗಿವೆ ಅವು. ಕಾಲುವೆಗಳಲ್ಲಿ ಚೆನ್ನಾಗಿ ಬೆಳೆದ ಮೀನುಗಳು ಮೇಲೆ ನೆಗೆದಾಗ ಅದರಿಂದ ಒಡೆದ ತೆಂಗುಗಳಿಂದ ಎಳನೀರಿನ ಪ್ರವಾಹ ಕೆಳಕ್ಕೆಹರಿಯುತ್ತದೆ ಯಂತೆ. ಅಂತಹ ಎಳನೀರಿನ ಕಾಲುವೆಗಳಿಂದ ಅಡಕೆ ಮರಗಳು ಬೆಳೆಯುತ್ತವೆ. ತೋಪಿನಲ್ಲಿರುವ ಸಸ್ಯಸಮೃದ್ಧಿಯ ಕಾರಣ ಆ ಕ್ಷೇತ್ರದ ಪರಿಸರವೆಲ್ಲಾ ಶ್ಯಾಮಲವಾಗಿ ಮಾಡಲ್ಪಟ್ಟಿದೆ. ಅಂಥ ಶ್ರೀರಂಗಕ್ಷೇತ್ರ ಭಕ್ತರ ಸಂತೋಷ ವನ್ನು ಹೊಮ್ಮಿಸುವುದಾಗಿದೆ.

ಅಧಿಪರಮಪದಂ ಪುರೀಮಯೋಧ್ಯಾಂ
ಅಮೃತವೃತಾಮಪರಾಜಿತಾಮುಶಂತಿ ।
ಪುಲಿನಮುಪರಿ ರಂಗರಾಜಧಾನೀ
ಪಿಶಿತದೃಶಾಮಪಿ ಸಾ ಪುರಶ್ಚಕಾಸ್ತಿ ॥ ॥೨೯॥

(ಅಧಿಪರಮಪದಂ) ಪರಮ ಪದದಲ್ಲಿ (ಅಮೃತವೃತಾಂ) ವಿರಜಾ ತೀರ್ಥ ದಿಂದ ಸುತ್ತುವರಿಯಲ್ಪಟ್ಟಿದ್ದೂ,ನಿತ್ಯಮುಕ್ತರಿಂದ ಸುತ್ತುವರಿಯಲ್ಪಟ್ಟಿದ್ದೂ (ಅಯೋಧ್ಯಾಂ) ಅಯೋಧ್ಯೆ ಎಂಬ ಹೆಸರನ್ನುಳ್ಳದ್ದೂ (ಅಪರಾಜಿತಾಂ) ಅಪ ರಾಜಿತಾ ಎಂಬ ಹೆಸರನ್ನೂ ಹೊಂದಿದುದೂ ಆದ (ಪುರೀಂ) ಯಾವ ಪಟ್ಟಣ ವನ್ನು (ಉಶಂತಿ) ಇರುವುದೆಂದು ವೈದಿಕರು ಹೇಳುವರೋ (ಸಾ) ಆ ದಿವ್ಯ ನಗರಿಯಾದುದು (ರಂಗ ರಾಜಧಾನೀ) ಶ್ರೀರಂಗನಗರಿಯಾಗಿ (ಪುಲಿನಮುಪರಿ) ಕಾವೇರಿಯ ಮಳಲಿನ ಮೇಲೆ (ಪಿಶಿತ ದೃಶಾಮಪಿ) ಮಾಂಸ ಚಕ್ಷುಸ್ಸು ಗಳನ್ನುಳ್ಳ ನಮ್ಮಂಥವರಿಗೂ (ಪುರಃ) ಕಣ್ಮುಂದೆ (ಚಕಾಸ್ತಿ) ಪ್ರಕಾಶಿಸುತ್ತಿದೆ.

ಶ್ರೀಮನ್ನಾರಾಯಣನ ದಿವ್ಯಧಾಮವಾದ ಶ್ರೀವೈಕುಂಠವನ್ನು ಶ್ರುತಿಯು 'ಯೋ ವೈತಾಂ ಬ್ರಹ್ಮಣೋ ವೇದ ಅಮೃತೇನಾವೃತಾಂ ಪುರೀಂ' ಎಂದೂ 'ದೇವಾನಾಂ ಪೂರಯೋಧ್ಯಾ' 'ಪುರಂ ಹಿರಣ್ಮಯೀಂ ಬ್ರಹ್ಮ ವಿವೇಶಾ ಪರಾಜಿತಾ' ಎಂದು ವರ್ಣಿಸುತ್ತದೆ. ಆ ಶ್ರೀವೈಕುಂಠವೇ ಶ್ರೀರಂಗನಗರಿ ಯಾಗಿ ಕಾವೇರಿಯ ನಡುವೆ ವಿರಾಜಮಾನವಾಗಿದೆ. ಬದ್ಧಾವಸ್ಥೆಯಲ್ಲಿರುವ ಸಂಸಾರಿಗಳಿಗೆ ಆ ವೈಕುಂಠವು ಗೋಚರವಾಗದು. ಆದರೆ ಭೂಲೋಕದಲ್ಲಿ ವಿರಾಜಿಸಿರುವ ಈ ಶ್ರೀರಂಗವೈಕುಂಠಕ್ಷೇತ್ರ ಆ ಸ್ವಾಮಿಯು ಹೇಗೆ ಸಕಲ ಮನುಜನಯನಗೋಚರನಾಗಿದ್ದಾನೆಯೋ ಹಾಗೆ ಸರ್ವರಿಗೂ ಕಂಡು ಬರುತ್ತಿದೆ.

ಭವಪದಮಪಿ ದಿವ್ಯಧಾಮ ಕರ್ತುಂ
ತದುಭಯತಂತ್ರಿತ-ಹರ್ಮ್ಯಮಾಲಿಕೇವ ।
ಭವನಮಣಿತಲ್ಪೈರ್ವಿಜೃಂಭಮಾಣಾ
ಜಯತಿತರಾಮಿಹ ರಂಗರಾಜಧಾನೀ ॥ ॥೩೦॥

(ಭವಪದಮಪಿ) ಸಂಸಾರ ಮಂಡಲವನ್ನೂ (ದಿವ್ಯಧಾಮ) ನಿತ್ಯ ವಿಭೂತಿಯನ್ನಾಗಿ (ಕರ್ತುಮಿವ) ಮಾಡುವಂತೆ (ತದುಭಯ ತಂತ್ರಿತ) ಆ ಉಭಯ ವಿಭೂತಿಗಳನ್ನೂ ಸೇರಿಸಿ ಸಂಬಂಧಗೊಳಿಸಿದ (ಹರ್ಮ್ಯಮಾಲಿಕಾ) ಅನೇಕ ಅಂತಸ್ತುಗಳ ಸಮೂಹಗಳನ್ನುಳ್ಳ (ಭವನಮಣಿತಲ್ಪೈಃ) ಅನೇಕ ಭವನ ಗಳಲ್ಲಿರುವ ರತ್ನಗಳನ್ನು ಕೆತ್ತಿದ ಮೇಲ್ಭಾಗಗಳಿಂದ (ವಿಜೃಂಭಮಾಣಾ) ವೃದ್ಧಿ ಯನ್ನು ಹೊಂದುತ್ತಿರುವ (ರಂಗರಾಜಧಾನೀ) ಶ್ರೀರಂಗನಗರವು (ಇಹ) ಈ ವಿಭೂತಿಯಲ್ಲಿ (ಜಯತಿತರಾಂ)ಅಧಿಕವಾದ ಉತ್ಕರ್ಷವನ್ನು ಹೊಂದುತ್ತದೆ.

ಶ್ರೀರಂಗರಾಜನು ನೆಲಸಿರುವ ಶ್ರೀರಂಗಕ್ಷೇತ್ರದ ವೈಭವವನ್ನು ಇಲ್ಲಿ ವರ್ಣಿಸಿದೆ. ಈ ಕ್ಷೇತ್ರದಲ್ಲಿರುವ ಭವನಗಳು ಅನೇಕ ಮಹಡಿಗಳ ಅಂತಸ್ತು ಗಳನ್ನು ಹೊಂದಿ ಉನ್ನತವಾಗಿವೆ. ಆಯಾ ಮನೆಗಳ ಮೇಲ್ಭಾಗದಲ್ಲಿ ರತ್ನ ವಜ್ರಗಳ ಕೆತ್ತನೆ ಕೆಲಸದಿಂದ ಆ ವೈಕುಂಠವನ್ನೂ ಒಂದುಗೂಡಿಸುವಂತಿವೆ.

ಈ ಸಂಸಾರವನ್ನೂ ಈ ಉನ್ನತವಾದ ಭವನ ಶ್ರೇಣಿಗಳು ನಿತ್ಯ ವಿಭೂತಿಯನ್ನಾಗಿ ಮಾಡುತ್ತಿರುವುವೋ ಎಂಬಂತೆ ಅವು ಕಂಗೊಳಿಸಿವೆ. ಇಂತಹ ಈ ದಿವ್ಯಕ್ಷೇತ್ರ ಉತ್ಕರ್ಷವನ್ನು ಹೊಂದಿದೆ.

**ಮಣಿಮಕರ–ರುಚೀರ್ವಿತತ್ಯ ಪಾಶಾನ್**
**ವಿಸ್ಮರ–ಕೇತುಕರೈರ್ಮೃಗಂ ಹಿಮಾಂಶೋಃ ।**
**ಶ್ರಿಯ ಇವ ನವಕೇಲಯೇ ಜಿಘೃಕ್ಷುಃ**
**ಸುಖಯತಿ ರಂಗಪುರೀ ಚಕಾಸತೀ ನಃ ॥ ॥೩೧॥**

(ಮಣಿಮಕರರುಚೀಃ) ರತ್ನಮಯಗಳಾದ ಮಕರ ತೋರಣಗಳ ಕಾಂತಿಗಳನ್ನು (ಪಾಶನ್) ಬಲೆಗಳನ್ನಾಗಿ (ವಿತತ್ಯ) ಹರಡಿ (ವಿಸ್ಮರ ಕೇತುಕರೈಃ) ಮೇಲೆ ಹರಡಿರುವ ಧ್ವಜಗಳೆಂಬುವ ಕೈಗಳಿಂದ (ಹಿಮಾಂಶೋಃ) ಚಂದ್ರನ (ಮೃಗಂ) ಜಿಂಕೆಯನ್ನು (ಶ್ರಿಯಃ) ಶ್ರೀದೇವಿಯ (ನವಕೇಲಯೇ) ಅಪೂರ್ವವಾದ ಆಟಕ್ಕಾಗಿ (ಜಿಘೃಕ್ಷುಃ ಇವ) ಹಿಡಿಯಲಿಚ್ಛಿಸಿದ ಹಾಗೆ (ಚಕಾಸತೀ) ಪ್ರಕಾಶಿಸುತ್ತಿರುವ (ರಂಗಪುರೀ) ಶ್ರೀರಂಗಕ್ಷೇತ್ರವು (ನಃ) ಶಬ್ದಾದಿ ವಿಷಯ ಪ್ರವಣರಾದ ನಮ್ಮನ್ನೂ (ಸುಖಯತಿ) ಸುಖಪಡಿಸುತ್ತದೆ.

ಶ್ರೀರಂಗ ಕ್ಷೇತ್ರದ ಸೌಂದರ್ಯವನ್ನೇ ಇಲ್ಲಿಯೂ ಅನುಭವಿಸಿದ್ದಾರೆ. ಈ ದಿವ್ಯಕ್ಷೇತ್ರದಲ್ಲಿ ರತ್ನಮಯವಾದ ಮಕರ ತೋರಣಗಳನ್ನು ಎಲ್ಲೆಲ್ಲಿಯೂ ಎತ್ತಿ ಕಟ್ಟಿದ್ದಾರೆ. ಆ ತೋರಣಗಳ ಕಾಂತಿ ಎಲ್ಲೆಡೆಯೂ ಹರಡುತ್ತಿದೆ. ಈ ಸನ್ನಿವೇಶವನ್ನು ಬಳಸಿಕೊಂಡು ಅಪೂರ್ವವಾದ ಕಲ್ಪನೆಯೊಂದನ್ನು ಇಲ್ಲಿ ಮಾಡಿದ್ದಾರೆ. ಮೇಲೆ ಹರಡಿರುವ ಧ್ವಜಗಳನ್ನೇ ಕೈಗಳೆಂದು ರೂಪಣಮಾಡಿ ವಿಸ್ತಾರವಾಗಿ ಹರಡಿರುವ ಕಾಂತಿಗಳ ಕಿರಣಗಳನ್ನೇ ಬಲೆಯೆಂದು ಚಿತ್ರಿಸಿ ಈ ಬಲೆಗಳನ್ನು ಹರಡಿ ಚಂದ್ರನಲ್ಲಿರುವ ಜಿಂಕೆಯನ್ನು ಶ್ರೀದೇವಿಯ ಲೀಲಾ ವಿಹಾರಕ್ಕಾಗಿ ಶ್ರೀರಂಗನಗರಿ ಹಿಡಿಯಲಿಚ್ಛಿಸಿದಂತೆ ತೋರುತ್ತದೆ ಎಂದು ಉತ್ಪ್ರೇಕ್ಷೆ ಮಾಡಿದ್ದಾರೆ. ಚಂದ್ರಮಂಡಲದವರೆಗೂ ಉನ್ನತವಾಗಿರುವ ಭವನಗಳು, ಧ್ವಜಗಳು, ತೋರಣಗಳು ಇಲ್ಲಿ ವಿರಾಜಿಸಿವೆ ಎಂಬ ಭಾವ.

**ಜನಪದ–ಸರಿದಂತರೀಪ–ಪುಷ್ಯತ್**
**ಪುರಪರಿಪಾಲನ–ನಿತ್ಯಜಾಗರೂಕಾನ್ ।**
**ಪ್ರಹರಣ–ಪರಿವಾರ–ವಾಹನಾಢ್ಯಾನ್**
**ಕುಮುದಮುಖಾನ್ ಗಣನಾಯಕಾನ್ ನಮಾಮಿ ॥ ॥೩೨॥**

(ಜನಪದ) ಜನಗಳಿಗೆ ವಾಸಸ್ಥಾನವಾಗಿದ್ದುಕೊಂಡು (ಸರಿದಂತರೀಪ) ಕಾವೇರಿಯ ನಡುವೆ ಇರುವ ದ್ವೀಪದಲ್ಲಿ (ಪುಷ್ಯತ್) ಅಭಿವೃದ್ಧಿ ಹೊಂದುತ್ತಿರುವ (ಪುರ) ಶ್ರೀರಂಗನಗರವನ್ನು (ಪರಿಪಾಲನ) ರಕ್ಷಣೆ ಮಾಡುವುದರಲ್ಲಿ (ನಿತ್ಯಜಾಗರೂಕಾನ್) ಯಾವಾಗಲೂ ಜಾಗರೂಕರಾಗಿರುವವರೂ (ಪ್ರಹರಣ) ಆಯುಧಗಳೊಡನೆಯೂ (ಪರಿವಾರ) ಪರಿಜನಗಳೊಡನೆಯೂ (ವಾಹನ) ವಾಹನಗಳೊಡನೆಯೂ (ಆಢ್ಯಾನ್) ಕೂಡಿ ಇರುತ್ತಿರುವವರೂ ಆದ (ಕುಮುದ ಮುಖಾನ್) ಕುಮುದನೇ ಮೊದಲಾದವರಾದ (ಗಣನಾಯಕಾನ್ ನಮಾಮಿ) ಗಣನಾಯಕರುಗಳಿಗೆ ನಮಿಸುತ್ತೇನೆ.

ಶ್ರೀರಂಗನಗರಿಯನ್ನು ವರ್ಣಿಸಿದ ಮೇಲೆ ನಗರ ಪ್ರವೇಶ ಮಾಡುವಾಗ ಗಣನಾಯಕರಾದ ಕುಮುದ ಮೊದಲಾದವರಿಗೆ ನಮಸ್ಕಾರವನ್ನಿಲ್ಲಿ ಸಮರ್ಪಿಸಿದ್ದಾರೆ. ಈ ಗಣನಾಯಕರು ನಗರ ರಕ್ಷಣೆಯಲ್ಲಿ ಜಾಗರೂಕರಾಗಿದ್ದಾರೆ. ಆಯುಧಗಳು, ಪರಿಜನರು ಮತ್ತು ವಾಹನಗಳೊಡನೆ ಕೂಡಿದ್ದಾರೆ. ಭಗವದ್ರಾಮಾನುಜರು ನಿತ್ಯಗ್ರಂಥದಲ್ಲಿ ಇವರುಗಳಿಗೆ ನಮಸ್ಕಾರಗಳನ್ನರ್ಪಿಸಬೇಕೆಂದು ನಿರೂಪಿಸಿರುವುದನ್ನು ಕಾಣಬಹುದು. 'ಓಂ ಕುಮುದಾಯ ಗಣಾಧಿಪತಯೇ ಸವಾಹನ ಪರಿವಾರ ಪ್ರಹರಣಾಯ ನಮಃ' ಎಂದು ಪೂರ್ವ ದಿಕ್ಕಿನಲ್ಲಿ ಕುಮುದನನ್ನೂ, ಆಗ್ನೇಯದಲ್ಲಿ ಕುಮುದಾಕ್ಷನನ್ನೂ, ದಕ್ಷಿಣ ದಿಕ್ಕಿನಲ್ಲಿ ಪುಂಡರೀಕನನ್ನೂ, ನೈರುತ್ಯದಲ್ಲಿ ವಾಮನನನ್ನೂ, ಪಶ್ಚಿಮದಲ್ಲಿ ಶಂಕುಕರ್ಣನನ್ನೂ, ವಾಯುವ್ಯದಲ್ಲಿ ಸರ್ವನೇತ್ರನನ್ನೂ, ಉತ್ತರ ದಿಕ್ಕಿನಲ್ಲಿ ಸುಮುಖನನ್ನೂ, ಈಶಾನ್ಯದಲ್ಲಿ ಸುಪ್ರತಿಷ್ಠಿತನನ್ನೂ ನಮಸ್ಕರಿಸಿ ಎಲ್ಲ ಭಗವತ್ಪಾರಿಷದರಿಗೆ ನಮಸ್ಕರಿಸಬೇಕೆಂದು ಹೇಳಿದ್ದಾರೆ. ಅದಕ್ಕನುಗುಣವಾಗಿ ಇಲ್ಲಿ ನಮಸ್ಕಾರವನ್ನು ಗಣಾಧಿಪರಿಗೆ ಅರ್ಪಿಸಿದೆ.

ಅಹೃತಸಹಜದಾಸ್ಯಾಸ್ಸೂರಯಃ ಸ್ರಸ್ತಬಂಧಾಃ
ವಿಮಲ-ಚರಮದೇಹಾ ಇತ್ಯಮೀ ರಂಗಧಾಮ ।
ಮಹಿತ-ಮನುಜ-ತಿರ್ಯಕ್-ಸ್ಥಾವರತ್ವಾಃ ಶ್ರಯಂತೇ
ಸುನಿಯತಮಿತಿ ಹ ಸ್ಮ ಪ್ರಾಹುರೇಭ್ಯೋ ನಮಸ್ಸ್ಯಾತ್ ॥ ॥೩೩॥

(ಅಹೃತಸಹಜದಾಸ್ಯಾಃ) ಕೊರೆಯಾಗದ ಸಹಜವಾದ ಶೇಷತ್ವವನ್ನುಳ್ಳ (ಸೂರಯಃ) ನಿತ್ಯಸೂರಿಗಳೂ (ಸ್ರಸ್ತಬಂಧಾಃ) ಸಂಸಾರಬಂಧವನ್ನು ಕಳೆದು ಕೊಂಡು ಮುಕ್ತರುಗಳೂ (ವಿಮಲಚರಮದೇಹಾಃ) ಪಾಪಗಳೆಲ್ಲಾ ಹೋಗಿ ಮತ್ತೊನ್ಮೆ ದೇಹ ಸಂಬಂಧ ಬರದಂತೆ ಶುದ್ಧವಾದ ಅಂತಿಮ ಶರೀರವನ್ನುಳ್ಳ ಮುಮುಕ್ಷುಗಳೂ (ಇತ್ಯಮೀ) ಹೀಗೆ ಹೇಳುವ ಇವರೆಲ್ಲರೂ (ಮಹಿತಮನುಜ ತಿರ್ಯಕ್ ಸ್ಥಾವರತ್ವಾಃ ಸಂತಃ) ಮನುಷ್ಯರ, ಪಶುಪಕ್ಷಿ ಪ್ರಾಣಿಗಳ ಮತ್ತು ಸ್ಥಾವರಗಳ ಜನ್ಮವನ್ನು ಬಯಸಿದವರಾಗಿ (ರಂಗಧಾಮ) ಶ್ರೀರಂಗವನ್ನು (ಸುನಿಯತಂ) ಯಾವಾಗಲೂ (ಶ್ರಯಂತೇ) ಆಶ್ರಯಿಸಿರುತ್ತಾರೆ (ಇತಿ ಹ ಪ್ರಾಹುಃ ಸ್ಮ ) ಎಂದು ಪೌರಾಣಿಕರು ಹೇಳಿದರು. (ಏಭ್ಯಃ) ಇಂಥ ಮನುಷ್ಯ ತಿರ್ಯಕ್ ಸ್ಥಾವರಾದಿಗಳಿಗೆ (ನಮಸ್ಸ್ಯಾತ್) ನಮಸ್ಕಾರಗಳು ಸಲ್ಲಲಿ.

ಶ್ರೀರಂಗದಲ್ಲಿರುವ ನರಪಶುಪಕ್ಷಿ ಸ್ಥಾವರಾದಿಗಳಿಗೆಲ್ಲಾ ಇಲ್ಲಿ ನಮಸ್ಕಾರ ವನ್ನರ್ಪಿಸಿದೆ. ಶ್ರೀರಂಗಕ್ಷೇತ್ರದಲ್ಲಿರುವ ಮನುಷ್ಯರು ಮೊದಲಾದ ಜೀವ ರಾಶಿಗಳೂ ಹಾಗೆಯೇ ಸ್ಥಾವರಾದಿಗಳೂ ನಿತ್ಯಮುಕ್ತರುಗಳೇ ಮೊದಲಾದ ವರು ಬಯಸಿ ಬಯಸಿ ಬಂದು ಆಯಾ ರೂಪಗಳನ್ನು ಕೈಗೊಂಡವರೇ ಆಗಿರುವರೆಂದು ಪುರಾಣಗಳು ಹೇಳುತ್ತವೆ. ಶ್ರೀರಂಗ ಕ್ಷೇತ್ರದಲ್ಲಿ ಭಗವಂತನ ಸೌಲಭ್ಯವನ್ನು ಅನುಭವಿಸುವುದಕ್ಕಾಗಿ ನಿತ್ಯಸೂರಿಗಳೂ ಸಹ ಇಲ್ಲಿಗೆ ಬಂದು ನೆರೆಯುವರು. ಹೀಗೆ ಈ ಕ್ಷೇತ್ರದಲ್ಲಿ ಇರುವುದೆಲ್ಲವೂ ಅಪೂರ್ವವಾದ ಭಾಗ್ಯ ಪಡೆದು ಇಲ್ಲಿ ಇರುವುವಾಗಿವೆ. ಅವರುಗಳಿಗೆಲ್ಲ ಇಲ್ಲಿ ನಮಸ್ಕಾರ ಮಾಡಿದೆ.

Funding: Tattva Heritage Foundation,Kolkata. Digitization: eGangotri.



ಶ್ರೀರಂಗದಿವ್ಯಭವನಂ ಭುವಿ ಗೋಪುರಾಣಾಂ
ಪ್ರಾಕಾರಿತೇನ ನಿಕರೇಣ ಗರುತ್ಮತೇವ ।
ಪಾರ್ಶ್ವಪ್ರಸಾರಿತ–ಪತತ್ರಪುಟೇನ ಭಕ್ತ್ಯಾ
ನಾನಾತನೂಭಿರುಪಗೂಢಮುಪಘ್ನಯಾಮಃ ॥ ॥೩೪॥

(ಪ್ರಾಕಾರಿತೇನ) ಎರಡು ಕಡೆಗಳಲ್ಲಿಯೂ ಪ್ರಾಕಾರಗಳನ್ನು ಹೊಂದಿರುವ (ಗೋಪುರಾಣಾಂ ನಿಕರೇಣ) ಗೋಪುರಗಳ ಸಮೂಹದಿಂದ ಸುತ್ತುವರಿಯಲ್ಪಟ್ಟಿರುವುದನ್ನು ನೋಡಿದರೆ (ಪಾರ್ಶ್ವಪ್ರಸಾರಿತ–ಪತತ್ರ ಪುಟೇನ) ಎರಡು ಪಕ್ಕಗಳಲ್ಲಿಯೂ ಹರಡಿದ ರೆಕ್ಕೆಗಳನ್ನುಳ್ಳ (ಗರುತ್ಮತಾ) ಶ್ರೀಗರುತ್ಮಂತನಿಂದ (ಭಕ್ತ್ಯಾ) ಭಕ್ತಿಯಿಂದ (ಭುವಿ) ಭೂಲೋಕದಲ್ಲಿ (ನಾನಾತನೂಭಿಃ) ಅನೇಕ ಶರೀರಗಳನ್ನು ಧರಿಸಿ (ಉಪಗೂಢ ಇವ) ಮರೆಸಿ ಕಾಯಲ್ಪಡುವ ಹಾಗೆ (ಶ್ರೀರಂಗದಿವ್ಯಭವನಂ) ಶ್ರೀರಂಗದ ದಿವ್ಯಮಂದಿರವನ್ನು (ಉಪಘ್ನಯಾಮಃ) ಆಶ್ರಯ ನೀಡುವ ಮರದಂತೆ ಭಾವಿಸುತ್ತೇವೆ.

ಶ್ರೀ ಗರುತ್ಮಂತನೇ ಅನೇಕ ರೂಪಗಳನ್ನು ಕೊಂಡು ಶ್ರೀರಂಗಮಂದಿರವನ್ನು ಗೋಪುರಗಳ ರೂಪದಲ್ಲಿ ನಿಂತು ಕಾಯುತ್ತಿರುವಂತೆ ನೋಡುತ್ತೇವೆ. ಇಲ್ಲಿರುವ ಅನೇಕ ಗೋಪುರಗಳ ಎರಡು ಕಡೆಯೂ ಪ್ರಾಕಾರಗಳಿರುವುದಾದರೋ ಗರುಡನೇ ತನ್ನ ರೆಕ್ಕೆಯನ್ನು ಬಿಚ್ಚಿ ಮುಚ್ಚಿರುವಂತೆ ಇದೆ. ಗೋಪುರಾದಿಗಳಿಗೆ ಆಶ್ರಯ ಶ್ರೀರಂಗಭವನ. ಹೀಗೆ ಶ್ರೀರಂಗಭವನದ ಸುತ್ತ ಇರುವ ಪ್ರಾಕಾರಗಳನ್ನೂ ಗೋಪುರಗಳನ್ನೂ ಇಲ್ಲಿ ವರ್ಣಿಸಿದೆ.

ಪ್ರಾಕಾರ–ಮಧ್ಯಾಜಿರ–ಮಂಟಪೋಕ್ತ್ಯಾ
ಸದ್ವೀಪ–ರತ್ನಾಕರ–ರತ್ನಶೈಲಾ ।
ಸರ್ವಂಸಹಾ ರಂಗವಿಮಾನಸೇವಾಂ
ಪ್ರಾಪ್ತೇವ ತನ್ಮಂದಿರಮಾವಿರಸ್ತಿ ॥ ॥೩೫॥

ಯಾವ ಶ್ರೀರಂಗ ಮಂದಿರದಲ್ಲಿ (ಪ್ರಾಕಾರ ಮಧ್ಯಾಜಿರ-ಮಂಟಪ ಉಕ್ತ್ಯಾ) ಪ್ರಾಕಾರಗಳು, ನಡುವೆ ಇರುವ ಅಂಗಳಗಳು ಮತ್ತು ಮಂಟಪಗಳು ಎಂಬುವ ವ್ಯಾಜದಿಂದ (ಸದ್ವೀಪ ರತ್ನಾಕರ ರತ್ನಶೈಲಾ) ದ್ವೀಪಗಳಿಂದಲೂ ಸಪ್ತಸಾಗರಗಳಿಂದಲೂ ಮಹಾಮೇರುವಿನಿಂದಲೂ ಕೂಡಿದ (ಸರ್ವಂಸಹಾ) ಭೂದೇವಿಯು (ರಂಗವಿಮಾನಸೇವಾಂ) ಶ್ರೀರಂಗವಿಮಾನದ ಸೇವೆಯನ್ನು (ಪ್ರಾಪ್ತಾ ಇವ) ಹೊಂದಿದವಳ ಹಾಗೆ (ತನ್ಮಂದಿರಂ) ಆ ಶ್ರೀರಂಗಮಂದಿರವು (ಆವಿರಸ್ತಿ) ಕಂಗೊಳಿಸುತ್ತಿದೆ.

ಶ್ರೀರಂಗಮಂದಿರವು ಭೂದೇವಿಯಂತೆ ಇದೆ. ಸಾಗರಗಳು, ಪರ್ವತಗಳು, ದ್ವೀಪಗಳು ಮೊದಲಾದವು ಭೂದೇವಿಯ ಪರಿವಾರಗಳು. ಶ್ರೀರಂಗದಲ್ಲಿರುವ ಪ್ರಾಕಾರಗಳು ಸಾಗರಗಳಂತೆಯೂ ಅಂಗಳಗಳು ದ್ವೀಪಗಳಂತೆಯೂ ಮಂಟಪಗಳು ಪರ್ವತಗಳಂತೆಯೂ ಶೋಭಿಸಿವೆ. ಭೂದೇವಿಯು ಈ ರೂಪವನ್ನು ಧರಿಸಿ ಬಂದು ಶ್ರೀರಂಗನಾಥನನ್ನು ಈ ರೀತಿಯಲ್ಲಿ ಸೇವಿಸುವಂತೆ ಕಂಡು ಬರುತ್ತದೆ.

**ಜಿತ-ಬಾಹ್ಯಜಿನಾದಿ- ಮಣಿಪ್ರತಿಮಾ**
**ಅಪಿ-ವೈದಿಕಯನ್ನಿವ ರಂಗಪುರೇ ।**
**ಮಣಿಮಂಟಪ-ವಪ್ರಗಣಾನ್ ವಿದಧೇ**
**ಪರಕಾಲಕವಿಃ ಪ್ರಣಮೇಮ ಹಿ ತಾನ್ ॥ ॥೩೬॥**

(ಪರಕಾಲಕವಿಃ) ಶ್ರೀ ತಿರುಮಂಗೈಯಾಳ್ವಾರ್‌ರವರು (ಜಿತಬಾಹ್ಯ-ಜಿನ-ಆದಿ ಮಣಿಪ್ರತಿಮಾಃ ಅಪಿ) ತಾವು ಜಯಿಸಿದ ವೇದಬಾಹ್ಯರಾದ ಜೈನರೇ ಮೊದಲಾದವರ ಸ್ವರ್ಣ ವಿಗ್ರಹಗಳನ್ನೂ ಕೂಡ (ವೈದಿಕಯನ್ನಿವ) ವೈದಿಕವಾದವುಗಳನ್ನಾಗಿ ಮಾಡುವಂತೆ (ರಂಗಪುರೇ) ಶ್ರೀರಂಗ ನಗರದಲ್ಲಿ (ಮಣಿಮಂಟಪ ವಪ್ರಗಣಾನ್) ಶ್ರೇಷ್ಠವಾದ ಮಣಿಮಂಟಪಗಳನ್ನೂ ಪ್ರಾಕಾರಗಳ ಸಮೂಹಗಳನ್ನು (ವಿದಧೇ) ನಿರ್ಮಾಣ ಮಾಡಿದರು. (ತಾನ್) ಆ ಮಂಟಪ ಪ್ರಾಕಾರಗಳನ್ನು (ಪ್ರಣಮೇಮಹಿ) ನಮಸ್ಕರಿಸುತ್ತೇವೆ.

ಶ್ರೀ ತಿರುಮಂಗೈಯಾಳ್ವಾರ್ರವರು ನಿರ್ಮಾಣ ಮಾಡಿಸಿದ ಭವ್ಯವಾದ ಮಂಟಪಗಳನ್ನೂ ಪ್ರಾಕಾರಗಳನ್ನೂ ಇಲ್ಲಿ ಅನುಸಂಧಾನ ಮಾಡಿದ್ದಾರೆ. ಶ್ರೀರಂಗನಾಥನನ್ನು ಸೇವಿಸಲು ಸಂಕಲ್ಪಿಸಿದ ಆಳ್ವಾರ್ರವರು ಇತರರನ್ನು ಗೆದ್ದು ತಾವು ತಂದ ಸಂಪತ್ತನ್ನೆಲ್ಲಾ ಈ ಮಂಟಪ ಪ್ರಾಕಾರಗಳ ನಿರ್ಮಾಣಕ್ಕೆ ಉಪಯೋಗಿಸಿದರು. ಅವರ ಭಕ್ತಿಯು ಪರಾಕಾಷ್ಠೆಯನ್ನು ಎಂದೆಂದೂ ಪ್ರಕಾಶ ಪಡಿಸುತ್ತಿರುವ ಈ ಮಂಟಪಗಳಿಗೆ ನಮಸ್ಕಾರವನ್ನಿಲ್ಲಿ ಅರ್ಪಿಸಿದೆ.

**ಸ್ಮೇರಾನನಾಕ್ಷಿಕಮಲೈರ್ನಮತಃ ಪುನಾನಾನ್**
**ದಂಷ್ಟ್ರಾ-ಗದಾ-ಭ್ರುಕುಟಿಭಿರ್ದ್ವಿಷತೋ ಧುನಾನಾನ್ ।**
**ಚಂಡಪ್ರಚಂಡಮುಖತಃ ಪ್ರಣಮಾಮಿ ರಂಗ-**
**ದ್ವಾರಾವಲೀಷು ಚತಸೃಷ್ವಧಿಕಾರಭಾಜಃ ॥** ॥೩೭॥

(ಸ್ಮೇರಾನನಾಕ್ಷಿಕಮಲೈಃ) ವಿಕಸಿತವಾದ ತಾವರೆ ಹೂಗಳಂತಿರುವ ಮುಖಗಳಿಂದಲೂ ಕಣ್ಣುಗಳಿಂದಲೂ (ನಮತಃ ಪುನಾನಾನ್) ಆಶ್ರಿತರನ್ನು ಪವಿತ್ರಗೊಳಿಸುವವರೂ (ದಂಷ್ಟ್ರಾಗದಾಭ್ರುಕುಟಿಭಿಃ) ಕೋರೆ ಹಲ್ಲುಗಳು, ಗದೆ ಮತ್ತು ಹುಬ್ಬುಗಂಟು ಹಾಕುವುದು ಇವುಗಳಿಂದ (ದ್ವಿಷತಃ) ಭಗವದ್ಭಾಗವತ ವಿರೋಧಿಗಳನ್ನು (ಧುನಾನಾನ್) ನಡುಗುವಂತೆ ಮಾಡು ವವರೂ (ಚತಸೃಷು ರಂಗದ್ವಾರಾವಲೀಷು) ದೇವಸ್ಥಾನದ ನಾಲ್ಕು ಬಾಗಿಲುಗಳಲ್ಲಿಯೂ (ಅಧಿಕಾರ ಭಾಜಃ) ಬಾಗಿಲನ್ನು ಕಾಯುವ ಅಧಿಕಾರ ವನ್ನು ಹೊಂದಿದವರೂ ಆದ (ಚಂಡಪ್ರಚಂಡ ಮುಖತಃ) ಆ ಚಂಡಪ್ರಚಂಡ ಮೊದಲಾದ ದ್ವಾರಪಾಲಕರುಗಳನ್ನು (ಪ್ರಣಮಾಮಿ) ನಮಸ್ಕರಿಸುತ್ತೇನೆ.

ಇಲ್ಲಿ ದ್ವಾರಪಾಲಕರುಗಳಿಗೆ ನಮಸ್ಕಾರಗಳನ್ನು ಅರ್ಪಿಸಿದೆ. ಶ್ರೀ ರಂಗಮಂದಿರದ ನಾಲ್ಕು ದಿಕ್ಕುಗಳಲ್ಲಿಯೂ ದ್ವಾರಪಾಲಕರುಗಳು ವಿರಾಜಿ ಸುತ್ತಿದ್ದಾರೆ. ಪೂರ್ವ ದಿಕ್ಕಿನಲ್ಲಿ ಚಂಡ ಮತ್ತು ಪ್ರಚಂಡರೂ, ದಕ್ಷಿಣ ದಿಕ್ಕಿನಲ್ಲಿ ದ್ವಾರ ಮತ್ತು ಸುಭದ್ರರೂ, ಪಶ್ಚಿಮ ದ್ವಾರದಲ್ಲಿ ಜಯ ಮತ್ತು ವಿಜಯರೂ, ಉತ್ತರ ದ್ವಾರದಲ್ಲಿ ಧಾತೃ, ವಿಧಾತೃಗಳೂ ದ್ವಾರಪಾಲಕ ರಾಗಿದ್ದಾರೆ. ಈ ದ್ವಾರಪಾಲಕರುಗಳೆಲ್ಲರೂ ಶಂಖ, ಚಕ್ರ, ಗದೆ ಇವುಗಳನ್ನು

ಧರಿಸಿದವರಾಗಿ ಆಜ್ಞಾಮುದ್ರೆಯನ್ನು ತೋರುತ್ತಿರುವರು. ಆಶ್ರಿತರನ್ನು ಇವರು ಅನುಗ್ರಹಿಸಿ ಪವಿತ್ರಗೊಳಿಸುವರು. ಆದರೆ ಭಗವದ್ದ್ವೇಷಿಗಳನ್ನು ನಡುಗುವಂತೆ ಮಾಡುವರು ಇವರು.

ಶ್ರೀರಂಗ ಮಂದಿರವನ್ನು ಪೂರ್ವ ದ್ವಾರದಿಂದ ಪ್ರವೇಶಿಸಬೇಕೆಂಬುದನ್ನು ಇಲ್ಲಿ ಸೂಚಿಸಿದೆ. ಪೂರ್ವ ದಿಕ್ಕಿನ ದ್ವಾರದಿಂದ ಪ್ರವೇಶಿಸಿದ ಮೇಲೆ ಕ್ರಮ ಕ್ರಮವಾಗಿ ಶ್ರೀರಂಗನಾಥನ ಸಾನ್ನಿಧ್ಯಕ್ಕೆ ಹೋಗಿ ಸೇರುವುದನ್ನು ಮುಂದಿನ ಶ್ಲೋಕಗಳಲ್ಲಿ ವರ್ಣಿಸಿದೆ.

**ಸರ್ವಾತ್ಮ–ಸಾಧಾರಣ–ನಾಥಗೋಷ್ಠೀ–**
**ಪೂರೇಽಪಿ ದುಷ್ಪೂರಮಹಾವಕಾಶಂ ।**
**ಆಸ್ಥಾನಮಾನಂದಮಯಂ ಸಹಸ್ರ–**
**ಸ್ಥೂಣಾದಿನಾಮ್ನಾತಮವಾಪ್ನವಾನಿ ॥** ॥೩೮॥

(ಸರ್ವಾತ್ಮಸಾಧಾರಣನಾಥಗೋಷ್ಠೀಪೂರೇಽಪಿ) ಎಲ್ಲ ಆತ್ಮರುಗಳಿಗೂ ಸಮಾನನಾದ ಶ್ರೀರಂಗನಾಥನ ಗೋಷ್ಠಿಯಿಂದ ತುಂಬಲು ನೋಡಿದರೂ (ದುಷ್ಪೂರಮಹಾವಕಾಶಂ) ತುಂಬುವುದಕ್ಕಾಗದಂತೆ ವಿಶಾಲವಾದ ಅವಕಾಶ ವನ್ನುಳ್ಳುದೂ (ಸಹಸ್ರಸ್ಥೂಣಾದಿನಾ) 'ಸಹಸ್ರಸ್ಥೂಣ' ಎಂಬ ಮಾತಿನಿಂದ ಮೊದಲಾಗುವ ಉಪನಿಷದ್ವಾಕ್ಯದಿಂದ (ಆಮ್ನಾತಂ) ನಿರೂಪಿಸಲ್ಪಟ್ಟುದೂ (ಆನಂದಮಯಂ) ಆನಂದವೇ ಮೈವೆತ್ತಂತಿರುವುದೂ ಆದ (ಆಸ್ಥಾನಂ) ಸಾವಿರ ಕಂಬದ ಮಂಟಪವನ್ನು (ಅವಾಪ್ನವಾನಿ) ನಾನು ಸೇರುವಂತಾಗಲಿ.

ಈ ಶ್ಲೋಕದಲ್ಲಿ ಸಾವಿರ ಕಂಬದ ಮಂಟಪಕ್ಕೆ ಬರುವುದನ್ನು ವರ್ಣಿಸಿದೆ. ಪೂರ್ವ ದಿಕ್ಕಿನಿಂದ ರಂಗಮಂದಿರವನ್ನು ಪ್ರವೇಶಿಸಿದ ಭಕ್ತನು ಈ ಮಂಟಪಕ್ಕೆ ಬಂದು ಸೇರುತ್ತಾನೆ. ಈ ಮಂಟಪದ ವೈಶಾಲ್ಯವನ್ನು ಮೊದಲು ವರ್ಣಿಸಿದ್ದಾರೆ. ಉಭಯ ವಿಭೂತಿಯವರೂ ಬಂದು ಸೇರಿದರೂ ಪೂರ್ಣ ವಾಗಿ ತುಂಬುವುದಕ್ಕಾಗದಷ್ಟು ವೈಶಾಲ್ಯ ಇದರದು. ಶ್ರುತಿಯಲ್ಲಿ 'ಸಹಸ್ರ

ಸ್ಥೂಣೇ ವಿಮಿತೇ ದೃಢ ಉಗ್ರೇ’ ಎಂದು ಪ್ರತಿಪಾದಿಸಿರುವುದಕ್ಕೆ ಅನುಗುಣ ವಾಗಿರುವುದು ಈ ಭವ್ಯವಾದ ಮಂಟಪ.

**ವಿಹರತಿ ಹರೌ ಲಕ್ಷ್ಮ್ಯಾ ಲೀಲಾತಪತ್ರ–ಪರಿಷ್ಕ್ರಿಯಾ**
**ವಿನಿಮಯವಿಧಾ ಸೂನಾಸೂನಿಕ್ರಿಯಾ ಸಫಲೋತ್ಪಲಾಂ ।**
**ಅಥಮುನಿಮನಃಪದ್ಮೇಷ್ವಬ್ಜಾಸಹಾಯ–ವಿಹಾರಜ–**
**ಶ್ರಮಹರತಟೀಂ ಯಾಮಸ್ತಾವೈಂದವೀಂ ಅರವಿಂದಿನೀಂ ।। ।।೩೯।।**

(ಹರೌ) ಶ್ರೀರಂಗನಾಥನು (ಲಕ್ಷ್ಮ್ಯಾಸಹ) ಶ್ರೀದೇವಿಯೊಡನೆ (ವಿಹರತಿ ಸತಿ) ಜಲಕ್ರೀಡೆಯಾಡುವಾಗ (ಲೀಲಾತಪತ್ರ) ಲೀಲಾರ್ಥವಾದ ಛತ್ರಿಯಂತಿ ರುವುದೂ (ಪರಿಷ್ಕ್ರಿಯಾ) ಕರ್ಣಭೂಷಣ ಮೊದಲಾದ ಅಲಂಕಾರಗಳಾಗಿ ಇರುವುದೂ (ವಿನಿಮಯ ವಿಧಾ) ಒಬ್ಬರು ಮತ್ತೊಬ್ಬರೊಡನೆ ಬದಲಾಯಿಸಿ ಕೊಳ್ಳುವುದಕ್ಕೆ ಸರಿಯಾಗಿರುವುದೂ (ಸೂನಾಸೂನಿ ಕ್ರಿಯಾ) ಪುಷ್ಪಯುದ್ಧ ಮಾಡುವುದಕ್ಕೆ ಯುಕ್ತವಾಗಿರುವುದೂ, ಆಗಿ (ಸಫಲೋತ್ಪಲಾಂ) ಸಾಫಲ್ಯ ವನ್ನು ಪಡೆದ ನೈದಿಲೆ ಹೂವುಗಳನ್ನು ಒಳಗೊಂಡುದೂ (ಅಥ) ಮತ್ತೂ (ಮುನಿಮನಃ ಪದ್ಮೇಷು) ಮುನಿಗಳ ಹೃದಯ ಪುಂಡರೀಕದಲ್ಲಿ (ಅಬ್ಜಾಸ ಹಾಯ ವಿಹಾರಜ–ಶ್ರಮಹರತಟೀಂ) ದೇವಿಯೊಡನೆ ಸೇರಿ ವಿಹರಿಸಿದುದರಿಂದ ಉಂಟಾದ ಶ್ರಮವನ್ನು ಹೋಗಲಾಡಿಸುವ ದಡವನ್ನುಳ್ಳುದೂ ಆದ (ತಾಂ) ಅಂಥ (ಐಂದವೀಂ ಅರವಿಂದಿನೀಂ) ಚಂದ್ರ ಪುಷ್ಕರಿಣಿಯನ್ನು (ಯಾಮಃ) ಸೇರುತ್ತೇವೆ.

ಸಾವಿರಕಂಬದ ಮಂಟಪದಿಂದ ಚಂದ್ರಪುಷ್ಕರಿಣಿಯನ್ನು ಸಮೀಪಿಸಿ ದ್ದಾರೆ ಇಲ್ಲಿ. ಶ್ರೀರಂಗನಾಯಕಿಯೊಡನೆ ಶ್ರೀರಂಗನಾಥನು ವಿಹರಿಸುವ ದಿವ್ಯ ಸ್ಥಳ ಇದು. ಇಲ್ಲಿ ಅರಳಿರುವ ನೈದಿಲೆ ಹೂಗಳು ಮೂರು ವಿಧವಾಗಿ ಅವರಿಗೆ ಉಪಯೋಗಕ್ಕೆ ಬರುತ್ತವೆ. ಜಲಕ್ರೀಡೆಯಾಡುವಾಗ ಅವರಿಗೆ ಛತ್ರಿಯಾಗುತ್ತದೆ ಅದು. ಕರ್ಣಭೂಷಣಗಳೂ ಆಗುತ್ತವೆ ಅವು. ಪುಷ್ಪ ಯುದ್ಧವಾಡುವುದಕ್ಕೆ ಯುಕ್ತವಾಗಿರುತ್ತವೆ ಅವು. ಇಂಥ ಕುಸುಮಗಳು

ಅರಳಿ ಸುಂದರವಾಗಿರುವ ಚಂದ್ರಪುಷ್ಕರಿಣಿಯ ತೀರದಲ್ಲಿ, ಮುನಿಗಳ ಹೃದಯದಲ್ಲಿ ವಿಹರಿಸಿದುದರಿಂದಾದ ಶ್ರಮವನ್ನು ಸ್ವಾಮಿ ಹೋಗಲಾಡಿಸಿ ಕೊಳ್ಳುವನಂತೆ.

**ತಾಪತ್ರಯೀಂ ಐಂದವ-ಪುಷ್ಕರಿಣ್ಯಾಂ**
**ನಿಮಜ್ಯ ನಿರ್ವಾಪಯಿತಾಸ್ಮಿ ಯಸ್ಯಾಃ ।**
**ಅಭ್ಯಾಸತೋಽಪಾಮಘಮರ್ಷಿಣೀನಾಂ**
**ಚಂದ್ರಸ್ಸುಧಾದೀಧಿತಿತಾಮವಾಪ ॥ ॥೪೦॥**

(ಚಂದ್ರಃ) ಚಂದ್ರನು (ಯಸ್ಯಾಃ) ಯಾವ ಚಂದ್ರಪುಷ್ಕರಿಣಿಯ (ಅಘಮರ್ಷಿಣೀನಾಂ ಅಪಾಂ) ಪಾಪಹರವಾದ ತೀರ್ಥಗಳ (ಅಭ್ಯಾಸತಃ) ಪರಿಚಯಾದಿ ಅತಿಶಯಗಳ ಕಾರಣ (ಸುಧಾದೀಧಿತಿತಾಂ) ಅಮೃತ ಕಿರಣನಾಗು ವಿಕೆಯನ್ನು (ಅವಾಪ) ಹೊಂದಿದನೋ ಅಂಥ (ಐಂದವ ಪುಷ್ಕರಿಣ್ಯಾಂ) ಚಂದ್ರ ಪುಷ್ಕರಿಣಿಯಲ್ಲಿ (ನಿಮಜ್ಯ) ಸ್ನಾನಮಾಡಿ (ತಾಪತ್ರಯೀಂ) ತಾಪ ತ್ರಯಗಳನ್ನು (ನಿರ್ವಾಪಯಿತಾಸ್ಮಿ) ಹೋಗಲಾಡಿಸಿಕೊಳ್ಳುವವನಾಗುತ್ತೇನೆ.

ಚಂದ್ರಪುಷ್ಕರಿಣಿಯ ತೀರ್ಥ ಪಾಪಗಳನ್ನೆಲ್ಲಾ ಹೋಗಲಾಡಿಸುತ್ತದೆ. ಈ ಪವಿತ್ರವಾದ ಪುಷ್ಕರಿಣಿಯಲ್ಲಿ ಸ್ನಾನಮಾಡಿ ಮುಂದೆ ಶ್ರೀರಂಗನಾಥನ ದರ್ಶನಕ್ಕೆ ಹೋಗಬೇಕು. ಕ್ಷಯರೋಗಪೀಡಿತನಾದ ಚಂದ್ರನು ಈ ಪುಷ್ಕರಿಣಿಯಲ್ಲಿ ಮಿಂದು ತನ್ನ ಪಾಪವನ್ನು ಕಳೆದುಕೊಂಡು ಅಮೃತ ಮಯ ವಾದ ಕಿರಣಗಳನ್ನು ಪಡೆದುಕೊಂಡನೆಂದು ವರ್ಣಿಸಲಾಗಿದೆ. ಈ ಪುಷ್ಕರಿಣಿ ಯಲ್ಲಿ ಸ್ನಾನ ಮಾಡಿದವರು ಆಧಿಭೌತಿಕ, ಆಧ್ಯಾತ್ಮಿಕ ಮತ್ತು ಆಧಿದೈವಿಕ ವಾದ ತಾಪಗಳನ್ನು ಪರಿಹಾರ ಮಾಡಿಕೊಂಡು ಧನ್ಯರಾಗಬಹುದು.

**ಪೂರ್ವೇಣ ತಾಂ ತದ್ವದುದಾರನಿಮ್ನ-**
**ಪ್ರಸನ್ನ-ಶೀತಾಶಯಮಗ್ನನಾಥಾಃ ।**
**ಪರಾಂಕುಶಾದ್ಯಾಃ ಪ್ರಥಮೇ ಪುಮಾಂಸೋ**
**ನಿಷೇದಿವಾಂಸೋ ದಶ ಮಾಂ ದಯೇರನ್ ॥ ॥೪೧॥**

(ತಾಂ ಪೂರ್ವೇಣ) ಆ ಚಂದ್ರ ಪುಷ್ಕರಿಣಿಯ ಪೂರ್ವದಿಕ್ಕಿನಲ್ಲಿ (ನಿಷೇದಿವಾಂಸಃ) ದಯಮಾಡಿರುವವರಾದ (ತದ್ವತ್) ಆ ಪುಷ್ಕರಿಣಿಯಂತೆಯೇ (ಉದಾರ ನಿಮ್ನ ಪ್ರಸನ್ನ ಶೀತಾಶಯ ಮಗ್ನನಾಥಾಃ) ತಮ್ಮ ಉದಾರವೂ, ಗಂಭೀರವೂ, ಪ್ರಸನ್ನವಾದುದೂ, ತಂಪಾದುದೂ ಆದ ಹೃದಯದಲ್ಲಿ ಸ್ವಾಮಿಯನ್ನು ಹೊಂದಿದವರಾಗಿರುವವರಾದ (ಪರಾಂಕುಶಾದ್ಯಾಃ) ನಮ್ಮಾಳ್ವಾರ್‌ರವರೇ ಮೊದಲಾದ (ದಶ ಪ್ರಥಮೇ ಪುಮಾಂಸಃ) ಹತ್ತು ಆಳ್ವಾರರುಗಳು (ಮಾಂ ದಯೇರನ್) ನನ್ನ ಮೇಲೆ ದಯೆತೋರುವಂತಾಗಲಿ.

ಚಂದ್ರಪುಷ್ಕರಿಣಿಗೂ ಆಳ್ವಾರರಿಗೂ ಸಮಾನವಾದ ವಿಶೇಷಣಗಳನ್ನು ಹೇಳಿದ್ದಾರೆ. ಚಂದ್ರಪುಷ್ಕರಿಣಿಯು ಉದಾರವೂ, ಆಳವಾದುದೂ, ತಿಳಿಯಾದುದೂ, ತಂಪಾದುದೂ ಆಗಿದೆ. ಈ ಪುಷ್ಕರಿಣಿಯಲ್ಲಿ ಸ್ವಾಮಿ ಶ್ರೀರಂಗನಾಥನು ವಿಹರಿಸುತ್ತಾನೆ. ಹಾಗೆಯೇ ಆಳ್ವಾರರುಗಳ ಹೃದಯವೂ ಸಹ ಉದಾರವೂ, ಗಂಭೀರವೂ, ಪ್ರಸನ್ನವೂ, ತಂಪಾದುದೂ ಆಗಿದೆ. ಆ ಆಳ್ವಾರರುಗಳ ಹೃದಯಸರೋವರದಲ್ಲಿಯೂ ಸ್ವಾಮಿಯು ವಿಹರಿಸುತ್ತಾನೆ. ಚಂದ್ರಪುಷ್ಕರಿಣಿಯ ಪೂರ್ವ ದಿಕ್ಕಿನಲ್ಲಿ ವಿರಾಜಿಸಿರುವ ಆಳ್ವಾರರುಗಳ ಸಂದರ್ಶನವನ್ನಿಲ್ಲಿ ಮಾಡಿದೆ. ಭಗವಂತನು ಆಳ್ವಾರರುಗಳ ಹೃದಯ ಸಾಗರದಲ್ಲಿ ಬಂದು ವಿಹರಿಸಿ ಪವಡಿಸಿರುವನೆಂಬುದನ್ನು ಪೆರಿಯಾಳ್ವಾರ್‌ರವರು,

'ಪನಿಕ್ಕಡಲಿಲ್ ಪಳ್ಳಿಕೋಳೈ ಪಳ್ಹಹವಿಟ್ಟು ಓಡಿವಂದು ಎನ್
ಮನಕ್ಕಡಲಿಲ್ ವಾೞವಲ್ಲ ಮಾಯಮಣಾಳ ನಂಬೀ
ತನಿಕ್ಕಡಲೇ ತನಿಚ್ಚುಡರೇ ತನಿಯುಲಹೇ ಎನ್ನೆನ್ರು
ಉನಕ್ಕಿಡಮಾಯಿರುಕ್ಕ ಎನ್ನೈ ಉನಕ್ಕುರಿತ್ತಾಕ್ಕಿನೈಯೇ'

ಎಂದು ಅನುಭವಿಸಿದ್ದಾರೆ. (5-4-9)

**ಆಧಾರಶಕ್ತಿಮುಪರಿ ಪ್ರಕೃತಿಂ ಪರೇಣ**
**ತಾಂ ಕೂರ್ಮಮತ್ರ ಫಣಿನಂ ಪೃಥಿವೀಂ ಫಣಾಸು ।**
**ಪೃಥ್ವ್ಯಾಂ ಪಯೋಧಿಮಧಿ ತನ್ನಲಿನಂ ನಿಧಾಯ**
**ಶ್ರೀರಂಗಧಾಮ ಸುನಿವಿಷ್ಟಮಭಿಷ್ಟವಾನಿ ॥** ॥೪೨॥

(ಆಧಾರಶಕ್ತಿಂಉಪರಿ) ಆಧಾರಶಕ್ತಿಯನ್ನು ಮೀರಿ (ಪ್ರಕೃತಿಂ) ಪ್ರಕೃತಿ ಮಂಡಲವನ್ನು (ನಿಧಾಯ) ಇಟ್ಟು (ತಾಂಪರೇಣ) ಆ ಪ್ರಕೃತಿಯನ್ನು ದಾಟಿ (ಕೂರ್ಮಂ ನಿಧಾಯ) ಕೂರ್ಮವನ್ನಿಟ್ಟು (ಅತ್ರ) ಆ ಕೂರ್ಮದ ಮೇಲೆ (ಫಣಿನಂ) ಆದಿಶೇಷನನ್ನು ಇಟ್ಟು (ಫಣಾಸು) ಆ ಆದಿಶೇಷನ ಹೆಡೆಗಳ ಮೇಲೆ (ಪೃಥಿವೀಂ) ಭೂಮಿಯನ್ನು ಇಟ್ಟು (ಪೃಥ್ವ್ಯಾಂ) ಆ ಭೂಮಿಯ ಮೇಲೆ (ಪಯೋಧಿಂ) ಸಮುದ್ರವನ್ನು ಇಟ್ಟು (ಅಧಿತತ್) ಅದರ ಮೇಲೆ (ನಲಿನಂ) ಅಷ್ಟದಳ ಪದ್ಮವನ್ನು ಇಟ್ಟು (ಅಧಿತತ್) ಅದರ ಮೇಲೆ ( ಸುನಿವಿಷ್ಟಂ ) ಸುಪ್ರತಿಷ್ಠಿತವಾಗಿರುವ ( ಶ್ರೀರಂಗಧಾಮ ) ಶ್ರೀರಂಗ ವಿಮಾನವನ್ನು (ಅಭಿಷ್ಟವಾನಿ) ಸ್ತುತಿಸುತ್ತೇನೆ.

ಶ್ರೀರಂಗವಿಮಾನದ ಸ್ತುತಿ ಇಲ್ಲಿಂದ ನಾಲ್ಕು ಶ್ಲೋಕಗಳಲ್ಲಿದೆ. ಆಧಾರಶಕ್ತಿಯ ಮೇಲೆ ಪ್ರಕೃತಿಮಂಡಲವೂ, ಆ ಪ್ರಕೃತಿಮಂಡಲದ ಮೇಲೆ ಕೂರ್ಮವೂ, ಅದರ ಮೇಲೆ ಆದಿಶೇಷನೂ, ಆ ಆದಿಶೇಷನ ಮೇಲೆ ಭೂಮಿಯೂ, ಆ ಭೂಮಿಯ ಮೇಲೆ ಸಮುದ್ರವೂ, ಆ ಸಮುದ್ರದ ಮೇಲೆ ಅಷ್ಟದಳ ಪದ್ಮವೂ ಇದೆ. ಆ ಅಷ್ಟದಳ ಪದ್ಮದ ಮೇಲೆ ಶ್ರೀರಂಗವಿಮಾನ ಸುಪ್ರತಿಷ್ಠಿತವಾಗಿದೆ. ಭಗವದ್ರಾಮಾನುಜರು ನಿತ್ಯಗ್ರಂಥದಲ್ಲಿ "ಓಂ ಆಧಾರ ಶಕ್ತ್ಯೈನಮಃ, ಓಂ ಪ್ರಕೃತ್ಯೈನಮಃ, ಓಂ ಅಖಿಲ ಜಗದಾಧಾರಾಯ ಕೂರ್ಮರೂಪಿಣೇ ನಾರಾಯಣಾಯನಮಃ, ಓಂ ಭಗವತೇ ಅನಂತಾಯ ನಾಗರಾಜಾಯ ನಮಃ, ಓಂ ಭೂ ಭೂಮ್ಯೈನಮಃ ಇತಿಯಥಾಸ್ಥಾನ ಮುಪರ್ಯುಪರಿ ಧ್ಯಾತ್ವಾ ಪ್ರಣಮ್ಯ" ಎಂದು ಹೇಳಿರುವುದಕ್ಕೆ ಇದು ಅನುಸಾರವಾಗಿದೆ. ಮುಂದೆ "ಓಂ ಶ್ರೀವೈಕುಂಠಾಯ ದಿವ್ಯಲೋಕಾಯ ನಮಃ, ಓಂ ಶ್ರೀವೈಕುಂಠಾಯ ದಿವ್ಯಜನಪದಾಯನಮಃ, ಓಂ ಶ್ರೀವೈಕುಂಠಾಯ ದಿವ್ಯ ನಗರಾಯ ನಮಃ, ಓಂ ಶ್ರೀವೈಕುಂಠಾಯ ದಿವ್ಯ ವಿಮಾನಾಯ ನಮಃ" ಎಂದು ಅನುಸಂಧಾನ ಮಾಡಬೇಕು. ಇಂಥ ಶ್ರೀರಂಗವಿಮಾನವನ್ನು ಇಲ್ಲಿ ಸ್ತುತಿಸಿದೆ.

**ಪರೇಣ ನಾಕಂ ಪುರಿ ಹೇಮಮಯ್ಯಾಂ**
**ಯೋ ಬ್ರಹ್ಮಕೋಶೋಽಸ್ತ್ಯಪರಾಜಿತಾಖ್ಯಃ ।**
**ಶ್ರೀರಂಗನಾಮ್ನಾ ತಮಪೌರುಷೇಯಂ**
**ವಿಮಾನರಾಜಂ ಭುವಿ ಭಾವಯಾನಿ ॥ ॥೮೩॥**

(ನಾಕಂಪರೇಣ) ಸ್ವರ್ಗಲೋಕಕ್ಕೂ ಮೇಲ್ಪಟ್ಟಿರುವುದೂ (ಹೇಮ ಮಯ್ಯಾಂ) ಹಿರಣ್ಮಯವಾದ (ಪುರಿ) ಪಟ್ಟಣದಲ್ಲಿಪ್ಪ (ಅಪರಾಜಿತಾಖ್ಯಃ) ಅಪರಾಜಿತಾ ಎಂಬ ಹೆಸರನ್ನುಳ್ಳುದೂ (ಯಃ) ಆದ ಯಾವ (ಬ್ರಹ್ಮ ಕೋಶಃ) ಪರಬ್ರಹ್ಮಸ್ಥಾನವು (ಅಸ್ತಿ) ಇದೆಯೋ (ಅಪೌರುಷೇಯಂ) ಪೌರುಷೇಯವಲ್ಲದ, ಮನುಷ್ಯರು ಮಾಡಿಲ್ಲದೆ ಇರುವ (ತಂ ವಿಮಾನರಾಜಂ) ಆ ಶ್ರೇಷ್ಠವಾದ ವಿಮಾನವನ್ನು (ಭುವಿ) ಈ ಲೋಕದಲ್ಲಿ (ಶ್ರೀರಂಗನಾಮ್ನಾ ಭಾವಯಾಮಿ) ಶ್ರೀರಂಗವಿಮಾನವೆಂಬ ಹೆಸರಿನಿಂದ ಭಾವಿಸಿಕೊಳ್ಳುತ್ತೇನೆ.

'ಪರೇಣ ನಾಕಂ ನಿಹಿತಂ ಗುಹಾಯಾಂ' ಎಂದೂ 'ಬ್ರಹ್ಮಣಃ ಕೋಶೋಽಸಿ' ಎಂದೂ ಶ್ರುತಿ ಹೇಳುವಂತೆ ಶ್ರೀರಂಗ ವಿಮಾನವೇ ಅಪೌರುಷೇಯವಾದ ಬ್ರಹ್ಮಕೋಶವಾಗಿದೆ. 'ಪ್ರಪದ್ಯೇ ಪ್ರಣವಾಕಾರಂ ಪ್ರಾಪ್ಯಂ ರಂಗವಿಮಾನಕಂ' ಎಂದು ಹೇಳಿ ಶ್ರೀರಂಗ ವಿಮಾನವು ಪ್ರಣವಾಕಾರ ವಿಮಾನವೆಂದು ನಿರೂಪಿಸಿದ್ದಾರೆ. ಪ್ರಣವವೇ ಬ್ರಹ್ಮಕೋಶ. ಪ್ರಣವದಲ್ಲಿ ಪರವಸ್ತು ಪ್ರಕಾಶಿಸುವಂತೆ ಈ ವಿಮಾನದಲ್ಲಿ ಶ್ರೀರಂಗನಾಥನು ಪ್ರಕಾಶಿಸಿದ್ದಾನೆ.

**ಅನಾದ್ಯಾಮ್ನಾತತ್ವಾತ್ಪುರುಷ–ರಚನಾ–ದೋಷ–ರಹಿತಂ**
**ಜನೇ ತಾಂಸ್ತಾನ್ ಕಾಮಾನ್ ವಿದಧದಪಿ ಸಾಯುಜ್ಯಹೃದಯಂ।**
**ಅಸಂದೇಹಾಧ್ಯಾಸಂ ಭಗವದುಪಲಂಭಸ್ಥಲಮಮೀ**
**ಪ್ರತೀಮಃ ಶ್ರೀರಂಗಂ ಶ್ರುತಿಶತಸಮಾನಾರ್ಥಿ ಶರಣಂ ॥ ॥೮೪॥**

( ಅನಾದಿ ಆಮ್ನಾತತ್ವಾತ್ ) ಸ್ವಯಂ ವ್ಯಕ್ತವಾಗಿ ವೇದದಿಂದ ಹೇಳಲ್ಪಟ್ಟಿರುವುದರಿಂದ ( ಪುರುಷರಚನಾ ದೋಷರಹಿತಂ ) ಮನುಷ್ಯರು

ರಚಿಸಿದರೆ ಉಂಟಾಗುವ ದೋಷವೊಂದೂ ಇಲ್ಲದುದೂ (ಜನೇ) ಜನಗಳಲ್ಲಿ (ತಾಂಸ್ತಾನ್ ಕಾಮಾನ್ ವಿದಧದಪಿ) ಆಯಾ ಬೇರೆ ಬೇರೆ ಆಶೆಗಳನ್ನು ಉಂಟುಮಾಡುವುದರಿಂದ ಪುರುಷಾರ್ಥಗಳನ್ನು ಕೊಡುವುದಾದರೂ (ಸಾಯುಜ್ಯ ಹೃದಯಂ) ಮೋಕ್ಷದಲ್ಲಿ ತಾತ್ಪರ್ಯವುಳ್ಳುದೂ (ಅಸಂದೇಹಾಧ್ಯಾಸಂ) ಸಂಶಯವೂ ವಿಪರ್ಯಯವೂ ಇಲ್ಲದುದೂ (ಭಗವದುಪಲಂಭಸ್ಥಲಂ) ಭಗವಂತನು ಬೆಳಗುತ್ತಿರುವ ಸ್ಥಲವಾಗಿರುವುದೂ ಆಗಿ (ಶ್ರುತಿಶತಸಮಾನರ್ಧಿ) ಅನೇಕ ವೇದಗಳೊಡನೆ ಸಮಾನವಾದ ಅತಿಶಯವನ್ನು ಹೊಂದಿದುದೂ ಆದ (ಶ್ರೀರಂಗಂ) ಶ್ರೀರಂಗವಿಮಾನವನ್ನು (ಅಮೀ) ಈ ನಾವುಗಳು (ಶರಣಂ) ಸೇರುವ ಆಶ್ರಯವನ್ನಾಗಿ (ಪ್ರತೀಮಃ) ನಂಬುತ್ತೇವೆ.

ಶ್ರೀರಂಗವಿಮಾನಕ್ಕೂ ವೇದಕ್ಕೂ ಸಾಮ್ಯವನ್ನು ಇಲ್ಲಿ ಹೇಳಿದೆ. ವೇದವು ಸ್ವಯಂ ವ್ಯಕ್ತವಾದುದೂ, ಅಪೌರುಷೇಯವೂ, ಮನುಷ್ಯರು ರಚಿಸಿದರೆ ಉಂಟಾಗುವ ದೋಷಗಳೊಂದೂ ಇಲ್ಲದುದೂ, ಧರ್ಮಾರ್ಥಕಾಮ ಮೋಕ್ಷಗಳನ್ನು ಕೊಡುವುದೂ, ಸಂಶಯ ವಿಪರ್ಯಯಗಳಿಲ್ಲದುದೂ ಆಗಿ ಭಗವಂತನನ್ನು ಪ್ರತಿಪಾದಿಸುತ್ತದೆ. ಹಾಗೆಯೇ ಶ್ರೀರಂಗವಿಮಾನವೂ ಸಹ ಸ್ವಯಂ ವ್ಯಕ್ತವಾದುದು. ದೋಷರಹಿತವಾದುದು. ಭಗವಂತನು ವಿರಾಜಿಸುತ್ತಿರುವ ದಿವ್ಯ ಸ್ಥಲ. ಧರ್ಮಾರ್ಥಕಾಮಗಳನ್ನು ಕರುಣಿಸುವುದಾದರೂ ಮೋಕ್ಷವನ್ನನುಗ್ರಹಿಸುವುದರಲ್ಲಿಯೇ ಮುಖ್ಯವಾದ ಅಭಿಪ್ರಾಯ ಅದಕ್ಕೆ. ಹೀಗೆ ಶ್ರೀರಂಗವಿಮಾನವು ವೇದಕ್ಕೆ ಸಮಾನವಾಗಿದೆ.

**ಅಪಿ ಫಣಿಪತಿಭಾವಾತ್ ಶುಭ್ರಮಂತಶ್ಶ್ರಯಾಲೋಃ**
**ಮರಕತಸುಕುಮಾರೈಃ ರಂಗಭರ್ತುರ್ಮಯೂಖೈಃ ।**
**ಸಕಲಜಲಧಿಪಾನ-ಶ್ಯಾಮ-ಜೀಮೂತ-ಜೈತ್ರಂ**
**ಪುಲಕಯತಿ ವಿಮಾನಂ ಪಾವನಂ ಲೋಚನೇ ನಃ ॥ ॥೬೫॥**

(ಫಣಿಪತಿಭಾವಾತ್) ಈ ವಿಮಾನದ ಸ್ವರೂಪ ಆದಿಶೇಷನಾಗಿಯೇ ಇರುವುದರಿಂದ (ಶುಭ್ರಂಅಪಿ) ಬೆಳ್ಳಗೇ ಇದ್ದರೂ (ಅಂತಃ) ತನ್ನೊಳಗೆ

(ಶಯಾಲೋಃ) ಶಯಿನಿಸುವ (ರಂಗಭರ್ತುಃ) ಶ್ರೀರಂಗನಾಥನ (ಮರಕತ ಸುಕುಮಾರೈಃ) ಮರಕತಮಣಿಯಂತೆ. ಸುಂದರವಾದ (ಮಯೂಖೈಃ) ಕಾಂತಿಗಳಿಂದ ( ಸಕಲ ಜಲಧಿಪಾನ ಶ್ಯಾಮ ಜೀಮೂತ ಜೈತ್ರಂ ) ಸಮುದ್ರದ ನೀರನ್ನೆಲ್ಲಾ ಪಾನ ಮಾಡಿ ಅದರಿಂದ ಕಪ್ಪಾಗಿರುವ ಮೇಘವನ್ನೂ ಜಯಿಸಿ ಹಿಂದಿಕ್ಕಿ ನಿಂತಿರುವ (ಪಾವನಂ ವಿಮಾನಂ) ಪವಿತ್ರವಾದ ಶ್ರೀರಂಗ ವಿಮಾನವು (ನಃ) ನಮ್ಮ (ಲೋಚನೇ) ಕಣ್ಣುಗಳನ್ನು ( ಪುಲಕಯತಿ ) ಆನಂದಪುಲಕಿತವಾಗಿ ಮಾಡುತ್ತದೆ. ತಂಪುಂಟುಮಾಡುತ್ತದೆ.

ಈ ಶ್ಲೋಕದಲ್ಲಿಯೂ ಶ್ರೀರಂಗ ವಿಮಾನದ ವರ್ಣನೆ ಇದೆ. ಇಲ್ಲಿ ಶ್ರೀರಂಗ ವಿಮಾನವನ್ನು ನೀರುಂಡ ಮೇಘದೋಪಾದಿ ವಿರಾಜಿಸಿದೆ ಎಂದು ವರ್ಣಿಸಿದ್ದಾರೆ. ಆದಿಶೇಷನು ಬೆಳ್ಳಗಿರುವನು. ಅವನ ಮೇಲೆ ಶ್ರೀರಂಗನಾಥನು ಶಯನಿಸಿದ್ದಾನೆ. ಶ್ರೀರಂಗನಾಥನು ಮರಕತ ಮಣಿಯಂತೆ ಶೋಭಿಸಿರುವುದರಿಂದ ಸಮುದ್ರದ ನೀರನ್ನೆಲ್ಲಾ ಪಾನಮಾಡಿದ ಕೃಷ್ಣಮೇಘದಂತೆ ಶ್ರೀರಂಗ ವಿಮಾನ ಶೋಭಿಸಿದೆ ಎಂದು ಇಲ್ಲಿ ಅನುಸಂಧಾನ ಮಾಡಿದೆ.

**ವ್ಯಾಪಿರೂಪಮಪಿ ಗೋಷ್ಪದಯಿತ್ವಾ**
**ಭಕ್ತ–ವತ್ಸಲತಯೋಜ್ಝಿತ–ವೇಲಂ।**
**ತದ್ವಿಷಂತಪ–ನೃಕೇಸರಿರೂಪಂ**
**ಗೋಪುರೋಪರಿ ವಿಜೃಂಭಿತಮೀಡೇ॥** ॥೪೬॥

(ವ್ಯಾಪಿ) ಆಕಾಶವನ್ನೆಲ್ಲಾ ವ್ಯಾಪಿಸಿದ ಬಹಳ ದೊಡ್ಡದಾದ (ರೂಪಮಪಿ) ರೂಪವನ್ನೂ (ಗೋಷ್ಪದಯಿತ್ವಾ) ಹಸುವಿನ ಹೆಜ್ಜೆಯಷ್ಟು ಚಿಕ್ಕದನ್ನಾಗಿಮಾಡಿಕೊಂಡು ( ಗೋಪುರೋಪರಿ ) ಗೋಪುರದ ಮೇಲೆ ( ವಿಜೃಂಭಿತಂ ) ಬೆಳಗುತ್ತಿರುವುದೂ, ( ಭಕ್ತವತ್ಸಲತಯಾ ) ಭಕ್ತನಾದ ಪ್ರಹ್ಲಾದನ ಮೇಲೆ ಉಂಟಾದ ವಾತ್ಸಲ್ಯದಿಂದ (ಉಜ್ಝಿತವೇಲಂ) ಮೇರೆ ಮೀರಿ ಅವತರಿಸಿದುದೂ, ( ತತ್ ) ಪರಮ ವಿಲಕ್ಷಣವಾದುದೂ ಆದ

(ದ್ವಿಷಂತಪ–ನೃಕೇಸರಿ–ರೂಪಂ) ಶತ್ರುವಾದ ಹಿರಣ್ಯಕಶಿಪುವನ್ನು ನಾಶ ಪಡಿಸುವ ಶ್ರೀನೃಸಿಂಹರೂಪವನ್ನು (ಈಡೇ) ಸ್ತುತಿಸುತ್ತೇನೆ.

ಶ್ರೀರಂಗಮಂದಿರಕ್ಕೆ ಹೋಗುವ ಮಾರ್ಗದಲ್ಲಿ ಗೋಪುರದ ಮೇಲೆ ವಿರಾಜಿಸಿರುವ ಮೇಟನರಸಿಂಹಸ್ವಾಮಿಯನ್ನು ಈ ಶ್ಲೋಕದಲ್ಲಿ ಸ್ತುತಿಸಿದೆ. ಶ್ರೀನೃಸಿಂಹನು ತನ್ನ ಮತ್ತೆ ಇತರ ಅವತಾರಗಳಲ್ಲಿ ಹೇಗೋ ಹಾಗೆ ಅವತರಿಸಲಿಲ್ಲ. ಕಂಭದಲ್ಲಿ ಕೂಡಲೇ ಮೈದೋರಿದನು ಸ್ವಾಮಿ ಪ್ರಹ್ಲಾದನ ಆರ್ತಿಯನ್ನು ಪರಿಹರಿಸುವುದಕ್ಕಾಗಿ. ಈ ಅವತಾರ ಬಹಳ ವಿಲಕ್ಷಣವಾದುದು. ಶ್ರೀರಾಮ, ಶ್ರೀಕೃಷ್ಣ ಮೊದಲಾದ ಅವತಾರಗಳಲ್ಲಿ ಇದ್ದಂತೆ ಗರ್ಭವಾಸಾದಿಗಳೇ ಮೊದಲಾದವು ಇಲ್ಲಿ ಇರಲಿಲ್ಲ. 'ಸತ್ಯಂ ವಿಧಾತುಂ ನಿಜಭೃತ್ಯಭಾಷಿತಂ ವ್ಯಾಪ್ತಿಂಚ ಭೂತೇಷ್ವಖಿಲೇಷು ಚಾತ್ಮನಃ ।' ಎಂದು ಹೇಳಿದಂತೆ ಆದುದು ಈ ಅವತಾರ. ಸ್ವಾಮಿಯು ಸರ್ವತ್ರ ವ್ಯಾಪಿಸಿದ್ದ ತನ್ನ ರೂಪವನ್ನು ಚಿಕ್ಕದನ್ನಾಗಿ ಮಾಡಿಕೊಂಡು ಇಲ್ಲಿ ವಿರಾಜಿಸಿದ್ದಾನೆ. ಗೋಪುರದ ಮೇಲೆ ವಿರಾಜಿಸಿರುವ ಶ್ರೀನೃಸಿಂಹನನ್ನು ಇಲ್ಲಿ ಸ್ತುತಿಸಿದೆ.

ಅಹಮಲಮವಲಂಬಸ್ಸೀದತಾಂ ಇತ್ಯಜಸ್ರಂ
ನಿವಸದುಪರಿಭಾಗೇ ಗೋಪುರಂ ರಂಗಧಾಮ್ನಃ ।
ಕ್ವಚನ ನೃಪರಿಪಾಟೀ–ವಾಸಿತಂ, ಕ್ವಾಪಿ ಸಿಂಹ–
ಕ್ರಮಸುರಭಿತಮೇಕಂ, ಜ್ಯೋತಿರಗ್ರೇ ಚಕಾಸ್ತಿ ॥ ॥೪೭॥

(ಸೀದತಾಂ) ಸಂಸಾರದಲ್ಲಿ ತೊಳಲುತ್ತಾ, ದುಃಖಿಸುವವರಿಗೆ (ಅಹಂ) ನಾನೇ (ಅಲಂ) ಸಾಕಾಗುವ (ಅವಲಂಬಃ ಇತಿ) ಕೈಹಿಡಿವ ಜೊತೆಯವನು ಅಥವಾ ಆಲಂಬನ ಎಂದು ತೋರಿಸುವಂತೆ (ರಂಗಧಾಮ್ನಃ) ಶ್ರೀರಂಗಮಂದಿರದ (ಗೋಪುರಂ ಉಪರಿಭಾಗೇ) ಗೋಪುರದ ಮೇಲ್ಭಾಗದಲ್ಲಿ (ಅಜಸ್ರಂ) ಯಾವಾಗಲೂ (ನಿವಸತ್) ವಾಸಿಸುವುದೂ (ಕ್ವಚನ) ಒಂದು ಭಾಗದಲ್ಲಿ ಎಂದರೆ ಕುತ್ತಿಗೆಗಿಂತ ಕೆಳಗೆ (ನೃಪರಿಪಾಟೀವಾಸಿತಂ) ಮನುಷ್ಯನ ರೂಪ ಜೊತೆಸೆ ಕೂಡಿರುವುದೂ (ಕ್ವಾಪಿ) ಮತ್ತೊಂದು ಭಾಗದಲ್ಲಿ ಎಂದರೆ ಕುತ್ತಿಗೆಗೆ

ಮೇಲ್ಭಾಗದಲ್ಲಿ (ಸಿಂಹಕ್ರಮ ಸುರಭಿತಂ) ಸಿಂಹದ ರೂಪದೊಡನೆ ಸೇರಿರುವುದೂ ಆದ (ಏಕಂ ಜ್ಯೋತಿಃ) ಅದ್ವಿತೀಯವಾದ ಒಂದು ಪರಂಜ್ಯೋತಿಯು (ಅಗ್ರೇ) ಕಣ್ಣೆದುರಿಗೆ (ಚಕಾಸ್ತಿ) ಪ್ರಕಾಶಿಸುತ್ತಾ ಇದೆ.

ಈ ಶ್ಲೋಕದಲ್ಲಿಯೂ ಶ್ರೀನೃಸಿಂಹನನ್ನು ಸ್ತುತಿಸಿದೆ. ಶ್ರೀರಂಗ ಮಂದಿರದ ಗೋಪುರದ ಮೇಲ್ಭಾಗದಲ್ಲಿ ಇರುತ್ತಾ ಲೋಕದ ಜನರಿಗೆಲ್ಲಾ ತಾನು ರಕ್ಷಕನಾಗುವನೆಂಬುದನ್ನು ತೋರಿಕೊಡುತ್ತಿದ್ದಾನೆ ಸ್ವಾಮಿ ಶ್ರೀನೃಸಿಂಹ. ಅದ್ವಿತೀಯನಾದ ಆ ಪರಂಜ್ಯೋತಿಸ್ಸ್ವರೂಪನು ಸಕಲ ಮನುಜ ನಯನ ಗೋಚರನಾಗಿ ತನ್ನನ್ನು ಆಶ್ರಯಿಸಿದವರನ್ನು ಅಭಯವಿತ್ತು ರಕ್ಷಿಸುವವನಾಗಿದ್ದಾನೆ.

**ಸಂಶೋಧ್ಯ ಪಾವನ-ಮನೋಹರ-ದೃಷ್ಟಿಪಾತೈಃ**
**ದೇವಾಯ ಮಾಮಪಿ ನಿವೇದಯತಾಂ ಗುರೂಣಾಂ ।**
**ಸವ್ಯೋತ್ತರೇ ಭಗವತೋಽಸ್ಯ ಕಟಾಕ್ಷ-ವೀಕ್ಷಾ**
**ಪಂಕ್ತಿಂ ಪ್ರಪದ್ಯ ಪರಿತಃ ಪರಿತೋ ಭವೇಯಂ ॥ ॥೪೮॥**

(ಮಾಮಪಿ) ನೀಚನಾದ ನನ್ನನ್ನೂ (ಪಾವನಮನೋಹರ ದೃಷ್ಟಿ ಪಾತೈಃ) ಪರಿಶುದ್ಧವಾದವೂ ಸುಂದರವಾದವೂ ಆದ ಕಟಾಕ್ಷಗಳಿಂದ (ಸಂಶೋಧ್ಯ) ಪರಿಶುದ್ಧನನ್ನಾಗಿಮಾಡಿ (ದೇವಾಯ) ಭಗವಂತನಿಗೆ (ನಿವೇದ ಯತಾಂ) ತಕ್ಕವನೆಂದು ಅರ್ಪಣೆ ಮಾಡುವ (ಅಸ್ಯಭಗವತಃ ಸವ್ಯೋತ್ತರೇ) ಈ ಭಗವಂತನಿಗೆ ಎಡ ಭಾಗದಲ್ಲಿಯೂ ಆದರೆ ಉತ್ತರ ದಿಕ್ಕಿನಲ್ಲಿ ಇರುವ (ಗುರೂಣಾಂ) ಗುರುಗಳ, ಆಚಾರ್ಯರ (ಕಟಾಕ್ಷವೀಕ್ಷಾ ಪಂಕ್ತಿಂ ಪ್ರಪದ್ಯ) ಕಟಾಕ್ಷ ವೀಕ್ಷಣಗಳ ಶ್ರೇಣಿಯನ್ನು ಆಶ್ರಯಿಸಿ (ಪರಿತಃ ಪರಿತಃ ಭವೇಯಂ) ಅವರನ್ನು ಪ್ರದಕ್ಷಿಣ ಮಾಡುತ್ತೇನೆ.

ಈ ಶ್ಲೋಕದಲ್ಲಿ ಆಚಾರ್ಯರುಗಳಿಗೆ ಪ್ರಣಾಮವನ್ನು ಸಮರ್ಪಿ ಸಿದ್ದಾರೆ. ಆಚಾರ್ಯರು ಪರಮಕೃಪೆಯಿಂದ ನಮ್ಮನ್ನು ಕಟಾಕ್ಷಿಸಿ ನಮ್ಮ ದೋಷಗಳೆನ್ನೆಲ್ಲಾ ಹೋಗಲಾಡಿಸಿ ನಮ್ಮನ್ನು ಭಗವಂತನಲ್ಲಿ ಒಪ್ಪಿಸುತ್ತಾರೆ.

'ಪಾಪಿಷ್ಠಃ ಕ್ಷತ್ರಬಂಧುಶ್ಚ ಪುಂಡರೀಕಶ್ಚ ಪುಣ್ಯಕೃತ್। ಆಚಾರ್ಯವತ್ತಯಾ ಮುಕ್ತೌ ತಸ್ಮಾದಾಚಾರ್ಯವಾನ್ ಭವೇತ್॥' ಎಂದು ಹೇಳಿ ಆಚಾರ್ಯ ಸಂಬಂಧ ಹಾಗೂ ಆಚಾರ್ಯರ ಅನುಗ್ರಹ ಮೋಕ್ಷಕ್ಕೆ ಕಾರಣವೆಂದು ನಿರೂಪಿಸಲಾಗಿದೆ. ಇಂಥ ಮಹಿಮಾನ್ವಿತರಾದ ಆಚಾರ್ಯರಿಗೆ ಪ್ರದಕ್ಷಿಣ ನಮಸ್ಕಾರಾದಿಗಳನ್ನು ಅರ್ಪಿಸಿ ಅವರ ಕೃಪೆಯನ್ನು ಮುಂದಿಟ್ಟುಕೊಂಡು ಭಗವಂತನ ಸಂದರ್ಶನವನ್ನು ಪಡೆಯಬೇಕೆಂದು ಸೂಚಿಸಿದೆ.

**ಶ್ರೀರಂಗರಾಜ–ಕರ–ನಮ್ರಿತ–ಶಾಖಿಕಾಭ್ಯಾಂ**
**ಲಕ್ಷ್ಮ್ಯಾ ಸ್ವಹಸ್ತಕಲಿತ–ಶ್ರವಣಾವತಂಸಂ।**
**ಪುನ್ನಾಗ–ತಲ್ಲಜಮಜಸ್ರ–ಸಹಸ್ರಗೀತಿ**
**ಸೇಕೋತ್ಥ–ದಿವ್ಯನಿಜ–ಸೌರಭಮಾಮನಾಮಃ॥ ॥೪೯॥**

(ಶ್ರೀರಂಗರಾಜ) ಶ್ರೀ ರಂಗನಾಥನ (ಕರ) ಶ್ರೀ ಹಸ್ತಗಳಿಂದ (ನಮ್ರಿತ) ಬಾಗಿಸಲ್ಪಟ್ಟ (ಶಾಖಿಕಾಭ್ಯಾಂ) ಕೊಂಬೆಗಳಿಂದ (ಲಕ್ಷ್ಮ್ಯಾ) ಶ್ರೀ ರಂಗ ನಾಯಕಿಯು (ಸ್ವಹಸ್ತ–ಕಲಿತ–ಶ್ರವಣ ಅವತಂಸಂ) ತನ್ನ ಶ್ರೀಹಸ್ತದಿಂದ ಬಿಡಿಸಿಕೊಂಡ ಕರ್ಣ ಭೂಷಣದ ಹೂವನ್ನು ಉಳ್ಳದೂ (ಅಜಸ್ರ) ಯಾವಾಗಲೂ ಉಂಟಾದ (ಸಹಸ್ರಗೀತಿ ಸೇಕ) ತಿರುವಾಯ್ಮೊಳಿ ಎಂಬ ಜಲವನ್ನು ಹಾಯಿಸುವುದರಿಂದ (ಉತ್ಥ) ಉಂಟಾದ (ದಿವ್ಯನಿಜಸೌರಭಂ) ವಿಲಕ್ಷಣವಾದ ಪರಿಮಳವನ್ನುಳ್ಳದೂ ಆದ (ಪುನ್ನಾಗತಲ್ಲಜಂ) ಶ್ರೇಷ್ಠವಾದ ಪುನ್ನಾಗ ವೃಕ್ಷವನ್ನು (ಆಮನಾಮಃ) ಸ್ತುತಿಸುತ್ತೇವೆ.

ಚಂದ್ರಪುಷ್ಕರಿಣೀ ತೀರದಲ್ಲಿರುವ ಪುನ್ನಾಗ ವೃಕ್ಷವನ್ನು ಸ್ತುತಿಸಿದ್ದಾರೆ. ದಿವ್ಯ ದಂಪತಿಗಳು ವಿಲಾಸವಿಹಾರ ಮಾಡುವಾಗ ದೇವನು ಈ ವೃಕ್ಷದ ಕೊಂಬೆಯನ್ನು ಕೆಳಗೆ ಎಳೆದುಕೊಂಡಾಗ ದೇವಿ ಹೂವನ್ನು ಬಿಡಿಸಿಕೊಳ್ಳುವಳಂತೆ. ಈ ಪವಿತ್ರವಾದ ಪುನ್ನಾಗವೃಕ್ಷದ ಅಡಿಯಲ್ಲಿ ಭಕ್ತರು ನಿರಂತರವಾಗಿ ದಿವ್ಯಪ್ರಬಂಧ ಪಾರಾಯಣ ಮಾಡುವರಂತೆ. ಈ ವೃಕ್ಷಕ್ಕೆ ಆ ಪವಿತ್ರವಾದ ತಿರುವಾಯ್ಮೊಳಿಯ ಸೂಕ್ತಿಗಳೇ ಜಲವಾಗಿ ಅದರಿಂದ ಅದು

ಬೆಳೆಯುವುದಂತೆ. ಆ ತಿರುವಾಯ್ಮೊಳಿಯ ಸೇಕದ ಕಾರಣ ವಿಲಕ್ಷಣವಾದ ಪರಿಮಳ ಅದಕ್ಕುಂಟಾಗಿದೆ. ಅಂಥ ಶ್ರೇಷ್ಠವಾದ ಆ ಪುನ್ನಾಗ ವೃಕ್ಷಕ್ಕೆ ಪ್ರಣಾಮ ಮಾಡಿದೆ ಇಲ್ಲಿ.

**ಶ್ರೀರಂಗಚಂದ್ರಮಸಮಿಂದಿರಯಾ ವಿಹರ್ತುಂ**
**ವಿನ್ಯಸ್ಯ ವಿಶ್ವ-ಚಿದಚಿನ್ನಯನಾಧಿಕಾರಂ ।**
**ಯೋ ನಿರ್ವಹತ್ಯನಿಶಂ ಅಂಗುಲಿಮುದ್ರಯೈವ**
**ಸೇನಾನ್ಯಮನ್ಯ-ವಿಮುಖಾಸ್ತಮಶಿಶ್ರಿಯಾಮ ॥ ॥೩೦॥**

(ಯಃ) ಯಾರು (ಶ್ರೀರಂಗಚಂದ್ರಮಸಂ) ಶ್ರೀ ರಂಗನಾಥನನ್ನು (ಇಂದಿರಯಾ) ಲಕ್ಷ್ಮೀ ದೇವಿಯೊಡನೆ (ವಿಹರ್ತುಂ) ವಿಹರಿಸುವುದಕ್ಕಾಗಿ (ವಿನ್ಯಸ್ಯ) ಶೇಷಶಯನದಲ್ಲಿ ಸೇರಿಸಿ (ವಿಶ್ವಚಿದಚಿನ್ನಯನಾಧಿಕಾರಂ) ಸಮಸ್ತ ಚೇತನಾಚೇತನಗಳನ್ನು ನಿಯಮಿಸುವ ಅಧಿಕಾರವನ್ನು (ಅನಿಶಂ) ಯಾವಾಗಲೂ (ಅಂಗುಲಿಮುದ್ರಯಾ ಏವ) ತನ್ನ ಬೆರಳಿನ ಮುದ್ರೆಯಿಂದಲೇ (ನಿರ್ವಹತಿ) ನಿರ್ವಹಿಸುವರೋ (ತಂ ಸೇನ್ಯಾನ್ಯಂ) ಅಂಥ ವಿಷ್ವಕ್ಸೇನರನ್ನು (ಅನ್ಯವಿಮುಖಾಃ ಸಂತಃ) ಬೇರೆಯ ಕಡೆ ಆಶ್ರಯವನ್ನಾಗಲೀ ಆಸಕ್ತಿಯನ್ನಾಗಲೀ ಇಲ್ಲದವರಾಗಿ (ಅಶಿಶ್ರಿಯಾಮ) ಆಶ್ರಯಿಸಿದೆವು.

'ಸೇನಾಪತಿ ಮೊದಲಿಯಾರ್' ಎಂದು ವಿಶ್ರುತರಾಗಿರುವ ವಿಷ್ವಕ್ಸೇನರಿಗೆ ಈ ಶ್ಲೋಕದಲ್ಲಿ ಪ್ರಣಾಮಗಳನ್ನು ಅರ್ಪಿಸಿದೆ. ಶ್ರೀ ರಂಗನಾಥನು ದೇವಿಯೊಡನೆ ವಿಹರಿಸುವ ಸಮಯದಲ್ಲಿ ಲೋಕದಲ್ಲಿನ ಎಲ್ಲ ಚೇತನಾಚೇತನ ಪದಾರ್ಥಗಳನ್ನು ನಿಯಮಿಸುವ ಅಧಿಕಾರವನ್ನು ವಿಷ್ವಕ್ಸೇನರಿಗೆ ಒಪ್ಪಿಸುತ್ತಾನೆ. ವಿಷ್ವಕ್ಸೇನರಾದರೋ ತಮ್ಮ ಅಂಗುಳಿಮುದ್ರೆಯಿಂದಲೇ ಎಲ್ಲರನ್ನೂ ನಿಯಮಿಸುತ್ತಾರೆ. 'ಯಸ್ಯ ದ್ವಿರದವಕ್ತ್ರಾದ್ಯಾಃ ಪಾರಿಷದ್ಯಾಃ ಪರಃಶತಂ । ವಿಘ್ನಂ ನಿಘ್ನಂತಿ ಸತತಂ ವಿಷ್ವಕ್ಸೇನಂ ತಮಾಶ್ರಯೇ ॥' ಎಂಬುದನ್ನು ಇಲ್ಲಿ ಅನುಸಂಧಾನ ಮಾಡಬಹುದು.

**ಸೈನ್ಯಧುರೀಣ–ಪ್ರಾಣಸಹಾಯಾಂ ಸೂತ್ರವತೀಂ ಆಶಿಶ್ರಿಯಂ ಅಂಬಾಂ ।**
**ಶ್ರೀಪದಲಾಕ್ಷಾ–ಲಾಂಛಿತ–ಸೇವಾಪ್ಲೋತ–ಲಸದ್ದೋರ್ವಲ್ಲಿ ವಿಲಾಸಾಂ ॥ ॥೩೧॥**

(ಶ್ರೀ) ಶ್ರೀದೇವಿಯ (ಪದ) ಪಾದಗಳಿಗೆ ಲೇಪಿಸಿದ (ಲಾಕ್ಷಾ) ಅರಗಿನ ರಸದಿಂದ (ಲಾಂಛಿತ) ಗುರುತು ಮಾಡಲ್ಪಟ್ಟ (ಸೇವಾಪ್ಲೋತ) ಕೈಂಕರ್ಯಾರ್ಥವಾದ ಪ್ಲೋತವಸ್ತ್ರದಿಂದ (ಲಸತ್) ಪ್ರಕಾಶಿಸುತ್ತಿರುವ (ದೋರ್ವಲ್ಲಿ ವಿಲಾಸಾಂ) ಬಳ್ಳಿಯಂತಹ ಕೈಗಳ ಸೌಂದರ್ಯವನ್ನುಳ್ಳವಳೂ ಆದ (ಸೈನ್ಯ ಧುರೀಣ ಪ್ರಾಣ ಸಹಾಯಾಂ) ವಿಷ್ವಕ್ಸೇನರ ಪ್ರಿಯಪತ್ನಿಯಾದ (ಸೂತ್ರವತೀಂ) ಸೂತ್ರವತಿಯೆಂಬ (ಅಂಬಾಂ) ತಾಯಿಯನ್ನು (ಆಶಿಶ್ರಿಯಂ) ಆಶ್ರಯಿಸಿದೆನು.

ಸೂತ್ರವತೀದೇವಿಯು ಶ್ರೀದೇವಿಯ ಕೈಂಕರ್ಯದಲ್ಲಿ ಮಗ್ನಳಾಗಿರುವವಳು. ಸೂತ್ರವತೀದೇವಿ ವಿಷ್ವಕ್ಸೇನರ ಪ್ರಿಯಪತ್ನಿಯಾದವಳು. ಶ್ರೀದೇವಿಯ ಪಾದಸೇವೆ ಮಾಡುವ ಇವಳು ಶ್ರೀದೇವಿಯ ಪಾದಗಳಿಗೆ ಅಲಂಕರಿಸಿದ ಅರಗಿನ ಮುದ್ರೆಯನ್ನುಳ್ಳ ಪ್ಲೋತವಸ್ತ್ರವನ್ನು ತನ್ನ ಬಳ್ಳಿಯಂತಹ ಕೈಗಳಲ್ಲಿ ಧರಿಸಿದ್ದಾಳೆ. ಸದಾ ಶ್ರೀದೇವಿಯ ಸೇವೆಯಲ್ಲಿ ನಿರತಳಾದ ಸೂತ್ರವತೀ ದೇವಿಯನ್ನು ಇಲ್ಲಿ ನಮಿಸಿದೆ.

**ವಿದಧತು ಸುಖಂ ವಿಷ್ವಕ್ಸೇನಸ್ಯ ತೇ ಪ್ರಥಮೇ ಭಟಾಃ**
**ಕರಿಮುಖಜಯತ್ಸೇನೌ ಕಾಲಾಹ್ವ–ಸಿಂಹಮುಖೌ ಚ ನಃ ।**
**ಜಗತಿ ಭಜತಾಂ ತತ್ತತ್ಪ್ರತ್ಯೂಹ–ತೂಲ–ದವಾನಲಾಃ**
**ದಿಶಿದಿಶಿ ದಿವಾರಾತ್ರಂ ಶ್ರೀರಂಗಪಾಲನ–ಕರ್ಮಠಾಃ ॥ ॥೩೨॥**

(ಜಗತಿ) ಈ ಲೋಕದಲ್ಲಿ (ಭಜತಾಂ) ಸೇವಿಸುವವರ (ತತ್ ತತ್ ಪ್ರತ್ಯೂಹತೂಲ ದವಾನಲಾಃ) ಬಗೆ ಬಗೆಯಾದ ವಿಘ್ನಗಳೆಂಬ ಹತ್ತಿಯರಾಶಿಗೆ

ಕಾಡುಕಿಟ್ಟಿನಂತಿರುವವರೂ (ದಿವಾರಾತ್ರಂ) ಹಗಲೂ ರಾತ್ರಿಯೂ (ದಿಶಿ ದಿಶಿ) ದಿಕ್ಕು ದಿಕ್ಕುಗಳಲ್ಲಿಯೂ (ಶ್ರೀರಂಗಪಾಲನ ಕರ್ಮಠಾಃ) ಶ್ರೀ ರಂಗವನ್ನು ಕಾಯುವುದೇ ನಿತ್ಯಕರ್ಮವನ್ನಾಗಿ ಉಳ್ಳವರೂ (ವಿಷ್ವಕ್ಸೇನಸ್ಯ) ವಿಷ್ವಕ್ಸೇನರ (ತೇ) ಪ್ರಸಿದ್ಧರಾದ (ಪ್ರಥಮೋ ಭಟಾಃ) ಮುಖ್ಯ ಸೇವಕರಾದ (ಕರಿಮುಖಜಯತ್ಸೇನೌ ಕಾಲಾಹ್ವಸಿಂಹಮುಖೌಚ) ಗಜಾನನ, ಜಯತ್ಸೇನ, ಕಾಲಾಹ್ವ, ಸಿಂಹಮುಖ ಎಂಬವರು (ನಃ) ನಮಗೆ (ಸುಖಂ) ಸೌಖ್ಯವನ್ನು (ವಿದಧತು) ಮಾಡಲಿ.

ವಿಷ್ವಕ್ಸೇನರ ಭಟರುಗಳು ನಮಗೆ ಸೌಖ್ಯವನ್ನುಂಟುಮಾಡಲಿ ಎಂದು ಇಲ್ಲಿ ಬೇಡಲಾಗಿದೆ. 'ಶ್ರೀಮತೇ ವಿಷ್ವಕ್ಸೇನಾಯ ನಮಃ' ಎಂದು ಭಗವಂತನ ಹತ್ತಿರ ದಕ್ಷಿಣಾಭಿಮುಖವಾಗಿ ಕುಳಿತಿರುವವರೂ, ಶಂಖಚಕ್ರ ಧರರೂ, ನೀಲಮೇಘನಿಭರೂ ಆದ ವಿಷ್ವಕ್ಸೇನರನ್ನು ಧ್ಯಾನಮಾಡಿದ ನಂತರ ವಿಷ್ವಕ್ಸೇನರ ಪರಿಜನರಿಗೆ ಪ್ರಣಾಮಮಾಡಬೇಕೆಂದು ಶ್ರೀರಾಮಾನುಜರು ನಿತ್ಯ ಗ್ರಂಥದಲ್ಲಿ 'ಓಂ ಗಂ ಗಜಾನನಾಯನಮಃ, ಓಂ ಜಂ ಜಯತ್ಸೇನಾಯ ನಮಃ ಓಂ ಹಂ ಹರಿವಕ್ತ್ರಾಯನಮಃ, ಓಂ ಕಂ ಕಾಲ ಪ್ರಕೃತಿ ಸಂಜ್ಞಾಯನಮಃ, ಓಂ ಸರ್ವೇಭ್ಯಃ ಶ್ರೀವಿಷ್ವಕ್ಸೇನ ಪರಿಜನೇಭ್ಯೋ ನಮಃ ಇತಿ ಶ್ರೀವಿಷ್ವಕ್ಸೇನ ಪರಿಜನಾನ್ ಪ್ರಣಮ್ಯ' ಎಂದು ನಿರೂಪಿಸಿರುವುದಕ್ಕೆ ಇದು ಅನುಸಾರವಾಗಿದೆ. ಇವರು ಒಳ್ಳೆಯ ಕೆಲಸಕ್ಕೆ ಬರುವ ವಿಘ್ನಗಳನ್ನು ಪರಿಹಾರಮಾಡುವರು. ಶ್ರೀರಂಗಕ್ಷೇತ್ರವನ್ನು ಎಚ್ಚರಿಕೆಯಿಂದ ಕಾಯುವವರೂ ಆಗಿದ್ದಾರೆ ಇವರು.

**ಶ್ರುತಿಮಯಂ ಅತಿಹರ್ಷ-ಪ್ರಶ್ರಯ-ಸ್ಮೇರವಕ್ತ್ರಂ**
**ಮಣಿಮುಕುರಮಿವಾಗ್ರೇ ಮಂಗಲಂ ರಂಗಧಾಮ್ನಃ ।**
**ಶರಣಮಭಿಗತಾಃ ಸ್ಮೋ ಯತ್ರ ರೂಪಸ್ವರೂಪ**
**ಸ್ವಗುಣ-ಮಹಿಮದರ್ಶೀ ಮೋದತೇ ರಂಗಶಾಯೀ ॥ ॥೩೩॥**

(ಯತ್ರ) ಯಾವ ಗರುಡನಲ್ಲಿ (ರಂಗಶಾಯೀ) ಶ್ರೀರಂಗನಾಥನು (ರೂಪ ಸ್ವರೂಪ ಸ್ವಗುಣಮಹಿಮದರ್ಶೀ) ತನ್ನ ದಿವ್ಯ ಮಂಗಳ ವಿಗ್ರಹ,

ದಿವ್ಯಾತ್ಮ ಸ್ವರೂಪ, ದಿವ್ಯವಾದ ಕಲ್ಯಾಣಗುಣಗಳು ಇವುಗಳ ಮಹಿಮೆಯನ್ನು ಸಾಕ್ಷಾತ್ಕರಿಸಿಕೊಂಡು ( ಮೋದತೇ ) ಆನಂದಪಡುವನೋ ಅಂಥವನೂ (ರಂಗಧಾಮ್ನಃ) ಶ್ರೀರಂಗನಾಥನ (ಅಗ್ರೇ) ಮುಂದೆ (ಮಂಗಲಂ) ಮಂಗಲಕರವಾದ ( ಮಣಿಮುಕುರಮಿವ ಸ್ಥಿತಂ ) ರನ್ನಗನ್ನಡಿಯಂತೆ ಇರುವವನೂ (ಅತಿಹರ್ಷ) ಬಹಳ ಸಂತೋಷದಿಂದಲೂ (ಪ್ರಶ್ರಯ) ವಿನಯದಿಂದಲೂ ( ಸ್ಮೇರ ) ವಿಕಸಿಸಿರುವ ( ವಕ್ತ್ರಂ ) ಮುಖಮಂಡಲವನ್ನುಳ್ಳವನೂ (ಶ್ರುತಿಮಯಂ) ವೇದಸ್ವರೂಪಿಯೂ ಆದ ಆ ಗರುಡನನ್ನು (ಶರಣಂ ಅಭಿಗತಾಃ ಸ್ಮಃ ) ಶರಣು ಹೊಂದಿದವರಾಗಿದ್ದೇವೆ.

'ಸುಪರ್ಣೋಽಸಿ ಗರುತ್ಮಾನ್' ಎಂದು ವೇದ ಗರುಡನನ್ನು ಕೊಂಡಾಡುತ್ತದೆ. 'ವೇದಾತ್ಮಾ ವಿಹಗೇಶ್ವರಃ' ಎಂದು ಹೀಗೆ ಹೇಳಲ್ಪಡುವ ವೈನತೇಯರಿಗೆ ಇಲ್ಲಿ ನಮಸ್ಕಾರಗಳನ್ನರ್ಪಿಸಿದೆ. 'ಅಗ್ರತೋ ಭಗವತಃ ಭಗವಂತಂ ವೈನತೇಯಂ ಆಸೀನಂ ದ್ವಿಭುಜಂ ಕೃತಾಂಜಲಿಪುಟಂ ಧ್ಯಾತ್ವಾ ಪ್ರಣಮ್ಯ' ಎಂದು ರಾಮಾನುಜರು ನಿತ್ಯಗ್ರಂಥದಲ್ಲಿ ನಿರೂಪಿಸಿದ್ದಾರೆ. ಭಗವಂತನ ಮುಂದೆ ಇರುವ ಮಂಗಳಕರವಾದ ರನ್ನಗನ್ನಡಿಯಂತೆ ಗರುಡ ಭಗವಾನ್ ಶೋಭಿಸಿದ್ದಾನೆ. ಅವನ ಮುಖದಲ್ಲಿ ಸಂತೋಷವೂ ವಿನಯವೂ ವಿಕಾಸಗೊಂಡಿವೆ. ಇವನಲ್ಲಿ ಭಗವಂತನಾದ ರಂಗನಾಥನು ತನ್ನ ಮಹಿಮಾದಿಗಳನ್ನು ಸಾಕ್ಷಾತ್ಕರಿಸಿಕೊಂಡು ಆನಂದಿಸುವನು.

**ತಾರ್ಕ್ಷ್ಯ–ಪಕ್ಷತಿವದಸ್ಯ ವಲ್ಲಭಾಂ**
**ರುದ್ರಯಾ ಸಹ ಸುಕೀರ್ತಿಮರ್ಚಯೇ|**
**ಹರ್ಷಬಾಷ್ಪಮಪಿ ಕೀರ್ತಿಮರ್ಥಿನಾಂ**
**ಯನ್ಮುಖೇನ ಕಮಲಾ ಕಟಾಕ್ಷಯೇತ್ ||** ||೫೪||

(ಕಮಲಾ) ಶ್ರೀ ದೇವಿಯು (ಅರ್ಥಿನಾಂ) ಬೇಡುವವರಿಗೆ (ಹರ್ಷಬಾಷ್ಪಂ) ಆನಂದ ಬಾಷ್ಪವನ್ನೂ (ಕೀರ್ತಿಂ ಅಪಿ) ಕೀರ್ತಿಯನ್ನೂ

(ಯನ್ಮುಖೇನ) ಯಾವ ಗರುಡ ಪತ್ನಿಯರ ಮೂಲಕವಾಗಿ (ಕಟಾಕ್ಷಯೇತ್) ಕಟಾಕ್ಷಿಸಿ ಕರುಣಿಸುವಳೋ ಅಂಥವಳೂ (ತಾರ್ಕ್ಷ್ಯಪಕ್ಷತಿವತ್) ಗರುಡನ ರೆಕ್ಕೆಯ ಮೂಲದ ಹಾಗಿರುವಳೂ (ಅಸ್ಯ) ಈ ಗರುಡನಿಗೆ (ವಲ್ಲಭಾಂ) ಪ್ರಿಯೆಯಾದವಳೂ ಆದ (ಸುಕೀರ್ತಿಂ) ಸುಕೀರ್ತಿ ಎಂಬುವವಳನ್ನು (ರುದ್ರಯಾ ಸಹ) ರುದ್ರೆ ಎಂಬುವವಳೊಡನೆಯೂ ಸಹ (ಅರ್ಚಯೇ) ಅರ್ಚಿಸುತ್ತೇನೆ, ಪೂಜಿಸುತ್ತೇನೆ.

ಈ ಶ್ಲೋಕದಲ್ಲಿ ವೈನತೇಯನ ಪತ್ನಿಯರಾದ ಸುಕೀರ್ತಿ ಮತ್ತು ರುದ್ರೆ ಎಂಬುವವರಿಗೆ ಸ್ತುತಿಯನ್ನರ್ಪಿಸಿದೆ. ಈ ಇಬ್ಬರು ಪತ್ನಿಯರೂ ಗರುಡನ ಎರಡು ರೆಕ್ಕೆಗಳಿಗೆ ಮೂಲದಂತೆ ಅಥವಾ ಬುಡದಂತೆ ಇದ್ದಾರೆ. ಶ್ರೀ ದೇವಿಯರು ಇವರಿಬ್ಬರ ಮೂಲಕ ಅರ್ಥಿಗಳಿಗೆ ಆನಂದ ಬಾಷ್ಪವನ್ನೂ, ಕೀರ್ತಿಯನ್ನೂ ಕರುಣಿಸುವಳು. ಶ್ರೀ ದೇವಿಯ ಇಂಥ ಅಂತರಂಗಸೇವಿಕೆಯರಾದ ಗರುಡ ಪತ್ನಿಯರಿಗೆ ಇಲ್ಲಿ ನಮಸ್ಕಾರ ಮಾಡಿದೆ.

ಸ್ವಾಸ್ತ್ರರೂಪ ಸ್ಫುರನ್ಮೌಳಿ ಮಾ ಶಬ್ದ
ಇತ್ಯುದ್ಧುನಾನಾಂ ಸುರಾನ್ ತರ್ಜನೀ ಮುದ್ರಯಾ।
ನಾಥ-ನಿದ್ರೋಚಿತೋನ್ನಿದ್ರ-ತಾಮ್ರೇಕ್ಷಣಾಂ
ಸಂಚರಂತೀಂ ಸ್ತುಮಸ್ತಾಂಚ ಪಂಚಾಯುಧೀಂ ॥ ॥೫೫॥

( ಸ್ವಅಸ್ತ್ರರೂಪಸ್ಫುರನ್ಮೌಳಿ ಯಥಾತಥಾ ) ತಾವು ಅಸ್ತ್ರಗಳಾಗಿರುವ ಅಂಶವು ತಮ್ಮ ಶಿರಸ್ಸಿನಲ್ಲಿ ಕಂಡುಬರುವಂತೆ ಇರುವುವೂ (ಸುರಾನ್) ದೇವತೆಗಳನ್ನು (ಮಾ ಶಬ್ದಃ) ಶಬ್ದ ಮಾಡಬೇಡಿ ಎಂದು (ಇತಿ ತರ್ಜನೀ ಮುದ್ರಯಾ) ವ್ಯಕ್ತಿಯನ್ನು ತೋರಿಸಿ ಹೇಳುವ ಮುದ್ರೆಯಿಂದ (ಉದ್ಧುನಾನಾಂ) ನಡುಗಿಸುವುವೂ ( ನಾಥ ) ಶ್ರೀರಂಗನಾಥನ (ನಿದ್ರಾ) ನಿದ್ರೆಗೆ (ಉಚಿತ) ತಕ್ಕುದಾದ (ಉನ್ನಿದ್ರ) ಎಚ್ಚರವಾಗಿರುವುದರಿಂದ (ತಾಮ್ರ) ಕೆಂಪಾಗಿರುವ (ಈಕ್ಷಣಾಂ) ಕಣ್ಣುಗಳನ್ನುಳ್ಳವೂ (ಸಂಚರಂತೀಂ) ಸಂಚಾರ

ಮಾಡಿಕೊಂಡಿರುವುವೂ ಆದ (ತಾಂ) ಅಂಥ (ಪಂಚಾಯುಧೀಂಚ) ಪಂಚಾಯುಧಗಳನ್ನೂ (ಸ್ತುಮಃ) ಸ್ತೋತ್ರ ಮಾಡುತ್ತೇವೆ.

ಈ ಶ್ಲೋಕದಲ್ಲಿ ಶ್ರೀ ರಂಗನಾಥನ ಪಂಚಾಯುಧಗಳಿಗೆ ಸಮಷ್ಟಿಯಾಗಿ ವಂದನೆ ಸಲ್ಲಿಸಿದೆ. ಪಂಚಾಯುಧಗಳು 'ದಿವ್ಯಭಾಸ್ಕರದೇಹಾಶ್ಚ ಮೂರ್ತಿಮಂತಃ ಸುಖಪ್ರದಾಃ। ರಾಮಂ ಪ್ರಾಂಜಲಯೋ ಭೂತ್ವಾಬ್ರುವನ್ ಮಧುರಭಾಷಿಣಃ ॥' ಎಂದು ಹೇಳಿದಂತೆ ದಿವ್ಯರೂಪಗಳನ್ನು ಧರಿಸಿ ಭಗವಂತನನ್ನು ಎಚ್ಚರಿಕೆಯಿಂದ ಕಾಯುತ್ತಿವೆ. ಒಂದೊಂದು ಆಯುಧವೂ ತನ್ನ ಶಿರಸ್ಸಿನಲ್ಲಿ ಆಯಾ ಆಯುಧದ ರೂಪವನ್ನು ಹೊಂದಿರುವುದಂತೆ. ಭಗವಂತನು ನಿದ್ರಿಸಿರುವ ಕಾಲದಲ್ಲಿಯೂ ಎಚ್ಚರವಾಗಿರುವುದರಿಂದ ಅವುಗಳ ಕಣ್ಣುಗಳು ಕೆಂಪಾಗಿರುವುವು. ನೆರೆದ ದೇವತೆಗಳು ಗಲಾಟೆಮಾಡದಂತೆ 'ಸದ್ದು ಮಾಡಬೇಡಿ' ಎಂದು ಇವು ತಮ್ಮ ತೋರಬೆರಳನ್ನು ಬಾಯಿಯಮೇಲಿಟ್ಟು ಸಂಜ್ಞೆ ಮಾಡಿ ಎಲ್ಲರನ್ನೂ ನಡುಗಿಸುವುವು. ಶ್ರೀ ಪಾಂಚಜನ್ಯ, ಶ್ರೀ ಸುದರ್ಶನ, ಶ್ರೀ ಶಾರ್ಙ್ಗವೆಂಬ ಧನುಸ್ಸು, ಶ್ರೀ ಕೌಮೋದಕೀ ಎಂಬ ಗದೆ, ಶ್ರೀ ನಂದಕವೆಂಬ ಕತ್ತಿ ಈ ಐದು ಆಯುಧಗಳನ್ನು ಇಲ್ಲಿ ಒಟ್ಟಿಗೆ ಭಜಿಸಿದೆ. 'ಓಂ ಶ್ರೀ ಸುದರ್ಶನಾಯ ಹೇತಿರಾಜಾಯ ನಮಃ ಇತಿ ಸುದರ್ಶನಾತ್ಮಾನಂ ರಕ್ತವರ್ಣಂ ರಕ್ತನೇತ್ರಂ ದ್ವಿಭುಜಂ ಕೃತಾಂಜಲಿಪುಟಂ ಭಗವಂತಮಾಲೋಕಯಂತಂ ತದ್ದರ್ಶನಾನಂದೋಪಬೃಂಹಿತಮುಖಂ ಭಗವಚ್ಚಕ್ರಂ ಮೂರ್ಧ್ನಿ ಧಾರಯಂತಂ ದಕ್ಷಿಣತಃ ಪ್ರಣಮ್ಯ' ಎಂದು ನಿತ್ಯಗ್ರಂಥದಲ್ಲಿ ಹೇಳಿರುವುದನ್ನು ಅನುಸಂಧಾನಮಾಡಬೇಕು.

ಅಸ್ತ್ರಗ್ರಾಮಾಗ್ರೇಸರಂ ನಾಥವೀಕ್ಷಾ-ಸೀಧು-ಕ್ಷೀಬೋದ್ವೇಲ
ನೃತ್ತಾಭಿರಾಮಂ।
ಚಕ್ರಂ ದೈತ್ಯಚ್ಛೇದ-ಕಲ್ಮಾಷಿತಾಂಗಂ ಭ್ರಾಮ್ಯತ್‌ಜ್ವಾಲಾಮಾಲ
ಭಾರಿ ಪ್ರಪದ್ಯೇ ॥ ೫೬

(ನಾಥ) ಶ್ರೀರಂಗನಾಥನ (ವೀಕ್ಷಾ) ಕಟಾಕ್ಷಗಳ (ಸೀಧು) ಮಧುಪಾನ

ದಿಂದ (ಕ್ಷೀಬ) ಮದಿಸಿದುದಾಗಿ (ಉದ್ವೇಲ) ಮಿತಿಯಿಲ್ಲದೆ ಇರುವ (ನೃತ್ತ) ನರ್ತನದಿಂದ (ಅಭಿರಾಮಂ) ಸುಂದರವಾದುದೂ (ದೈತ್ಯಚ್ಛೇದ) ಆಸುರರನ್ನು ಛೇದಿಸುವುದರಿಂದ (ಕಲ್ಮಾಷಿತಾಂಗಂ) ಕಲೆಗಳನ್ನುಳ್ಳ ಮೈಯುಳ್ಳದೂ (ಭ್ರಾಮ್ಯತ್‌ಜ್ವಾಲಾಮಾಲಭಾರಿ) ಸುತ್ತುತ್ತಿರುವ ಜ್ವಾಲೆಗಳ ಮಾಲೆಯನ್ನು ಧರಿಸಿಕೊಂಡಿರುವುದೂ (ಅಸ್ತ್ರಗ್ರಾಮಾಗ್ರೇಸರಂ) ಅಸ್ತ್ರಗಳ ಸಮೂಹದಲ್ಲಿ ಪ್ರಥಮಸ್ಥಾನವುಳ್ಳುದೂ ಆದ (ಚಕ್ರಂ) ಶ್ರೀ ಸುದರ್ಶನಚಕ್ರವನ್ನು (ಪ್ರಪದ್ಯೇ) ಶರಣು ಹೋಗುತ್ತೇನೆ.

ಈ ಶ್ಲೋಕದಲ್ಲಿ ಶ್ರೀ ಸುದರ್ಶನ ಚಕ್ರವನ್ನು ಸ್ತೋತ್ರಮಾಡಿ ನಮಿಸಿದೆ. ಶ್ರೀ ಸುದರ್ಶನಕ್ಕೆ ಮೂರು ವಿಶೇಷಣಗಳನ್ನು ಇಲ್ಲಿ ಕೊಟ್ಟಿದೆ. ಭಗವಂತನ ಕಡೆಗಣ್ಣೋಟಗಳೆಂಬ ಮಧುಪಾನ ದಿಂದ ಅದು ಮದಿಸಿ ನರ್ತಿಸುತ್ತಿದೆಯಂತೆ. ಜ್ವಾಲಾಮಾಲೆಗಳಿಂದ ಕೂಡಿದ ಶ್ರೀ ಸುದರ್ಶನ ಅಸ್ತ್ರಗಳಲ್ಲೇ ಪ್ರಥಮ ಸ್ಥಾನದಲ್ಲಿದೆ. ಶತ್ರುಗಳನ್ನು ವಧಿಸಿದ ಕಾರಣ ಆದು ರಕ್ತದ ಕಲೆಗಳನ್ನು ಹೊಂದಿದೆಯಂತೆ. ಇಂಥ ಹಿರಿಮೆಯುಳ್ಳ, ಅಸ್ತ್ರಗಳಿಗೆಲ್ಲಾ ರಾಜನಾದ ಸುದರ್ಶನನಿಗೆ ಇಲ್ಲಿ ಸ್ತುತಿಯನ್ನರ್ಪಿಸಿದೆ.

**ಹನುಭೂಷ – ವಿಭೀಷಣಯೋಃ ಸ್ಯಾಂ**
**ಯುತಮಾವಿಹ ಮೋಕ್ಷಮುಪೇಕ್ಷ್ಯ ।**
**ರಘುನಾಯಕ ನಿಷ್ಕ್ರಯಭೂತಂ**
**ಭುವಿ ರಂಗಧನಂ ರಮಯೇತೇ ॥** ॥೫೭॥

(ಯುತಮೌ) ಯಾವ ಹನುಮದ್ವಿಭೀಷಣರುಗಳು (ಮೋಕ್ಷಂ) ಮೋಕ್ಷವನ್ನು (ಉಪೇಕ್ಷ್ಯ) ಕಡೆಗಣಿಸಿ (ಇಹ ಭುವಿ) ಈ ವಿಭೂತಿಯಲ್ಲಿ (ರಘುನಾಯಕ ನಿಷ್ಕ್ರಯ ಭೂತಂ) ಶ್ರೀ ರಾಮಚಂದ್ರನ ಮೂಲಧನವಾಗಿರುವ (ರಂಗಧನಂ) ತಿರುವರಂಗದ ಸ್ವಾಮಿಯನ್ನು (ರಮಯೇತೇ) ಕೈಂಕರ್ಯಗಳಿಂದ ಸಂತೋಷ ಪಡಿಸುವರೋ ಅಂಥ (ಹನುಭೂಷವಿಭೀಷಣಯೋಃ) ಹನುಮಂತನಿಗೂ ವಿಭೀಷಣನಿಗೂ (ಸ್ಯಾಂ) ನಾನು ಸೇರಿದವನಾಗಿ ದಾಸನಾಗಿ ಆಗುತ್ತೇನೆ.

ಹನುಮದ್ವಿಭೀಷಣರಿಗೆ ನಾನು ದಾಸನಾಗುವೆನೆಂದು ಇಲ್ಲಿ ಅನುಭವಿಸಿದೆ. ಇವರಿಬ್ಬರು ಮಹಾನುಭಾವರೂ ಮೋಕ್ಷವನ್ನು ಅಪೇಕ್ಷಿಸದೆ ಶ್ರೀ ರಂಗನಾಥ ನನ್ನೇ ಸೇವಿಸುವವರೂ ಆದರಿಂದ ಸಂತೋಷಿಸುವವರೂ ಆಗಿದ್ದಾರೆ. 'ಇಚ್ಚುವೈ ತವಿರ ಯಾನ್ ಪೋಯಿಂದಿರಲೋಕಮಾಳುಂ ಅಚ್ಚುವೈ ಪೆರಿನುಂ ವೇಂಡೇನ್ ಅರಂಗಮಾನಹರುಳಾನೇ' ಎಂಬಂತೆಯೂ, 'ಸ್ನೇಹೋಮೇ ಪರಮೋ ರಾಜನ್ ತ್ವಯಿ ನಿತ್ಯಂ ಪ್ರತಿಷ್ಠಿತಃ। ಭಕ್ತಿಶ್ಚ ನಿಯತಾವೀರ ಭಾವೋ ನಾನ್ಯತ್ರ ಗಚ್ಛತಿ॥' ಎಂದೂ ಹೇಳಿದಂತೆ, 'ಸೋಽತ್ರೈವ ಹಂತ ಹನುಮಾನ್ ಪರಮಾಂ ವಿಮುಕ್ತಿಂ ಬುದ್ಧ್ವಾವಧೂಯ ಚರಿತಂ ತವ ಸೇವ ತೇಽಸೌ। (ಅತಿಮಾನುಷಸ್ತವ) ಎಂದೂ ಹೇಳಿದಂತೆ ಆಂಜನೇಯನು ಮೋಕ್ಷ ವನ್ನು ನಿರಾಕರಿಸಿ ಶ್ರೀರಾಮನೇ ಅರ್ಚಿಸಿದ್ದ ಶ್ರೀ ರಂಗನಾಥನನ್ನು ಸೇವಿಸುತ್ತಿದ್ದಾನೆ. ಶ್ರೀ ರಾಮನು ವಿಭೀಷಣನನ್ನು ಕುರಿತು 'ಕಿಂಚಾನ್ಯ ದ್ವಕ್ತುಮಿಚ್ಛಾಮಿ ರಾಕ್ಷಸೇಂದ್ರ ಮಹಾಬಲ। ಆರಾಧಯ ಜಗನ್ನಾಥಂ ಇಕ್ಷ್ವಾಕುಕುಲದೈವತಂ॥' ಎಂದು ಶಾಸನ ಮಾಡಿದನು. ಪೆರಿಯಾಳ್ವಾರ್ ಅವರು 'ಮನ್ನುಡೈ ವಿಬೀಡಣರ್ಕ್ಕಾಯ್ ಮದಿಳಿಲಂಗೈ ದಿಶೈನೋಕ್ಕಿ' ಎಂದ್ಯ ಹೇಳಿರುವುದನ್ನು ಅನುಸಂಧಾನ ಮಾಡಬಹುದು.

ಇತೋ ಬಹಿಃ ಪಂಚ ಪರಾಂಚಿ ಖಾನಿ
ಪ್ರತ್ಯಂಚಿ ತಾನಿ ಸ್ಯುರಿತೋಽಂತರಿತ್ಥಮ್ ।
ಔಪಾಧಿಕೇಭ್ಯೋ ನಿರುಪಾಧಿಭೋಗ್ಯೇ
ಪ್ರತ್ಯಾಹರದ್ವೇತ್ರವರಂ ವ್ರಜಾಮಿ ॥ ॥೫೮॥

(ಪಂಚಖಾನಿ) ಐದು ಇಂದ್ರಿಯಗಳು (ಇತಃ ಬಹಿಃ) ಈ ಜಾಗಕ್ಕಿಂತ ಬೇರೆಕಡೆ ಹೊರಗಡೆ (ಪರಾಂಚಿ) ಬಾಹ್ಯ ವಿಷಯಗಳನ್ನು ಗ್ರಹಿಸುವುದಾಗಿ (ಸ್ಯುಃ) ಆಗುತ್ತವೆ. (ತಾನಿ) ಆ ಐದು ಇಂದ್ರಿಯಗಳು (ಇತಃ ಅಂತಃ) ಇದರೊಳಗೇ (ಪ್ರತ್ಯಂಚಿ) ಪ್ರತ್ಯಕ್ಷದಾರ್ಥವಾದ ಶ್ರೀ ರಂಗನಾಥನನ್ನು ಸೇರಿದುವಾಗಿ (ಸ್ಯುಃ) ಆಗುತ್ತವೆ. (ಇತ್ಥಂ) ಹೀಗೆ (ಔಪಾಧಿಕೇಭ್ಯಃ)

ಸಾಮಾನ್ಯವಸ್ತುಗಳಿಗಿಂತ (ನಿರುಪಾಧಿ ಭೋಗ್ಯೇ) ಸ್ವಯಂ ಭೋಗ್ಯನಾದ ಶ್ರೀ ರಂಗನಾಥನಲ್ಲಿ (ಪ್ರತ್ಯಾಹರತ್) ಇಂದ್ರಿಯಗಳನ್ನು ತೆಗೆದುಕೊಂಡು ಹೋಗಿ ಸೇರಿಸುವ (ವೇತ್ರವರಂ) ಶ್ರೇಷ್ಠವಾದ ಕೋಲನ್ನು (ವ್ರಜಾಮಿ) ಶರಣು ಹೋಗುತ್ತೇನೆ.

ಶ್ರೀ ರಂಗನಾಥನ ಗರ್ಭ ಗೃಹದ ದ್ವಾರದಲ್ಲಿ ಅಡ್ಡಡ್ಡಲಾಗಿ ಹಾಕಿರುವ ಗುಂಡಾದ ಕೋಲನ್ನು ಇಲ್ಲಿ ಸ್ತುತಿಸಿದೆ. ಕಂಡ ಕಂಡ ಜನರು ನೇರವಾಗಿ ಒಳಗೆ ನುಗ್ಗದೆ ಇರುವುದಕ್ಕಾಗಿ ಹಾಕಿರುವ ಕೋಲು ಇದು. ಗರ್ಭಗೃಹದ್ವಾರದ ವರೆಗೂ ಬರುವವರೆಗೂ ಬಾಹ್ಯ ವಿಷಯಗಳಾದ ಮಂಟಪ ಗೋಪುರಾದಿ ಗಳಲ್ಲಿ ಆಸಕ್ತಿ ಇರುತ್ತದೆ. ಆದರೆ ಗರ್ಭಗೃಹದ ಬಳಿಗೆ ಬಂದಕೂಡಲೇ ಆ ಪರವಸ್ತುವಿನಲ್ಲಿ ಇಂದ್ರಿಯಗಳು ಮಗ್ನವಾಗಬೇಕು. ಬಾಹ್ಯವಿಷಯದಲ್ಲಿ ಆಸಕ್ತಿಉಳ್ಳವರನ್ನು ಇದು ಹೊರಗೆ ಇಡುತ್ತದೆ. ಬಾಹ್ಯವಾದ ಮಂಟಪ ಗೋಪುರಾದಿಗಳು ಔಪಾಧಿಕ. ಭಗವಂತನಾದರೋ ನಿರುಪಾಧಿಕ ಭೋಗ್ಯನು.

**ಶೇಷಶಯ–ಲೋಚನಾಮೃತನದೀ–ರಯಾಕುಲಿತ**
**ಲೋಲಮಾನಾನಾಂ।**
**ಆಲಂಬಮಿವಾಮೋದಸ್ತಂಭದ್ವಯಮಂತರಂಗಂ**
**ಅಭಿಯಾಮಃ ॥ ॥೫೯॥**

(ಶೇಷಶಯ) ಆದಿಶೇಷನ ಮೇಲೆ ಪವಡಿಸಿದ ಶ್ರೀ ರಂಗನಾಥನ (ಲೋಚನ) ಕಟಾಕ್ಷಗಳ (ಅಮೃತನದೀ) ಅಮೃತ ನದಿಗಳ (ರಯ) ವೇಗದಿಂದ (ಆಕುಲಿತ) ವ್ಯಾಕುಲಗೊಂಡು (ಲೋಲಮಾನಾನಾಂ) ತತ್ತರಿಸುವವರಿಗೆ (ಅಂತರಂಗಂ ಆಲಂಬಮಿವ ಸ್ಥಿತಂ) ಹತ್ತಿರ ಇರುವ ಆಲಂಬನದಂತಿರುವ (ಆಮೋದ ಸ್ತಂಭದ್ವಯಂ) ಆಮೋದಸ್ತಂಭಗಳೆಂದು ವಿಖ್ಯಾತವಾದ ಎರಡು ಕಂಬಗಳನ್ನು (ಅಭಿಯಾಮಃ) ಸಮೀಪಿಸುತ್ತೇವೆ.

ರಂಗನಾಥನ ಕಟಾಕ್ಷಕ್ಕೆ ಪಾತ್ರವಾಗಿರುವ ಎರಡು ಸ್ತಂಭಗಳು ಇವೆ.

ಭಗವಂತನ ದಿವ್ಯಮಂಗಳ ವಿಗ್ರಹದ ಪರಿಮಳವೇ ಈ ಎರಡು ಕಂಬಗಳಾಗಿ ಆದವೆಂದೂ ಹೇಳಬಹುದು. ಭಗವಂತನನ್ನು ಸಂದರ್ಶಿಸಲು ಬಂದಾಗ ಆ ಸ್ವಾಮಿಯ ಕಟಾಕ್ಷಗಳೆಂಬ ಅಮೃತನದಿಯ ಪ್ರವಾಹದ ವೇಗಕ್ಕೆ ಸಿಕ್ಕಿ ನಿಲ್ಲಲಾರದೆ ತತ್ತರಿಸುವವರಿಗೆ ಆಲಂಬನದಂತೆ ಇರುವುವು ಈ ಸ್ಥಂಭಗಳು. ಭಗವಂತನನ್ನು ಸಂದರ್ಶಿಸಿ ಪರವಶರಾದವರು ಇವುಗಳನ್ನು ಹಿಡಿದುಕೊಂಡು ನಿಂತು ಅವನನ್ನು ಸೇವಿಸುವರು. ಕುಲಶೇಖರಾಳ್ವಾರ್ ಅವರು 'ಅರಂಗತ್ತರವಣೈಯೇಲ್ ಪಳ್ಳಿಕೊಳ್ಳುಂ ಮಾಯೋನೈ ಮಣಿತ್ತೂಣೇ ಪತ್ತಿ ನಿನ್ರು ಎನ್'ವಾಯಾರ ಎನ್ರುಕೊಲೋ ವಾಳ್ತ್ತುನಾಳೇ' ಎಂದು ಅನುಭವಿಸಿ ರುವುದನ್ನು ಕಾಣಬಹುದು.

ಶ್ರೀರಂಗಾಂತರ್ಮಂದಿರಂ ದೀಪ್ರಶೇಷಂ
ಶ್ರೀ ಭೂಮೀತದ್ರಮ್ಯ-ಜಾಮಾತೃಗರ್ಭಂ ।
ಪಶ್ಯೇಮ ಶ್ರೀ ದಿವ್ಯ ಮಾಣಿಕ್ಯ-ಭೂಷಾ
ಮಂಜೂಷಾಯಾಸ್ತುಲ್ಯಮುನ್ಮೀಲಿತಾಯಾಃ ॥ ॥೩೦॥

(ದೀಪ್ರಶೇಷಂ) ಆದಿಶೇಷನಿಂದ ಪ್ರಕಾಶಿಸುತ್ತಿರುವುದೂ (ಶ್ರೀಭೂಮಿ ತತ್ ರಮ್ಯ ಜಾಮಾತೃಗರ್ಭಂ) ಶ್ರೀ ದೇವಿ, ಭೂದೇವಿ ಮತ್ತು ಸುಂದರನಾದ ಅಳಿಯನಾದ ಶ್ರೀರಂಗನಾಥನನ್ನು (ಪೆರಿಯಾಳ್ವಾರಿಗೆ ಅಳಿಯು) ಒಳಗೊಂಡಿರುವುದೂ (ಉನ್ಮೀಲಿತಾಯಾಃ) ಬಾಗಿಲು ತೆಗೆದಿರುವ (ಶ್ರೀದಿವ್ಯ ಮಾಣಿಕ್ಯ ಭೂಷಾಮಂಜೂಷಾಯಾಃ ತುಲ್ಯಂ) ಶ್ರೀ ದೇವಿಯ ದಿವ್ಯವಾದ ಮಾಣಿಕ್ಯ ಮಯವಾದ ಅಲಂಕಾರಗಳ ಪೆಟ್ಟಿಗೆಗೆ ಸಮಾನವಾದುದೂ ಆದ (ಶ್ರೀರಂಗಾಂತರ್ಮಂದಿರಂ) ಶ್ರೀ ರಂಗವಿಮಾನದ ಒಳಗಡೆ ಇರುವ ಗರ್ಭಗೃಹವನ್ನು (ಪಶ್ಯೇಮ) ಸಂದರ್ಶಿಸೋಣ.

ಶ್ರೀ ರಂಗನಾಥನು ಶಯನಿಸಿರುವ ಶ್ರೀರಂಗಮಂದಿರದ ಗರ್ಭಗೃಹವನ್ನಿಲ್ಲಿ ವರ್ಣಿಸಿದೆ. ಈ ಗರ್ಭಗೃಹ ಆದಿಶೇಷನಿಂದ ಪ್ರಕಾಶಿಸುತ್ತಿದೆ. ಶ್ರೀದೇವಿ

ಭೂದೇವಿಯರೊಡನೆ ಕೂಡಿದ ಶ್ರೀರಂಗನಾಥನನ್ನು ಒಳಗೊಂಡಿದೆ. ಶ್ರೀದೇವಿಯ ದಿವ್ಯವಾದ ಮಾಣಿಕ್ಯಾಭರಣಗಳನ್ನು ಇಡುವ ಪೆಟ್ಟಿಗೆ ತೆರೆದಿಟ್ಟಂತೆ ಇದೆ. ಇಂಥ ಉಜ್ವಲವೂ ಶ್ರೇಷ್ಠವೂ ಆದ ದಿವ್ಯಸ್ಥಲ ಅದು.

ಲೀಲಾಲತಾ–ಕೃಪಾಣೀ–ಭೃಂಗಾರ

ಪತದ್ಗ್ರಹಾರ್ಪಿತ–ಕರಾಗ್ರಾಃ ।

ಪ್ಲೋತಾವತಂಸಿತ ಕುಚಾಃ

ಪದಾಬ್ಜಸಂವಾಹಿನೀರ್ವಯಂ ಸ್ತುಮಹೇ ॥ ॥೬೧॥

(ಲೀಲಾ) ಲೀಲೆಗಾಗಿ ಆದ ( ಲತಾ ) ಬಳ್ಳಿಗಳೇನು ( ಕೃಪಾಣೀ ) ಕತ್ತಿಗಳೇನು (ಭೃಂಗಾರ) ಚಿನ್ನದ ಬಟ್ಟಲುಗಳೇನು (ಪತದ್ಗ್ರಹ) ಪೀಕದಾನೀ ಇವುಗಳನ್ನು. ( ಅರ್ಪಿತ ) ಹಿಡಿದುಕೊಂಡಿರುವ ( ಕ ರಾ ಗ್ರಾ ಃ ) ತುದಿಕೈಗಳುಳ್ಳವರೂ ( ಪ್ಲೋತ ) ಆರ್ದ್ರವಸ್ತ್ರದಿಂದ ( ಅವತಂಸಿತ ) ಆಚ್ಛಾದಿಸಲ್ಪಟ್ಟ, ಅಲಂಕೃತವಾದ (ಕುಚಾಃ) ಸ್ತನಗಳನ್ನುಳ್ಳವರೂ ಆದ ( ಪದಾಬ್ಜ ಸಂವಾಹಿನೀಃ ) ಪಾದಗಳನ್ನು ಒತ್ತುವ ದೇವಿಯರನ್ನು (ವಯಂ ಸ್ತುಮಹೇ) ನಾವು ಸ್ತೋತ್ರ ಮಾಡುತ್ತೇವೆ.

ನಿತ್ಯಗ್ರಂಥದಲ್ಲಿ 'ಓಂ ಸರ್ವಾಭ್ಯೋ ಭಗವತ್ಪಾದಾರವಿಂದ ಸಂವಾಹಿನೀಭ್ಯೋ ನಮಃ ಇತಿ ದಿವ್ಯಪಾದಾರವಿಂದ ಸಂವಾಹಿನೀಃ ಸಮಂತತಃ ಪ್ರಣಮ್ಯ' ಎಂದು ಹೇಳಿರುವುದಕ್ಕನುಸಾರವಾಗಿ ಇಲ್ಲಿ ಭಗವಂತನ ಪಾದಗಳನ್ನು ಒತ್ತಿ ಸೇವೆ ಸಲ್ಲಿಸುವವರನ್ನು ನಮಿಸಿದೆ. ಭಗವಂತನಿಗೆ ಬೇಕಾಗುವ ಚಿನ್ನದ ಬಟ್ಟಲು ಪತದ್ಗ್ರಹ ಮೊದಲಾದವನ್ನು ಇವರು ಕೈಲಿ ಹಿಡಿದುಕೊಂಡು ಸ್ವಾಮಿಗೆ ಸೇವೆ ಸಲ್ಲಿಸುತ್ತಾರೆ.

ಮುಕುಳಿತನಳಿನಾಸ್ಸಕೌಮುದೀಕಾ
ಇವ ಸುನಿಶಾ ವಿಮಲಾದಿಕಾ ನವಾಪಿ ।
ಶಿರಸಿ ಕೃತ-ನಮಸ್ಕ್ಯದೇಕಹಸ್ತಾ
ಇತರ-ಕರೋಚ್ಚಲ-ಚಾಮರಾಃ ಶ್ರಯೇಯಂ॥ ॥೬೨॥

(ಶಿರಸಿಕೃತ ನಮಸ್ಯತ್ ಏಕಹಸ್ತಾಃ) ತಮ್ಮ ತಲೆಯ ಮೇಲೆ ಒಂದು ಕೈಯನ್ನು ಇಟ್ಟು ಕೈಮುಗಿಯುವವರಾಗಿ (ಇತರ ಕರ-ಉಚ್ಚಲ ಚಾಮರಾಃ) ಇನ್ನೊಂದು ಕೈಯಿಂದ ಚಾಮರವನ್ನು ಬೀಸುವವರಾಗಿಯೂ, (ಮುಕುಳಿತ ನಳಿನಾಃ) ಮುಚ್ಚಿಕೊಂಡು ಇರುವ ತಾವರೆ ಹೂಗಳನ್ನುಳ್ಳವೂ (ಸಕೌಮು ದೀಕಾಃ) ಬೆಳದಿಂಗಳಿನಿಂದ ಕೂಡಿರುವುವೂ ಆದ (ಸುನಿಶಾಃ ಇವ ಸ್ಥಿತಾಃ), ಸುಂದರವಾದ ರಾತ್ರಿಗಳಂತೆ ಇರುತ್ತಿರುವವರೂ ಆದ (ವಿಮಲಾದಿಕಾಃ ನವಾಪಿ) ವಿಮಲೆ ಮೊದಲಾದ ಒಂಭತ್ತುಮಂದಿ ಚಾಮರ ಗ್ರಾಹಿಣಿಗಳನ್ನು (ಶ್ರಯೇಯಂ) ಆಶ್ರಯಿಸುತ್ತೇನೆ.

ಈ ಶ್ಲೋಕದಲ್ಲಿ ವಿಮಲಾ ಮೊದಲಾದ ಒಂಭತ್ತು ಮಂದಿ ಚಾಮರ ಗ್ರಾಹಿಣಿಗಳನ್ನು ಸ್ತುತಿಸಿದೆ. ಒಂದು ಕೈಯಿಂದ ಚಾಮರವನ್ನು ಬೀಸುತ್ತಲೂ ಮತ್ತೊಂದು ಕೈಯನ್ನು ತಲೆಯ ಮೇಲಿಟ್ಟು ಕೈಮುಗಿಯುವವರಾಗಿಯೂ ಇರುವವರು ಇವರು. ತಲೆಯಮೇಲಿಟ್ಟ ಕೈ ಮುಚ್ಚಿಕೊಂಡ ತಾವರೆಯಂತೆ ಇರುವುದೆಂಬುದನ್ನು 'ಮುಕುಳಿತನಳಿನ' ಎಂಬುದು ತಿಳಿಸುತ್ತದೆ. ಬೀಸುವ ಚಾಮರವು ಬೆಳುದಿಂಗಳನ್ನು ಸೂಚಿಸುವುದು. ಇವೆರಡನ್ನೂ ಹೊಂದಿರುವ ಇವರು ಸುಂದರವಾದ ರಾತ್ರಿಯಂತೆ ಕಂಗೊಳಿಸುತ್ತಾರೆ. ಪೂರ್ವದಿಕ್ಕಿನಲ್ಲಿ 'ವಿಮಲಾಯೈ ನಮಃ' ಎಂದು ಆರಂಭಿಸಿಪ್ರದಕ್ಷಿಣಕ್ರಮವಾಗಿ 'ಓಂ ಉತ್ಕರ್ಷಿಣ್ಯೈ ನಮಃ, ಓಂ ಜ್ಞಾನಾಯೈ ನಮಃ, ಓಂ ಕ್ರಿಯಾಯೈ ನಮಃ, ಓಂ ಯೋಗಾಯೈ ನಮಃ, ಓಂ ಪ್ರಹ್ವ್ಯೈ ನಮಃ, ಓಂ ಸತ್ಯಾಯೈ ನಮಃ, ಓಂ ಈಶಾನಾಯೈ ನಮಃ ಇತಿ ಅಷ್ಟಶಕ್ತಯಃ ಚಾಮರಹಸ್ತಾಃ ವಿನ್ಯಸ್ತವ್ಯಾಃ

ಓಂ ಅನುಗ್ರಹಾಯ್ಯೈ ನಮಃ ಇತಿ ಕರ್ಣಿಕಾಪೂರ್ವಪಾರ್ಶ್ವೇ ಅನುಗ್ರಹಾಂ ಚಾಮರಹಸ್ತಾಂ ವಿನ್ಯಸೇತ್' ಎಂದು ಶ್ರೀ ಅನಂತನ ಮೇಲಿ ಕಲ್ಪಿಸಿದ ಪದ್ಮದ ಪತ್ರಗಳಲ್ಲಿ ಚಾಮರ ಗ್ರಾಹಿಣಿಯರನ್ನು ಅನುಸಂಧಾನ ಮಾಡಬೇಕೆಂದು ನಿತ್ಯಗ್ರಂಥದಲ್ಲಿ ರಾಮನುಜರು ಹೇಳಿರುವುದನ್ನು ಕಾಣಬಹುದು.

**ಉತ್ಫುಲ್ಲ-ಪಂಕಜ-ತಟಾಕಮಿವೋಪಯಾನಿ**

**ಶ್ರೀ ರಂಗರಾಜಮಿಹ ದಕ್ಷಿಣ-ಸವ್ಯ-ಸೀಮ್ನೋಃ ।**

**ಲಕ್ಷ್ಮೀಂ ವಿಹಾರರಸಿಕಾಮಿವ ರಾಜಹಂಸೀಂ**

**ಛಾಯಾಮಿವಾಭ್ಯುದಯಿನೀಂ ಅವನೀಂ ಚ ತಸ್ಯಾಃ ॥** ೬೩

(ಇಹ) ಈ ಗರ್ಭಗೃಹದಲ್ಲಿ (ಉತ್ಫುಲ್ಲ ಪಂಕಜ ತಟಾಕಮಿವ ಸ್ಥಿತಂ) ಅರಳಿದ ತಾವರೆ ಹೂಗಳನ್ನುಳ್ಳ ಸರೋವರದಂತೆ ಇರುವವನಾದ (ಶ್ರೀ ರಂಗ ರಾಜಂ) ಶ್ರೀ ರಂಗನಾಥನನ್ನು (ಉಪಯಾನಿ) ಆಶ್ರಯಿಸುತ್ತೇನೆ. (ದಕ್ಷಿಣ) ಸವ್ಯ ಸೀಮ್ನೋಃ) ಬಲಭಾಗ ಮತ್ತು ಎಡಭಾಗದಲ್ಲಿ (ವಿಹಾರ ರಸಿಕಾಂ ರಾಜ ಹಂಸೀಂ ಇವ) ವಿಹಾರದಲ್ಲಿ ರಸಿಕತೆಯುಳ್ಳ ರಾಜಹಂಸಿಯಂತೆ ಇರುವ (ಲಕ್ಷ್ಮೀಂ) ಶ್ರೀ ದೇವಿಯನ್ನೂ (ತಸ್ಯಾಃ) ಅವಳ (ಅಭ್ಯುದಯಿನೀಂ) ಅಭ್ಯುದಯವನ್ನು ಮೇಲೆ ಮೇಲೆ ಬೆಳೆಸುವವಳಾದ (ಛಾಯಾಮಿವ) ನೆರಳ ನಂತಿರುವ (ಅವನೀಂಚ) ಭೂ ದೇವಿಯನ್ನೂ (ಉಪಯಾನಿ) ಆಶ್ರಯಿಸುತ್ತೇನೆ.

ಇಲ್ಲಿಂದ ಉತ್ಸವ ಮೂರ್ತಿಯ ವರ್ಣನೆ 76ನೇ ಶ್ಲೋಕ ಪೂರ್ತಿ ಯಾಗಿದೆ. ಶ್ರೀ ಭೂದೇವಿಯರೊಡನೆ ಕೂಡಿರುವ ಉತ್ಸವ ಮೂರ್ತಿ ಶ್ರೀ ರಂಗರಾಜನನ್ನು ಇಲ್ಲಿ ಆಶ್ರಯಿಸಲಾಗಿದೆ. ಅರಳಿದ ತಾವರೆಗಳಿಂದ ಕೂಡಿದ ಸರೋವರದಂತೆ ಸ್ವಾಮಿ ವಿರಾಜಿಸಿದ್ದಾನೆ. ಬಲಭಾಗದಲ್ಲಿರುವ ಶ್ರೀದೇವಿ ವಿಹಾರ ರಸಿಕಳಾದ ರಾಜಹಂಸಿಯಂತೆಯೂ ಎಡಭಾಗದಲ್ಲಿರುವ ಭೂದೇವಿ ಅವಳ ಛಾಯೆಯಂತೆಯೂ ಇದ್ದಾಳೆ.

**ಪಿಬ ನಯನ ಪುರಸ್ತೇ ರಂಗಧುರ್ಯಾಭಿಧಾನ-**
**-ಸ್ಥಿತ ಮಿವ ಪರಿಫುಲ್ಲತ್ಪುಂಡರೀಕಂ ತಟಾಕಂ ।**
**ಶ್ರಿಯಮಪಿ ವಿಹರಂತೀಂ ರಾಜಹಂಸೀಮಿವಾಸ್ಮಿನ್**
**ಪ್ರತಿಫಲನಮಿವಾಸ್ಯಾಃ ಪಶ್ಯ ವಿಶ್ವಂಭರಾಂ ಚ ॥ ॥೬೪॥**

(ಹೇ ನಯನ) ಎಲೈ ಕಣ್ಣೇ (ಇಹ) ಈ ಗರ್ಭಗೃಹದಲ್ಲಿ (ತೇ ಪುರಃ) ನಿನ್ನ ಎದುರಿನಲ್ಲಿಯೇ (ಸ್ಥಿತಂ) ಇರುವುದಾಗಿ (ಪರಿಫುಲ್ಲತ್ಪುಂಡರೀಕಂ) ಅರಳಿದ ತಾವರೆ ಹೂಗಳನ್ನೊಳಗೊಂಡುದಾಗಿ (ರಂಗಧುರ್ಯಾಭಿಧಾನಂ) ಶ್ರೀ ರಂಗನಾಥನೆಂಬ ಹೆಸರನ್ನು ಉಳ್ಳ (ತಟಾಕಂ) ಸರೋವರವನ್ನು (ಪಿಬ) ಪಾನಮಾಡು. (ಅಸ್ಮಿನ್) ಈ ತಟಾಕದಲ್ಲಿ (ವಿಹರಂತೀಂ) ವಿಹರಿಸುತ್ತಿರುವ (ರಾಜ ಹಂಸೀಮಿವ) ರಾಜ ಹಂಸಿಯಂತಿರುವ (ಶ್ರಿಯಮಪಿ) ಶ್ರೀ ಮಹಾ ಲಕ್ಷ್ಮಿಯನ್ನೂ (ಅಸ್ಯಾಃ) ಈ ಶ್ರೀದೇವಿಯ (ಪ್ರತಿಫಲನಮಿವ ಸ್ಥಿತಾಂ) ಪ್ರತಿ ಬಿಂಬದಂತಿರುವ (ವಿಶ್ವಾಂಭರಾಂಚ) ಭೂದೇವಿಯನ್ನೂ (ಪಶ್ಯ) ನೋಡಿ ಸೇವಿಸು.

ಹಿಂದಿನ ಶ್ಲೋಕದ ಅಭಿಪ್ರಾಯವನ್ನೇ ಇಲ್ಲಿಯೂ ಕಾಣಬಹುದು.

**ಸೌಶೀಲ್ಯ-ಶೀತಲಂ ಅವೇಲ-ಕೃಪಾತರಂಗ-**
**ಸಂಪ್ಲಾವಿತಾಖಿಲಂ ಅಕೃತ್ರಿಮ-ಭೂಮ-ನಿಮ್ನಂ ।**
**ಲಕ್ಷ್ಮ್ಯಾ ಚ ವಾಸಿತಂ ಅಭೂಮ ವಿಗಾಹಮಾನಾಃ**
**ಶ್ರೀ ರಂಗರಾಜಮಿಷ-ಪದ್ಮಸರಃ ಪ್ರಸನ್ನಂ ॥ ॥೬೫॥**

(ಸೌಶೀಲ್ಯಶೀತಲಂ) ಸೌಶೀಲ್ಯಗುಣದಿಂದ ತಂಪಾದುದೂ (ಅವೇಲ) ದಡಮೀರಿ ಉಕ್ಕಿ ಹರಿಯುತ್ತಿರುವ (ಕೃಪಾತರಂಗ) ದಯೆಯೆಂಬುವ ಅಲೆಗಳಿಂದ (ಸಂಪ್ಲಾವಿತ) ನೆನೆಸಲ್ಪಟ್ಟ (ಅಖಿಲಂ) ಸಮಸ್ತ ಜನಗಳನ್ನೂ ಉಳ್ಳದುದೂ (ಅಕ್ರತಿಮ ಭೂಮ) ಸಹಜವಾದ 'ಭೂಮಾ'-ಹಿರಿಮೆಯನ್ನು ಉಳ್ಳುದೂ (ನಿಮ್ನಂ) ಅಳತೆ ಮಾಡುವುದಕ್ಕಾಗದಷ್ಟು ಅಗಾಧವಾದ ಗುಣ

ವಿಭೂತಿಗಳನ್ನುಳ್ಳುದೂ (ಲಕ್ಷ್ಮ್ಯಾವಾಸಿತಂಚ) ಶ್ರೀ ಲಕ್ಷ್ಮೀದೇವಿಯಿಂದ ಪರಿಮಳವನ್ನು ಪಡೆದುದೂ(ಪ್ರಸನ್ನಂ) ತಿಳಿಯಾದುದೂ, ಪ್ರಸನ್ನವಾದುದೂ, ಆದ ( ಶ್ರೀ ರಂಗರಾಜನಿಷಪದ್ಮಸರಃ ) ಶ್ರೀ ರಂಗರಾಜನೆನ್ನುವ ತಾವರೆ ಸರೋವರವನ್ನು (ವಿಗಾಹಮಾನಾಃ) ಹೊಕ್ಕುಅವಗಾಹ ಸ್ನಾನಮಾಡು ವವರಾಗಿ (ಅಭೂಮ) ಆದೆವು.

ಶ್ರೀ ರಂಗರಾಜನನ್ನು ಒಂದು ತಾವರೆಯ ಸರೋವರಕ್ಕೆ ಇಲ್ಲಿ ಹೋಲಿಸಿದೆ. ಸರೋವರದ ತಂಪಿಗೆ ಸ್ವಾಮಿಯ ಸೌಶೀಲ್ಯಗುಣ ಹೋಲುತ್ತದೆ. ಅಲೆಗಳು ಸರೋವರದಲ್ಲಿ ಏಳುವಂತೆ ಇಲ್ಲಿ ಕೃಪಾತರಂಗಗಳು ಹೊಮ್ಮುತ್ತವೆ. ಸರೋವರ ವಿಶಾಲವಾಗಿರುವುದಷ್ಟೇ? ಹಾಗೆಯೇ ಸ್ವಾಮಿಯ ಗುಣ ವಿಭೂತಿಗಳು ಅಳೆಯುವುದಕ್ಕಾಗದಷ್ಟು ಅಗಾಧವಾಗಿವೆ. ಸರೋವರದಲ್ಲಿ ಪರಿಮಳವಿರುವಂತೆ ಈ ರಂಗರಾಜನೆಂಬುವ ಸರೋವರದಲ್ಲಿ ಶ್ರೀದೇವಿ ಇದ್ದಾಳೆ. ಸರೋವರದ ತೀರ್ಥ ತಿಳಿಯಾಗಿರುವಂತೆ ಶ್ರೀ ರಂಗರಾಜನೆಂಬ ಪದ್ಮಸರೋವರ ಪ್ರಸನ್ನತೆಯನ್ನು ಹೊಂದಿದೆ. ಹೀಗೆ ಎಲ್ಲ ವಿಧದಲ್ಲಿಯೂ ಶ್ರೀರಂಗರಾಜನು ಪದ್ಮಸರೋವರದಂತಿದ್ದಾನೆ.

**ಸಿಂಹಾಸನೇ ಕಮಲಯಾ ಕ್ಷಮಯಾ ಚ ವಿಶ್ವಂ**
**ಏಕಾತಪತ್ರಯಿತುಂ ಅಸ್ಮದಸೂನ್ ನಿಷಣ್ಣಂ ।**
**ಲಕ್ಷ್ಮೀಸ್ಸ್ವಯಂವರ-ಸನಾಥಿತ-ಯೌವ್ವನಶ್ರೀಃ**
**ಸೌಂದರ್ಯ-ಸಂಪದವಲಿಪ್ತಮಿವಾಲಿಹೇಯ ॥** ॥೬೬॥

(ವಿಶ್ವಂ) ಸಮಸ್ತವಾದ ಚರಾಚರಗಳನ್ನು ( ಏಕಾತಪತ್ರಯಿತುಂ ) ಒಂದು ಕೊಡೆಯ ಕೆಳಗೆ ಬರುವಂತೆ ಮಾಡುವುದಕ್ಕೆ (ಕಮಲಯಾ) ಶ್ರೀ ದೇವಿಯೊಡನೆಯೂ (ಕ್ಷಮಯಾಚ) ಭೂ ದೇವಿಯೊಡನೆಯೂ (ಸಿಂಹಾಸನೇ) ಸಿಂಹಾಸನದಲ್ಲಿ (ನಿಷಣ್ಣಂ) ಕುಳಿತಿರುವವನೂ (ಅಸ್ಮತ್ ಅಸೂನ್) ನಮ್ಮ ಪ್ರಾಣವಾಗಿರುವವನೂ (ಲಕ್ಷ್ಮೀ) ಶ್ರೀ ದೇವಿಯು (ಸ್ವಯಂವರ) ಸ್ವಯಂವರ

ದಿಂದ (ಸನಾಥಿತ) ಕೃತಾರ್ಥವಾಗಿಮಾಡಲ್ಪಟ್ಟ (ಯೌವ್ವನ ಶ್ರೀಃ) ಯೌವ್ವನ ಶೋಭೆಯೇನು (ಸೌಂದರ್ಯ ಸಂಪತ್) ಸೌಂದರ್ಯವೆನ್ನುವ ಸಂಪತ್ತೇನು ಇವುಗಳಿಂದ (ಅವಲಿಪ್ತಂ ಇವ) ಗರ್ವಿತನಾಗಿರುವಂತೆ ಇರುವವನೂ ಆದ ಶ್ರೀರಂಗನಾಥನನ್ನು (ಆಲಿಹೀಯ) ಭೋಗ್ಯವಾಗಿ ಅನುಭವಿಸುತ್ತೇನೆ.

'ರಾಜಾಧಿರಾಜಃ ಸರ್ವೇಷಾಂ' ಎಂದು ಹೇಳಿದಂತೆ ಸಮಸ್ತ ಚೇತನಾ ಚೇತನ ಪದಾರ್ಥಗಳಿಗೂ ಪ್ರಭುವಾದ ಶ್ರೀರಂಗರಾಜ ಸ್ವಾಮಿಯು ತನ್ನ ಸಾರ್ವಭೌಮತ್ವವನ್ನು ಎಲ್ಲರಿಗೂ ತೋರಿಸುವಂತೆ ಶ್ರೀದೇವಿ ಭೂದೇವಿಯರ ಜೊತೆಗೆ ಸಿಂಹಾಸನಾಸೀನನಾಗಿದ್ದಾನೆ ಎಂದು ಇಲ್ಲಿ ಅನುಭವಿಸಿದೆ. 'ರಾಘವೋಽರ್ಹತಿ ವೈದೇಹೀಂ ತಂ ಚೇಯಮಸಿ ತೇಕ್ಷಣಾ' ಎಂದು ಹೇಳಿದಂತೆ ಪರಸ್ಪರ ಸದೃಶರಾದವರು ದಿವ್ಯದಂತಿಗಳು. ಇವರನ್ನು ಸೇವಿಸಿ ಧನ ರಾಗಬೇಕು.

'ಎನ್ ತಿರುಮಹಳ್ ಶೇರ್ ಮಾರ್ವನೇ ಎನ್ನುಂ
ಎನ್ನುಡೈ ಆವಿಯೇ ಎನ್ನುಂ
ನಿನ್ ತಿರುವಯಿತ್ತಾಲ್ ಇಡಂದು ನೀ ಕೊಂಡ
ನಿಲಮಹಳ್ ಕೇಳ್ವನೇ ಎನ್ನುಂ
ಅನ್ರು ಏಳ್ರು ತಳ್ರುವಿ ನೀ ಕೊಂಡ
ಆಯ್ ಮಹಳ್ ಅನ್ಬನೇ ಎನ್ನುಂ ॥
ತೆನ್ ತಿರುವರಂಗಂ ಕೋಯಿಲ್ ಕೊಂಡಾನೇ'

ಎಂಪು ನಮ್ಮಾಳ್ವಾರ್ರವರು ಅನುಭವಿಸಿರುವುದನ್ನು ಕಾಣಬಹುದು.

**ಆಪಾದಮೂಲಮಣಿಮೌಲಿ ಸಮುಲ್ಲಸಂತ್ಯಾ ।**
**ಸ್ವಾತಂತ್ರ್ಯ ಸೌಹೃದ–ತರಂಗಿತಯಾ ಅಂಗಭಂಗ್ಯಾ ।**
**ಸಖ್ಯಂ ಸಮಸ್ತಜನಚೇತಸಿ ಸಂದಧಾನಂ**
**ಶ್ರೀರಂಗರಾಜಂ ಅನಿಮೇಷಂ ಅನುಶ್ರಿಯಾಸ್ಮ ॥ ॥೬೭॥**

( ಆಪಾದ ಮೂಲ ಮಣಿ ಮೌಲಿ ) ಶ್ರೀಪಾದದಿಂದ ಹಿಡಿದು ಮುಡಿಯ ವರೆಗೂ ( ಸಮುಲ್ಲಸಂತ್ಯಾ ) ಬೆಳಗುತ್ತಿರುವುದಾಗಿ ( ಸ್ವಾತಂತ್ರ್ಯ ಸೌಹೃದತರಂಗಿತಯಾ ) ಸ್ವಾತಂತ್ರ್ಯವೂ ಸೌಹೃದವೂ ಮೇಲೆ ಮೇಲೆ ಅಲೆಗಳಾಗಿ ಏಳುತ್ತಿರುವಂಥ ( ಅಂಗ ಭಂಗ್ಯಾ ) ಅವಯವಗಳ ಸನ್ನಿವೇಶದಿಂದ ( ಸಮಸ್ತ ಜನ ಚೇತಸಿ ) ಸಕಲ ಜನರ ಮನಸ್ಸಿನಲ್ಲಿ ( ಸಖ್ಯಂ ) ಸ್ನೇಹವನ್ನು, ಪ್ರೇಮವನ್ನು ( ಸಂದಧಾನಂ ) ಚೆನ್ನಾಗಿ ಉಂಟುಮಾಡುವವನಾದ (ಶ್ರೀರಂಗರಾಜಂ) ಶ್ರೀರಂಗರಾಜನನ್ನು ( ಅನಿಮೇಷಂ ) ಎವೆ ಇಕ್ಕದೆ ಕಂಡು ( ಅನುಶ್ರಿಯಾಸ್ಮ ) ಆಶ್ರಯಿಸಿ ಅನುಸರಿಸೋಣ

ಭಗವಂತನ ದಿವ್ಯಮಂಗಳವಿಗ್ರಹದ ಸೌಂದರ್ಯ ಅನುಪಮವಾದುದು. ಅವನನ್ನು ಎಷ್ಟು ಸಂದರ್ಶಿಸಿದರೂ ಮನಸ್ಸು ತಣಿಯದು. ಅವನ ಒಂದೊಂದು ಅವಯವೂ ಆಕರ್ಷಕತ್ವ ಹೊಂದಿದೆ. ಆ ಅವಯವಗಳ ಸನ್ನಿವೇಶ ಇನ್ನೂ ಚೆಲುವಾಗಿದೆ. ಶ್ರೀಪಾದದಿಂದ ಹಿಡಿದು ಮುಡಿಯುವರೆಗೂ ಬೆಳಗುವ ದಿವ್ಯಾದ್ಭುತಸೌಂದರ್ಯವನ್ನಿಲ್ಲಿ ಅನುಭವಿಸಿದೆ.

**ಕ್ಷಿತಿ-ಕಮಲನಿವಾಸಾ-ಕಲ್ಪವಲ್ಲೀ-ಸಲೀಲೋ-**
**ಲ್ಲುಠನ-ದಶದಿಶೋದ್ಯತ್-ಯೌವನಾರಂಭ-ಜೃಂಭಃ ।**
**ಶ್ರಮಮುಪಹರತಾಂ ಮೇ ರಂಗಧಾಮೇತಿ ತತ್ತತ್**
**ವರಮಯಫಲನಮ್ರಃ ಪತ್ರಲಃ ಪಾರಿಜಾತಃ ॥** ॥೭೮॥

(ಕ್ಷಿತಿಕಮಲನಿವಾಸಾ) ಭೂಮಿದೇವಿಯೂ ಶ್ರೀ ದೇವಿಯೂ ಎಂಬಂತಹ ( ಕಲ್ಪವಲ್ಲೀ ) ಕಲ್ಪವೃಕ್ಷದ ಬಳ್ಳಿಗಳ ( ಸಲೀಲೋಲ್ಲುಠನ ) ವಿಲಾಸದಿಂದ ಕೂಡಿದ ಆಲಿಂಗನದಿಂದ ( ದಶದಿಶೋದ್ಯತ್ ) ಹತ್ತು ದಿಕ್ಕುಗಳಲ್ಲಿಯೂ ಪ್ರಕಾಶಿಸುತ್ತಿರುವ ( ಯೌವನಾರಂಭಜೃಂಭಃ ) ಯೌವನದ ಆರಂಭದ ವೈಲಕ್ಷಣ್ಯವನ್ನು ಹೊಂದಿರುವುದೂ (ಪತ್ರಲಃ) ಎಲ್ಲೆಗಳಿಂದ ತುಂಬಿರುವುದೂ (ತತ್ತದ್ವರಮಯ ಫಲನಮ್ರಃ) ಆಯಾ ಜನರು ಪಡೆಯುವ ವರಗಳೆಂಬುವ

ಹಣ್ಣುಗಳಿಂದ ಬಾಗಿರುವುದೂ ಆದ (ರಂಗಧಾಮಾ ಇತಿಪಾರಿಜಾತಃ) ಶ್ರೀ ರಂಗನಾಥನೆಂಬುವ ಪಾರಿಜಾತ ವೃಕ್ಷವು (ಮೇ) ನನ್ನ (ಶ್ರಮಂ) ಆಯಾಸವನ್ನು (ಅಪಹರತಾಂ) ಹೋಗಲಾಡಿಸಲಿ.

ಈ ಶ್ಲೋಕದಲ್ಲಿ ಭಗವಂತನನ್ನು ಸಕಲಾಭೀಷ್ಟಪ್ರದವಾದ ಪಾರಿಜಾತ ವೃಕ್ಷಕ್ಕೆ ಹೋಲಿಸಿದೆ. ಪಾರಿಜಾತ ವೃಕ್ಷಕ್ಕೂ ಭಗವಂತನಿಗೂ ಸಾಮ್ಯ ವಿದೆ. ಕಲ್ಪವಲ್ಲಿಗಳು ಪಾರಿಜಾತವನ್ನು ಬಳಸಿದ್ದರೆ ಶ್ರೀದೇವಿ ಭೂದೇವಿಯರು ರಂಗರಾಜನೆಂಬ ಪಾರಿಜಾತನನ್ನು ಬಳಸಿದ್ದಾರೆ. ಹತ್ತುದಿಕ್ಕುಗಳಲ್ಲಿಯೂ ಪ್ರಕಾಶಿಸುವ ಈ ರಂಗರಾಜನೆಂಬ ವೃಕ್ಷದ ತೇಜಸ್ಸು ಪಾರಿಜಾತ ವೃಕ್ಷದ ಪತ್ರಗಳಿಗೆ ಸಮನಾಗಿದೆ. ಪಾರಿಜಾತ ವೃಕ್ಷ ಫಲಗಳ ಭಾರದಿಂದ ಬಾಗಿರು ವುದಾದರೆ ಬೇಡುವ ಭಕ್ತರಿಗೆ ಅವರವರು ಬೇಡಿದ ಐಶ್ವರ್ಯ, ಕೈವಲ್ಯ, ಮೋಕ್ಷಗಳೆಂಬ ಫಲಗಳನ್ನು ನೀಡಲು ನಮ್ರವಾಗಿರುವುದು ಈ ರಂಗರಾಜನೆಂಬ ಪಾರಿಜಾತ. ಹೇಗೆ ಪಾರಿಜಾತ ವೃಕ್ಷ ಶ್ರಮವನ್ನು ಕಳೆಯುವುದೋ ಹಾಗೆಯೇ ಈ ರಂಗರಾಜ ವೃಕ್ಷ ಜನನ ಮರಣಗಳೆಂಬ ಸಂಸಾರದ ತಾಪವನ್ನೆಲ್ಲಾ ಹೋಗಲಾಡಿಸುವುದು. "ನಿವಾಸವೃಕ್ಷಃ ಸಾಧೂನಾಂ" ಎಂದೂ "ವಾಸುದೇವತರುಚ್ಛಾಯಾ ನಾತಿಶೀತಾ ನ ಘರ್ಮದಾ" ಎಂದೂ "ಎನಕ್ಕೇ ತನ್ನೈತಂದ ಕರ್ಪಕಂ" ಎಂದೂ ಅನುಭವಿಸಿರುವುದನ್ನು ಕಾಣಬಹುದು.

**ಸಂಭಾಷಮಾಣಮಿವ ಸರ್ವವಶಂವದೇನ**
**ಮಂದಸ್ಮಿತೇನ ಮಧುರೇಣ ಚ ವೀಕ್ಷಣೇನ ।**
**ದಿವ್ಯಾಸ್ತ್ರಪುಷ್ಪಿತ-ಚತುರ್ಭುಜಮತ್ಯುದಾರಂ**
**ರಂಗಾಸ್ಪದಂ ಮಮ ಶುಭಾಶ್ರಯಮಾಶ್ರಯಾಣಿ ॥ ॥೬೯॥**

(ಸರ್ವವಶಂವದೇನ) ಎಲ್ಲರನ್ನು ವಶೀಕರಿಸಿಕೊಳ್ಳಬಲ್ಲ (ಮಧುರೇಣ) ಮಧುರವಾದ (ಮಂದಸ್ಮಿತೇನ) ಮಂದಹಾಸದಿಂದಲೂ (ವೀಕ್ಷಣೇನಚ) ಕಟಾಕ್ಷಗಳಿಂದಲೂ (ಸಂಭಾಷಮಾಣಮಿವ ಸ್ಥಿತಂ) ಮಾತನಾಡುತ್ತಿರುವಂತೆ ಇರುವವನೂ (ದಿವ್ಯಾಸ್ತ್ರಪುಷ್ಪಿತ ಚತುರ್ಭುಜಂ) ದಿವ್ಯಾಯುಧಗಳಿಂದ ಹೂಬಿಟ್ಟಂತೆ ಇರುವ ನಾಲ್ಕು ಭುಜಗಳನ್ನುಳ್ಳವನೂ, (ಅತ್ಯುದಾರಂ)

ಅತ್ಯಂತ ಉದಾರಿಯಾದವನೂ (ಮಮ) ನನಗೆ (ಶುಭಾಶ್ರಯಂ) ರಕ್ಷಣೆಗೆ ಆಶ್ರಯನಾದವನೂ ಆದ (ರಂಗಾಸ್ಪದಂ) ಶ್ರೀರಂಗನಗರವನ್ನು ಆಶ್ರಯ ವನ್ನಾಗಿ ಹೊಂದಿರುವ ಭಗವಂತನನ್ನು (ಆಶ್ರಯಾಣಿ) ಆಶ್ರಯಿಸುತ್ತೇನೆ.

ಶ್ರೀರಂಗರಾಜನನ್ನು ಅನನ್ಯಭಾವದಿಂದ ಆಶ್ರಯಿಸೋಣವೆಂದು ಇಲ್ಲಿ ಅನುಭವಿಸಿದೆ. ಭಗವಂತನ ಮಂದಹಾಸ ಮಧುರವಾಗಿ ಎಲ್ಲರನ್ನೂ ವಶಪಡಿಸಿ ಕೊಳ್ಳುವುದು. ಭಗವಂತನು ತನ್ನ ಕಟಾಕ್ಷಗಳಿಂದ ತನ್ನಲ್ಲಿಗೆ ಬಂದವರನ್ನು ಪ್ರೀತಿಯಿಂದ ಮಾತಾಡಿಸುವಂತೆ ಇದ್ದಾನೆ. ಚತುರ್ಭುಜಗಳಲ್ಲಿ ವಿರಾಜಿಸುವ ದಿವ್ಯಾಸ್ತ್ರಗಳು ಅರಳಿದ ಪುಷ್ಪಗಳಂತೆ ಅಲಂಕಾರವಾಗಿ ಶೋಭಿಸಿವೆ. ಸರ್ವರಕ್ಷಕನೂ ಉದಾರನೂ ಆದ ಸ್ವಾಮಿಯನ್ನು ಸಂದರ್ಶಿಸಿ ಸೇವಿಸಿ ಧನ್ಯರಾಗಬೇಕು.

ಏತೇ ಶಂಖಗದಾಸುದರ್ಶನಭೃತಃ ಕ್ಷೇಮಂಕರಾ ಬಾಹವಃ
ಪಾದದ್ವಂದ್ವಮಿದಂ ಶರಣ್ಯಮಭಯಂ ಭದ್ರಂ ಚ ವೋ ಹೇ ಜನಾಃ ।
ಇತ್ಯೂಚುಷ್ಯಭಯಂಕರೇ ಕರತಲೇ ಸ್ಮೇರೇಣ ವಕ್ತ್ರೇಣ ತತ್
ವ್ಯಾಕುರ್ವನ್ನಿವ ನಿರ್ವಹೇನ್ಮಮ ಧುರಂ
ಶ್ರೀ ರಂಗಸರ್ವಂಸಹಃ ॥ ॥೭೦॥

(ಹೇಜನಾಃ) ಎಲೈ ಜನರುಗಳೇ, (ಶಂಖಗದಾ ಸುದರ್ಶನ ಭೃತಃ) ಶಂಖ ಗದೆ ಚಕ್ರ ಆದ ಇವುಗಳನ್ನು ಧರಿಸಿರುವ (ಏತೇ ಬಾಹವಃ) ಈ ಶ್ರೀ ಹಸ್ತಗಳು (ವಃ) ನಿಮಗೆ (ಕ್ಷೇಮಂಕರಾಃ) ಕ್ಷೇಮವನ್ನುಂಟುಮಾಡುತ್ತವೆ. (ಇದಂ ಪಾದ ದ್ವಂದ್ವಂ) ಪರಸ್ಪರ ಸದೃಶವಾದ ಈ ಶ್ರೀಪಾದಗಳೆರಡೂ (ಶರಣ್ಯಂ) ರಕ್ಷಣೆಯನ್ನೂ ( ಅಭಯಂ ) ಅಭಯವನ್ನೂ ಕರುಣಿಸುವುದಾಗಿಯೂ (ಭದ್ರಂಚ) ಮಂಗಳವನ್ನುಂಟು ಮಾಡುವುದಾಗಿಯೂ ಇವೆ (ಇತಿ) ಹೀಗೆಂದು (ಅಭಯಂಕರೇ ಕರತಲೇ ಊಚುಷಿ ಸತಿ ) ಅಭಯ ಮುದ್ರೆಯಿಂದ ಕೂಡಿದ ಕೈಯು ತಿಳಿಸುವಲ್ಲಿ (ತತ್) ಆ ವಿಷಯವನ್ನು (ಸ್ಮೇರೇಣ) ಮಂದಹಾಸ ದಿಂದ ಕೂಡಿದ (ವಕ್ತ್ರೇಣ) ಮುಖಮಂಡಲದಿಂದ (ವ್ಯಾಕುರ್ವನ್ನಿವ ಸ್ಥಿತಃ)

ನಿವರಿಸುವಂತೆ ಇರುವ (ಶ್ರೀರಂಗ ಸರ್ವಂಸಹಃ) ಶ್ರೀರಂಗನಾಥನು (ಮಮ ಧುರಂ) ನನ್ನ ರಕ್ಷಣೆಯ ಭಾರವನ್ನು (ನಿರ್ವಹೇತ್) ವಹಿಸಲಿ.

ಶ್ರೀರಂಗನಾಥನು ಸರ್ವಸಹ-ಸರ್ವಭಾರ ನಿರ್ವಾಹಕ. ಅವನ ಅಭಯ ಮುದ್ರೆಯನ್ನೂ ಮಂದಸ್ಮಿತವನ್ನೂ ಇಲ್ಲಿ ಅನುಸಂಧಾನಮಾಡಿದೆ. ಶ್ರೀರಂಗರಾಜನು ತನ್ನ ಅಭಯಹಸ್ತದಿಂದ- 'ಶ್ರೀ ಸುದರ್ಶನ, ಪಾಂಚಜನ್ಯ ಮತ್ತು ಕೌಮೋದಕಿ - ಇವುಗಳನ್ನು ಧರಿಸಿರುವ ಈ ನನ್ನ ಹಸ್ತಗಳು ನಿಮಗೆ ಕ್ಷೇಮವನ್ನುಂಟುಮಾಡುವುವು. ಈ ನನ್ನ ಪಾದಗಳೆರಡೂ ನಿಮ್ಮ ಭಯವನ್ನು ಕಳೆಯುವುವು". ಎಂದು ಸೂಚಿಸುತ್ತಾನೆ. ಈ ಅಂಶವನ್ನು ಭಗವಂತನ ಮಂದಹಾಸ ಅನುಮೋದಿಸುತ್ತದೆ 'ಅಭಯ ಹಸ್ತ ಸೂಚಿಸುದುದು ನಿಜವೇ ಆದುದು. ಆದರಲ್ಲಿ ಸಂದೇಹಬೇಡ'. ಎಂದು. ಇಂಥ ಕರುಣಾಸಾಗರ ಅವನು. ತಿಳಿವಳಿಕೆ ಇಲ್ಲದ ಸಂಸಾರಿಗಳಿಗೆ ಪರಮಕೃಪೆಯಿಂದ ಉದ್ಧಾರದ ಮಾರ್ಗವನ್ನು ಹೀಗೆ ತೋರುತ್ತಿರುವನು ಅವನು.

ಅಂಗೈಃ ಅಹಂಪ್ರಥಮಿಕಾಚರಿತಾತ್ಮದಾನ್ಯೈಃ
ಆಮೋದಮಾನ-ನವಯೌವ್ವನ-ಸಾವಲೇಪೈಃ ।
ಹೈ ಪಾರಿಜಾತಮಿವ ನೂತನತಾಯಮಾನ
ಶಾಖಾಶತಂ ಹೃದಿ ದಧೀಮಹಿ ರಂಗಧುರ್ಯಂ ॥

(ಅಹಂ ಪ್ರಥಮಿಕ-ಆಚರಿತ-ಆತ್ಮದಾನ್ಯೈಃ) ಅನುಭವವಿಷಯವಾಗುವುದಕ್ಕೆ ನಾನುಮುಂಚೆ ನಾನುಮುಂಚೆ ಎಂದುಬಂದು ನಾವು ಅನುಭವಿಸುವಂತೆ ತಮ್ಮನ್ನು ಕೊಟ್ಟುಕೊಳ್ಳುತ್ತಿರುವುವೂ (ಆಮೋದಮಾನ ನವಯೌವ್ವನ ಸಾವಲೇಪೈಃ) ಪರಿಮಳಿಸುವ ಹೊಸ ಯೌವನದಿಂದ ಗರ್ವಿತವಾಗಿರುವುವೂ ಆದ (ಅಂಗೈಃ)ಅವಯವಗಳಿಂದ (ನೂತನತಾಯಮಾನ ಶಾಖಾಶತಂ) ಹೊಸ ಹೊಸದಾಗಿ ಬೆಳೆಯುತ್ತಿರುವ ಅನೇಕ ಶಾಖೆಗಳನ್ನುಳ್ಳ (ಪಾರಿಜಾತಂ ಇವ ಸ್ಥಿತಂ) ಪಾರಿಜಾತವೃಕ್ಷದ ಹಾಗೆ ಇರುತ್ತಿರುವ (ರಂಗ ಧುರ್ಯಂ)

ಶ್ರೀ ರಂಗನಾಥನನ್ನು (ಹೃದಿ ನಮ್ಮ ಹೃದಯದಲ್ಲಿ (ದಧೀಮಹಿ) ಇಟ್ಟುಕೊಳ್ಳಬಲ್ಲೆವೇ ? (ಹೈ) ಕಷ್ಟ!

ಆ ಸ್ವಾಮಿಯನ್ನು ಪೂರ್ಣವಾಗಿ ಸಕಲಾವಯವಗಳಿಂದ ಕೂಡಿ ದಂತೆ ಅನುಭವಿಸುವುದು ಬಹಳ ಕಷ್ಟಕರವೆಂದು ಅನುಭವಿಸಿದೆ. ಭಗವಂತನನ್ನು ಇಲ್ಲಿ ಸುಂದರವಾದ ಚಿಗುರುಗಳೊಡೆಯುತ್ತಲೇ ಇರುವ ಮನೋಹರವಾದ ಪಾರಿಜಾತಕ್ಕೆ ಹೋಲಿಸಿದೆ. ಒಂದೊಂದು ಅವಯುವವೂ "ನನ್ನನ್ನು ನೋಡು ನನ್ನನ್ನು ನೋಡು", ಎಂದು ಹೇಳುತ್ತಿರು ವಂತೆ ಚೆಲುವಾಗಿದೆ. ಆ ಅವಯುವದ ಶೋಭೆಯನ್ನು ಅನುಭವಿಸತೊಡಗಿದರೆ ಅಲ್ಲಿಂದ ಮುಂದೆ ಬೇರೆ ಅವಯುವದ ಕಡೆ ಹೋಗುವುದೇ ಕಷ್ಟವಾಗುವುದು- 'ಶೋಳ್ ಕಂಡಾರ್ ತೋಳೇ ಕಂಡಾರ್' ಎಂದು ಹೇಳಿದಂತೆ. ಸಮಸ್ತಾವಯುವಗಳಿಂದ ಕೂಡಿದ ಆ ಭುವನಸುಂದರನ ಮೂರ್ತಿಯನ್ನು ಒಂದನ್ನೂ ಬಿಡದಂತೆ ಅನುಭವಿಸಿ ನಮ್ಮ ಹೃದಯದಲ್ಲಿ ಸ್ಥಾಪಿಸಿಕೊಳ್ಳು ವುದು ಸುಲಭವಲ್ಲ !

**ಆಲೋಕಾ ಹೃದಯಾಲವೋ ರಸವಶಾದೀಶಾನಮೀಷತ್ಸ್ಮಿತಂ**
**ಪ್ರಚ್ಛಾಯಾನಿ ವಚಾಂಸಿ ಪದ್ಮನಿಲಯಾ ಚೇತಶ್ಚರವ್ಯಂ ವಪು : !**
**ಚಕ್ಷುಶ್ಚ್ಯುಂತಿ ಗತಾಗತಾನಿ ತ ಇಮೇ ಶ್ರೀರಂಗಶೃಂಗಾರ ತೇ**
**ಭಾವಾ ಯೌವ್ವನಗಂಧಿನಃ ಕಿಮಪರಂ ಸಿಂಚಂತಿ ಚೇತಾಂಸಿ ನಃ॥**
**॥೭೨॥**

(ಹೇ ಶ್ರೀರಂಗಶೃಂಗಾರ) ಎಲೈ ಶೃಂಗಾರರಸವೇ ರೂಪವೆತ್ತಂತೆ ಶ್ರೀರಂಗದಲ್ಲಿ ನೆಲಸಿರುವ ಸ್ವಾಮಿಯೇ (ತೇ) ನಿನ್ನ (ಆಲೋಕಾಃ) ಕಟಾಕ್ಷ ಗಳು (ಹೃದಯಾಲವಃ) ಆಶ್ರಿತರ ಬಗೆಗೆ ಪ್ರೀತಿಯಿಂದ ಕೂಡಿದವಾಗಿವೆ. (ಈಷತ್ಸ್ಮಿತಂ) ಮಂದಹಾಸವಾದುದೋ (ರಸವಶಾತ್) ಪ್ರಣಯರಸದಿಂದ (ಈಶಾನಂ) ಎಲ್ಲವನ್ನೂ ವಶಪಡಿಸಿಕೊಳ್ಳುತ್ತದೆ. (ವಚಾಂಸಿ) ಮಾತು ಗಳಾದವೋ (ಪ್ರಚ್ಛಾಯಾನಿ) ಸಂಸಾರ ತಾಪಾತುರರಿಗೆ ನೆರಳಿನಂತಾಗಿವೆ.

(ವಪುಃ) ದಿವ್ಯಮಂಗಳವಿಗ್ರಹನಾದರೋ (ಪದ್ಮನಿಲಯಾಚೇತಶ್ಶರವ್ಯಂ) ಶ್ರೀದೇವಿಯ ಇಷ್ಟಕ್ಕೆ ಲಕ್ಷ್ಯವಾಗಿರುವುದು. (ಗತಾಗತಾನಿ) ಬೀದಿಯಲ್ಲಿ ಸಂಚಾರ ಹೊರಡುವುದು ಮತ್ತು ಹಿಂದಿರುಗುವುದು (ಚಕ್ಷುಷ್ಯಂತಿ) ಕಣ್ಣುಗಳಿಗೆ ಪ್ರಿಯವಾದವು. (ಕಿಮಪರಂ) ಮತ್ತೆ ಬೇರೆ ಏನು? (ತೇ ಇಮೇ) ಹೀಗೆ ಇರುವ ಈ (ಯೌವ್ವನಗಂಧಿನಃ ಭಾವಾಃ) ಯೌವ್ವನ ಸೂಚಕಗಳಾದ ವಿಷಯಗಳು (ನಃ) ನಮ್ಮ (ಚೇತಾಂಸಿ) ಮನಸ್ಸುಗಳನ್ನು (ಸಿಂಚಂತಿ) ತಂಪುಗೊಳಿಸುತ್ತವೆ.

ಶ್ರೀರಂಗರಾಜನ ಒಂದೊಂದು ವ್ಯಾಪಾರವೂ ನಮ್ಮ ಮನಸ್ಸನ್ನು ಪರವಶಗೊಳಿಸಿ ಆನಂದಪಡಿಸುತ್ತದೆ. ಶ್ರೀರಂಗಕ್ಕೆ ಅಲಂಕಾರರೂಪನಾದವನು ಅವನು. ಸಂಸಾರಿಗಳ ಚಿತ್ತವನ್ನು ವಶಪಡಿಸಿಕೊಳ್ಳುವುದಕ್ಕೆ ತಾನೇ ಸ್ವಾಮಿಯು ತನ್ನ ಭುವನ ಸುಂದರವಾದ ರೂಪವನ್ನು ತೋರುತ್ತಿರುವುದು? ಅವನ ಕಟಾಕ್ಷಗಳು ಸ್ನಿಗ್ಧವಾದವು. ಮಂದಸ್ಮಿತವೋ ಪ್ರೇಮಪೂರ್ಣವಾದುದು. ಮಧುರವಾದ ಮಾತುಗಳು ತಾಪವನ್ನೆಲ್ಲಾ ಕಳೆದು ಹಾಕುವುವು. ತಾವರೆಯ ಹೂ ತಾಪಕರವೆಂದು ಅದನ್ನು ಬಿಟ್ಟು ಸ್ವಾಮಿಯ ವಕ್ಷಃ ಸ್ಥಲದಲ್ಲಿ ಶ್ರೀದೇವಿ ಬಂದು ನೆಲಸಿದಳೋ ಎಂಬಂತೆ ಶ್ರೀದೇವಿಯಿಂದ ಅಲಂಕೃತವಾದ ವಕ್ಷಃ ಸ್ಥಲ ಅವನದು. ತನ್ನಲ್ಲಿಗೆ ಬರಲಾರದೆ ಇರುವವರನ್ನು ತಾನೇ ಹೋಗಿ ಕಂಡು ಅನುಗ್ರಹಿಸಲು ಸ್ವಾಮಿಯು ಸಂಚಾರ ಮಾಡುತ್ತಾನೆ. ಅವನ ಆ ದಿವ್ಯವಾದ ನಡೆ ಕಣ್ಣುಗಳಿಗೊಂದು ಹಬ್ಬವೇ ಆಗಿದೆ. ಇಂಥ ಪ್ರಭುವನ್ನು ಒಮ್ಮೆ ಸಂದರ್ಶಿಸಿದರೆ ಸಾಕು. ಮುಂದೆಂದೂ ಅವನನ್ನು ಬಿಟ್ಟಿರುವುದೇ ಅಶಕ್ಯವಾಗುವುದು.

**ಆಯುತ್ಕಿರೀಟಂ ಅಲಿಕೋಲ್ಲಸದೂರ್ಧ್ವಪುಂಡ್ರಂ**
**ಆಕರ್ಣಲೋಚನಂ ಅನಂಕುಶ ಕರ್ಣಪಾಶಂ ।**
**ಉತ್ಫುಲ್ಲ ವಕ್ಷಸಂ ಉದಾಯುಧಬಾಹುಮರ್ಹಶ್**
**ನೀವೀಂ ಚ ರಂಗಪತಿಮಬ್ಜಪದಂ ಭಜಾಮಃ ॥ ॥೭೩॥**

(ಆಯುಕ್ತಿರೀಟಂ) ನೀಳವಾದ ಕಿರೀಟವನ್ನು ಧರಿಸಿದವನೂ (ಅಲಿಕ ಉಲ್ಲಸತ್ ಊರ್ಧ್ವಪುಂಡ್ರಂ) ಲಲಾಟದಲ್ಲಿ ಬೆಳಗುತ್ತಿರುವ ಊರ್ಧ್ವ ಪುಂಡ್ರವನ್ನುಳ್ಳವನೂ (ಆಕರ್ಣಲೋಚನಂ) ಕಿವಿಗಳವರೆಗೂ ಹರಡಿದ ಕಣ್ಣುಗಳನ್ನುಳ್ಳವನೂ ( ಅನಂಕುಶಕರ್ಣಪಾಶಂ ) ಎಲ್ಲೆಯಿಲ್ಲದೆ ಇರುವ ಶ್ರೇಷ್ಠವಾದ ಕಿವಿಗಳನ್ನುಳ್ಳವನೂ (ಉತ್ಫುಲ್ಲವಕ್ಷಸಂ) ವಿಶಾಲವಾದ ವಕ್ಷಃ ಸ್ಥಲವನ್ನುಳ್ಳವನೂ (ಉದಾಯುಧಬಾಹುಂ) ದಿವ್ಯಾಯುಧಗಳನ್ನು ಮೇಲೆತ್ತಿ ಹಿಡಿದ ಕೈಗಳನ್ನುಳ್ಳವನೂ (ಅರ್ಹತ್‌ನೀವೀ) ಶ್ಲಾಘ್ಯವಾಗಿ ಮೇಲೆದ್ದಿರುವ ವಸ್ತ್ರಬಂಧವನ್ನುಳ್ಳವನೂ (ಅಬ್ಜಪದಂಜ) ತಾವರೆಯಂತಹ ಪಾದಗಳನ್ನು ಳ್ಳವನೂ ಆದ ( ರಂಗಪತಿಂ ) ಶ್ರೀರಂಗನಾಥನನ್ನು ( ಭಜಾಮಃ ) ಸೇವಿಸುತ್ತೇವೆ.

ಶ್ರೀರಂಗನಾಥನನ್ನು ಇಲ್ಲಿ ಮುಡಿಯಿಂದ ಅಡಿಯವರಗೆ ಅನುಭವಿಸಿದೆ. 'ಮುಡಿಚ್ಚೋದಿಯಾಯ್ ಉನದು ಮುಹಚ್ಚೋದಿಮಲರ್ನ್ದದುವೋ ! ಅಡಿಚ್ಚೋದಿ ನೀನಿನ್ರ ತಾಮರೈಯಾಯ್ ಅಲರ್ನ್ದದುವೋ ! ಪಡಿಚ್ಚೋದಿ ಆಡೈಯೊಡುಂ ಪಲ್‌ಹಲನಾಯ್ ನಿನ್ ಪೈಂಪೊನ್ ಕಡಿಚ್ಚೋದಿ ಕಲಂದದುವೋ ! ತಿರುಮಾಲೇ ಕಟ್ಟುರೈಯೇ !' ಎಂದು ನಮ್ಮಾಳ್ವಾರ್ರವರು ಅನುಭವಿಸಿರುವುದಕ್ಕೆ ಇದು ಸಂವಾದಿಯಾಗಿದೆ.

**ಅಬ್ಜನ್ಯಸ್ತಪದಾಬ್ಜಂ ಅಂಚಿತಕಟೀ ಸಂವಾದಿ-ಕೌಶೇಯಕಂ**
**ಕಿಂಚಿತ್ತಾಂಡವಗಂಧಿ-ಸಂಹನನಕಂ ನಿರ್ವ್ಯಾಜ-ಮಂದಸ್ಮಿತಂ ।**
**ಚೂಡಾಚುಂಬಿ-ಮುಖಾಂಬುಜಂ ನಿಜಭುಜಾವಿಶ್ರಾಂತ ದಿವ್ಯಾಯುಧಂ**
**ಶ್ರೀರಂಗೇ ಶರದಶ್ಶತಂ ತತ ಇತಃ ಪಶ್ಯೇಮ ಲಕ್ಷ್ಮೀಸಖಂ ॥ ॥೭೪॥**

(ಅಬ್ಜನ್ಯಸ್ತಪದಾಬ್ಜಂ) ಆಸನ ಪದ್ಮದಲ್ಲಿ ಇಟ್ಟುಕೊಂಡಿರುವ ಪಾದಪದ್ಮ ಗಳನ್ನುಳ್ಳವನೂ (ಅಂಚಿತಕಟೀ ಸಂವಾದಿ ಕೌಶೇಯಕಂ) ಶ್ರೇಷ್ಠವಾದ ಕಟಿ ಪ್ರದೇಶಕ್ಕೆ ಅರ್ಹವಾದ ರೇಶಿಮೆಯ ವಸ್ತ್ರವನ್ನುಳ್ಳವನೂ, (ಕಿಂಚಿತ್ ತಾಂಡವ

ಗಂಧಿ ಸಂಹನನಕಂ) ಸ್ವಲ್ಪ ನರ್ತನ ಮಾಡುತ್ತಿರುವ ಹಾಗೆ ತೋರುವ ದಿವ್ಯಾವಯುವ ಸನ್ನಿವೇಶಗಳನ್ನುಳ್ಳವನೂ (ಶರೀರವನ್ನುಳ್ಳವನೂ) (ನಿರ್ವ್ಯಾಜ ಮಂದಸ್ಮಿತಂ) ಸಹಜವಾದ ಮಂದಹಾಸವನ್ನುಳ್ಳವನೂ (ಚೂಡಾಚುಂಬಿ ಮುಖಾಂಬುಜಂ) ಕಿರೀಟದವರೆಗೆ ಹರಡಿರುವ ಮುಖಕಮಲವನ್ನುಳ್ಳವನೂ (ನಿಜಭುಜಾವಿಶ್ರಾಂತ ದಿವ್ಯಾಯುಧಂ) ತನ್ನ ಶ್ರೀಹಸ್ತಗಳಲ್ಲಿ ವಿಶ್ರಾಂತಿ ಹೊಂದುತ್ತಿರುವ ದಿವ್ಯಾಯುಧಗಳನ್ನುಳ್ಳವನೂ (ಲಕ್ಷ್ಮೀಸಖಂ) ಶ್ರೀ ವಿಶಿಷ್ಟ ನಾದವನೂ ಆದ ಶ್ರೀರಂಗನಾಥನನ್ನು ( ಶ್ರೀರಂಗೇ ) ಶ್ರೀರಂಗದಲ್ಲಿ (ಶತಂಶರದಃ) ನೂರಾರು ವರ್ಷಗಳಕಾಲ (ತತಃ ಇತಃ) ಅಲ್ಲಿಯೂ ಇಲ್ಲಿಯೂ ಎಲ್ಲೆಲ್ಲಿಯೂ (ಪಶ್ಯೇಮ) ಸಂದರ್ಶಿಸಿ ಸೇವಿಸುವಂತಹವರಾಗೋಣ.

ಶ್ರೀ ರಂಗನಾಥನ ದಿವ್ಯಾದ್ಭುತವಾದ ಸೌಂದರ್ಯವನ್ನು ಇಲ್ಲಿ ವರ್ಣಿಸಿದೆ. ತನ್ನ ಪಾದ ಪದ್ಮಗಳನ್ನು ಸ್ವಾಮಿ ತಾವರೆಯುಮೇಲೆ ಇಟ್ಟು ಕೊಂಡಿದ್ದಾನೆ. ತನ್ನ ಸೌಂದರ್ಯಕ್ಕೆ ತಕ್ಕುದಾದ ರೇಶಿಮೆಯ ವಸ್ತ್ರ ಧರಿಸಿದ್ದಾನೆ. ಮುಖದಲ್ಲಿ ಸಹಜವಾದ ಮಂದಹಾಸ ಮೂಡಿದೆ ಶ್ರೀ ಹಸ್ತಗಳಲ್ಲಿರುವ ದಿವ್ಯಾಯುಧಗಳು ವಿಶ್ರಾಂತಿಯನ್ನು ಹೊಂದುತ್ತಿವೆ. ವಕ್ಷಃಸ್ಥಲದಲ್ಲಿ ಶ್ರೀದೇವಿ ವಿರಾಜಮಾನಳಾಗಿ ಇದ್ದಾಳೆ. ಇಂಥ ಸ್ವಾಮಿಯನ್ನು ಎಂದೆಂದೂ ಎಡೆಬಿಡದೆ ಸೇವಿಸುವಂತಾಗ ಲೆಂದು ಇಲ್ಲಿ ಆಶಿಸಿದೆ.

ಅಗ್ರೇ ತಾರ್ಕ್ಷ್ಯೇಣ ಪಶ್ಚಾತ್ ಅಹಿಪತಿಶಯನೇನಾತ್ಮನಾ
ಪಾರ್ಶ್ವಯೋಶ್ಚ
ಶ್ರೀಭೂಮಿಭ್ಯಾಂ ಅತೃಪ್ತ್ಯಾ ನಯನ ಚುಲಕನ್ಯೈಃ
ಸೇವ್ಯಮಾನಾಮೃತೌಘಂ ।
ವಕ್ತ್ರೇಣಾವಿಸ್ಮಿತೇನ ಸ್ಫುರದಭಯ-ಗದಾ-ಶಂಖ
ಚಕ್ರೈರ್ಭುಜಾಗ್ರ್ಯೈಃ
ವಿಶ್ವಸ್ಮೈ ಶಿಷ್ಯಮಾಣಂ ಶರಣಮಶರಣಾಃ
ರಂಗರಾಜಂ ಭಜಾಮಃ ॥ ॥೭೫॥

(ಅಗ್ರೇ) ತನ್ನ ಮುಂದುಗಡೆ (ತಾರ್ಕ್ಷ್ಯೇಣ) ಗರುಡದೇವನಿಂದಲೂ (ಪಶ್ಚಾತ್) ತನ್ನ ಹಿಂಭಾಗದಲ್ಲಿ (ಅಹಿಪತಿಶಯನೇನ ಆತ್ಮನಾ) ಶೇಷಶಾಯಿ ಯಾಗಿರುವ ತನ್ನಿಂದಲೂ (ಪಾರ್ಶ್ವಯೋಃ) ಎರಡುಕಡೆಗಳಲ್ಲಿಯೂ (ಶ್ರೀ ಭೂಮಿಭ್ಯಾಂ ಚ) ಶ್ರೀದೇವಿ ಭೂದೇವಿಯರಿಂದಲೂ ಕೂಡ (ಅತೃಪ್ತ್ಯಾ) ಪರ್ಯಾಪ್ತವಾಗದಿರುವಂತೆ (ನಯನ ಚುಲಕನ್ಯೈಃ ಸೇವ್ಯಮಾನ-ಅಮೃತೌಘಂ) ತಮ್ಮ ಕಣ್ಣುಗಳೆಂಬ ಬೊಗಸೆಗಳಿಂದ ಹೀರಿಕೊಳ್ಳಲ್ಪಟ್ಟ ಸೌಂದರ್ಯವೆಂಬ ಅಮೃತಪ್ರವಾಹವುಳ್ಳವನೂ ಆಗಿ (ಆವಿಸ್ಮಿತೇನ ವಕ್ತ್ರೇಣ) ಮಂದಹಾಸದಿಂದ ಕೂಡಿದ ಮುಖಮಂಡಲದಿಂದಲೂ (ಸ್ಫುರದಭಯಗದಾಶಂಖ ಚಕ್ರೈಃ) ಪ್ರಕಾಶಿಸುವ ಅಭಯಮುದ್ರೆ, ಗದೆ, ಶಂಖ, ಚಕ್ರ ಇವುಗಳಿಂದ ಕೂಡಿದ (ಭುಜಾಗ್ರೈಃ) ಕೈಗಳಿಂದಲೂ ಶೋಭಿಸುತ್ತಾ (ವಿಶ್ವಸ್ಮೈ ತಿಷ್ಠಮಾನಂ) ಎಲ್ಲರಿಗೂ ತನ್ನ ಮನೋಗತವನ್ನು ತಿಳಿಯಪಡಿಸುತ್ತಾ ನಿಂತಿರುವವನಾದ (ರಂಗರಾಜಂ) ಶ್ರೀರಂಗರಾಜನನ್ನು (ನಮ್ ಪೆರುಮಾಳ್) (ಅಶರಣಾಃ ವಯಂ) ಬೇರೆ ರಕ್ಷಣೆಯಿಲ್ಲದ ನಾವು (ಶರಣಂ ಭಜಾಮಃ) ಶರಣು ಹೋಗುತ್ತೇವೆ.

ಶ್ರೀದೇವಿ ಭೂದೇವಿಯರೊಡನೆ ಕೂಡಿ ವಿರಾಜಮಾನನಾಗಿರುವ ಶ್ರೀ ರಂಗರಾಜನಲ್ಲಿ ಇಲ್ಲಿ ಶರಣಾಗತಿಮಾಡಿದೆ. ಉತ್ಸವ ಮೂರ್ತಿಯು ಆದಿಶೇಷನ ಮೇಲೆ ಶಯನಿಸಿರುವ ಮೂಲ ಮೂರ್ತಿಯ ಮುಂದೆ ಇದ್ದಾರೆ. ಇವರಿಗೂ ಮುಂದೆ ಶ್ರೀ ಗರುಡನು ಇರುವವನಾಗಿದ್ದಾನೆ. ಉಭಯ ಪಾರ್ಶ್ವಗಳಲ್ಲಿ ಶ್ರೀದೇವಿ ಭೂದೇವಿಯರು ಬೆಳಗಿದ್ದಾರೆ. ಅವರು ತಮ್ಮ ಕಣ್ಣುಗಳಿಂದ ಶ್ರೀ ರಂಗರಾಜನ ಸೌಂದರ್ಯವೆಂಬ ಅಮೃತ ಪ್ರವಾಹವನ್ನು ಹೀರಿಕೊಳ್ಳುತ್ತಾ ಇದ್ದಾರೆ. ಸ್ವಾಮಿಯ ಮುಖಮಂಡಲದಲ್ಲಿ ಮಂದಹಾಸ ಸೂಸುತ್ತಿದೆ. 'ಎಲ್ಲರನ್ನೂ ನಾನು ರಕ್ಷಿಸುವವನಾಗಿದ್ದೇನೆ. ನನ್ನಲ್ಲಿ ಬಂದು ಶರಣಾಗಿ. ನಿಮ್ಮ ದುಃಖವನ್ನೆಲ್ಲಾ ಹೋಗಲಾಡಿಸಿ ನಿಮಗೆ ನನ್ನ ನಿತ್ಯಾನುಭವವನ್ನು ಕೊಡುತ್ತೇನೆ', ಎಂದು ಸ್ವಾಮಿ ತನ್ನ ಅಭಯ ಮುದ್ರೆಯಿಂದಲೂ ಮಂದ ಹಾಸದಿಂದಲೂ ತಿಳಿಸುವಂತೆ ಇದ್ದಾನೆ. ಬೇರೆ ರಕ್ಷಣೆಯನ್ನು ಹೊಂದದ ನಾವು ಈ ಸರ್ವರಕ್ಷಕನಲ್ಲಿ ಶರಣಾಗತಿ ಮಾಡಿ ನಮ್ಮನ್ನು ಕಾಪಾಡಿ ಕೊಳ್ಳಬಹುದು.

ಆರ್ತಾಪಾಶ್ರಯಂ ಅರ್ಥಿಕಲ್ಪಕಂ ಅಸಹ್ಯಾಗಸ್ಕರಕ್ಷ್ಮಾತಲಂ
ಸದ್ಯಸ್ಸಂಶ್ರಿತಕಾಮಧೇನುಂ ಅಭಿಯುತ್ಸರ್ವಸ್ವಮಸ್ಮದ್ಧನಂ ।
ಶ್ರೀರಂಗೇಶ್ವರಮಾಶ್ರಯೇಮ ಕಮಲಾಚಕ್ಷುರ್ಮಹೀಜೀವಿತಂ
ಶ್ರೀರಂಗೇ ಚ ಸುಖಾಕರೋತು ಸುಚಿರಂ ದಾಸ್ಯಂ ಚ
ಧತ್ತಾಂ ಮಯಿ ॥ ॥೭೩॥

(ಆರ್ತಾಪಾಶ್ರಯಂ) ಆರ್ತರಿಗೆ ರಕ್ಷಣೆಯನ್ನು ಕೊಡುವ ಆಶ್ರಯನೂ, (ಅರ್ಥಿಕಲ್ಪಕಂ) ಇಷ್ಟಾರ್ಥಗಳನ್ನು ಬೇಡುವವರಿಗೆ ಕಲ್ಪವೃಕ್ಷನೂ, (ಅಸಹ್ಯಾಗಸ್ಕರಕ್ಷ್ಮಾತಲಂ ) ಅಸಹ್ಯಾಪಚಾರವನ್ನು ಮಾಡಿದವರ ಬಗೆಗೆ ಸಹನೆ ಉಳ್ಳವನೂ, ( ಸದ್ಯಃ ಸಂಶ್ರಿತಕಾಮಧೇನುಂ ) ಅಲ್ಲಿ ಬಂದುಸೇರಿದವರಿಗೆ ಆಗಲೇ ಇಷ್ಟಾರ್ಥಗಳನ್ನು ಕಾಮಧೇನುವಿನಂತೆ ಕೊಡುವವನೂ, (ಅಭಿಯುತ್ಸರ್ವಸ್ವಂ) (ಆಳ್ವಾರರುಗಳಂತಹ) ಆಶ್ರಿತರಿಗೆ ಸರ್ವಸ್ವವೂ ಆದವನೂ ( ಅಸ್ಮದ್ಧನಂ ) ನಮ್ಮ ಪರಮಧನನೂ (ಕಮಲಾ ಚಕ್ಷುಃ) ಶ್ರೀದೇವಿಗೆ ಕಣ್ಣಾದವನೂ, ( ಮಹೀ ಜೀವಿತಂ ) ಭೂದೇವಿಗೆ ಪ್ರಾಣನಾಗಿಯೂ ಇರುವವನೂ ಆದ (ಶ್ರೀ ರಂಗೇಶ್ವರಂ) ಶ್ರೀರಂಗನಾಥನನ್ನು (ಆಶ್ರಯೇಮ) ಆಶ್ರಯಿಸೋಣ. (ಸಃ) ಆ ದೇವನು (ಸುಚಿರಂ) ಅನೇಕ ಕಾಲ (ಶ್ರೀರಂಗೇ) ಶ್ರೀರಂಗದಲ್ಲಿ (ಸುಖಾಕರೋತು) ನನ್ನನ್ನು ಸುಖಪಡಿಸಲಿ, (ಮಯಿ) ನನ್ನಲ್ಲಿ (ದಾಸ್ಯಂಚ) ದಾಸ ವೃತ್ತಿಯನ್ನೂ (ಧತ್ತಾಂ) ಕರುಣಿಸಲಿ.

ಭಗವಂತನು ಹೇಗೆ ನಮಗೆ ಉಪಾಯನಾಗಿದ್ದಾನೆಯೋ ಹಾಗೆ ಅವನೇ ನಮಗ ಪ್ರಾಪ್ಯನೂ ಆಗಿದ್ದಾನೆ. ಆ ಭಗವಂತನನ್ನು ಸೇರಿ ಅವನ ದಿವ್ಯಾನುಭವದ ಹಾಗೂ ನಿತ್ಯಕೈಂಕರ್ಯದ ಭಾಗ್ಯವನ್ನು ಪಡೆಯುವುದೇ ನಮ ಪರಮಪುರುಷಾರ್ಥ. ಸರ್ವರಕ್ಷಕನೂ ಸರ್ವಾಭೀಷ್ಟಫಲಪ್ರದನೂ ಆದವನು ಅವನು. ತನ್ನ ಭಕ್ತರು ಕೋರಿದ ಫಲಗಳನ್ನು ಅನುಗ್ರಹಿಸುವ

ಪರನೋದಾರನವನು. ಅವನನ್ನು ಆಶ್ರಯಿಸಿದವರು ಆಗಲೇ ತಮ್ಮ ಇಷ್ಟಾರ್ಥ ಗಳನ್ನು ಅವನಿಂದ ಪಡೆಯುವರು. ಅಂಥ ಶ್ರೀ ರಂಗನಾಥನನ್ನು ಆಶ್ರಯಿಸೋಣ. 'ಶ್ರೀ ರಂಗೇ ಸುಖಂ ಆಸ್ವ' ಎಂದು ಅವನು ಅನುಗ್ರಹಿಸಿದಂತೆ ಆ ದಿವ್ಯ ಕ್ಷೇತ್ರದಲ್ಲಿ ಇದ್ದುಕೊಂಡು ಪರಮಪದದ ಅನುಭವವನ್ನು ಪಡೆಯುವಂತೆ ಆಗಲಿ. ಆ ಸ್ವಾಮಿ ತನ್ನ ನಿತ್ಯಕೈಂಕರ್ಯವನ್ನು ನಮಗೆ ಕರುಣಿಸಿ ಸಲಹಲಿ ಎಂದು ಇಲ್ಲಿ ಬೇಡಿದೆ. 'ಕಮಲಕ್ಕಣ್ ಕನಿವಾಯ್ ಕಾಳಮೇಗತ್ತೈ ಅನ್ರಿನುತ್ತೊನ್ರು ಇಲಂಗದಿಯೇ', 'ಕೇಟ್ಟುಂ ಉಣರ್‌ನ್ದವರ್ ಕೇಶವರ್ಕ್ಕು ಆಳನ್ರಿಯಾವರೋ", 'ಎಂಗಳ್ ಶೆಲ್‌ಶಾರ್‌ವು ಯಾಮುಡೈ ಅಮುದಂ" ಎಂದೆಂದು ನಮ್ಮಾಳ್ವಾರ್‌ರವರೂ, 'ಶಕ್ಕರತ್ತಾನ್ ತಾಳ್‌ಮುದಲೇ ನಂಗಳ್ಕ್ಕು ಶಾರ್ವು' ಎಂದು ಪೇಯಾಳ್ವಾರ್‌ರವರೂ ಅನುಸಂಧಾನ ಮಾಡಿರುವುದನ್ನು ಕಾಣಬಹುದು.

ಸ್ವಫಣವಿತಾನ-ದೀಪ್ರ-ಮಣಿಮಾಲಿ-ಸುದಾಮರುಚಿ-
ಮ್ರದಿಮ-ಸುಗಂಧಿ-ಭೋಗ-ಸುಖಶಾಯಿತ-ರಂಗಧನಂ ।
ಮದಭರ-ಮಂಥರೋಚ್ಛ್ವಸಿತನಿಶ್ವಸಿತೋತ್ತರಲಂ
ಫಣಿಪತಿ-ಡೋಲಿಕಾತಲಿಮಂ ಆಶ್ವಸಿಮಃ ಪ್ರಣತಾಃ ॥ ॥೭೭॥

(ಸ್ವಫಣ) ತನ್ನ ಹೆಡೆ ಎಂಬ (ವಿತಾನ) ಮೇಲ್ಕಟ್ಟಿನಲ್ಲಿ (ದೀಪ್ರ) ಪ್ರಕಾಶಿಸುವ (ಮಣಿಮಾಲಿ) ರತ್ನಗಳ ಸಾಲನ್ನುಳ್ಳದಾಗಿ (ಸುಧಾಮ] ಒಳ್ಳೆಯ ಹೂಗಳ ಮಾಲೆಯನ್ನು ಹೋಲುತ್ತಾ (ರುಚಿ-ಮ್ರದಿಮ-ಸುಗಂಧಿ) ಸೌಂದರ್ಯ, ಸೌಕುಮಾರ್ಯ ಸೌಗಂಧ್ಯ ಇವುಗಳನ್ನು ಹೊಂದಿರುವ (ಭೋಗ) ತನ್ನ ಶರೀರದಲ್ಲಿ (ಸುಖಶಾಯಿತ) ಸುಖವಾಗಿ ಯೋಗ ನಿದ್ರೆ ಮಾಡುತ್ತಿರುವ (ರಂಗಧನಂ) ಶ್ರೀರಂಗನಾಥನನ್ನು ಹೊಂದಿರುವವನೂ (ಮದಭರ) ಭಗವಂತನನ್ನು ಎಡೆಬಿಡದೆ ಹೊಂದಿರುವುದರಿಂದ ಮದವನ್ನು ಹೊಂದಿದವನಾಗಿ (ಮಂಥರ) ಮಂದಮಂದವಾಗಿ ಬಿಡುವ (ಉಚ್ಛ್ವಸಿತ ನಿಶ್ವಸಿತ) ಮೇಲುಸಿರು ಕೆಳಗಿನ ಉಸಿರುಗಳಿಂದ (ಉತ್ತರಲಂ) ಅಲುಗಾಡುತ್ತಿರುವವನೂ ಆದ (ಫಣಿಪತಿಡೋಲಿಕಾತಲಿಮಂ) ಆದಿಶೇಷನೆಂಬುವ

ಉಯ್ಯಾಲೆಯ ಹಾಸುಗೆಯನ್ನು (ಪ್ರಣತಾಃ) ನಮಸ್ಕರಿಸುವವರಾಗಿ (ಆಶ್ವಸಿಮಃ) ಸಮಾಧಾನವನ್ನು ಹೊಂದುತ್ತೇವೆ.

ಶ್ರೀರಂಗನಾಥನಿಗೆ ಹಾಸುಗೆಯಾದ ಶ್ರೀ ಆದಿಶೇಷನನ್ನು ಇಲ್ಲಿ ಸ್ತುತಿಸಿದ್ದಾರೆ. ಆದಿಶೇಷನ ಹೆಡೆಗಳೇ ಮೇಲ್ಕಟ್ಟುಗಳು. ಅಲ್ಲಿ ವಿರಾಜಿಸುವ ಮಣಿಗಳ ಶ್ರೇಣಿಗಳು ಅಲಂಕಾರವಾದ ಪುಷ್ಪಮಾಲೆಗಳಂತೆ ಶೋಭಿಸಿವೆ. ಸೌಕುಮಾರ್ಯ ಹೊಂದಿರುವ ಶ್ರೀರಂಗನಾಥನಿಗೆ ತಕ್ಕ ಶಯನವಾಗಿದ್ದಾನೆ ಆದಿಶೇಷ – ಸೌಂದರ್ಯ ಸೌಕುಮಾರ್ಯ ಸೌಗಂಧ್ಯಗಳನ್ನು ಹೊಂದಿ ಆದಿಶೇಷನ ಮೇಲೆ ಸ್ವಾಮಿ ಯೋಗನಿದ್ರೆಯಲ್ಲಿ ಪವಡಿಸಿದ್ದಾನೆ. ಭಗವಂತನ ನಿತ್ಯಸಂಶ್ಲೇಷದ ಕಾರಣ ಆನಂದನಿರ್ಭರನಾಗಿ ಅವನು ತನ್ನನ್ನೇ ಮರೆತಿದ್ದಾನೆ. ತನ್ನ ಉಚ್ಛ್ವಾಸ ನಿಃಶ್ವಾಸಗಳಿಂದ ಅವನ ಮೈ ಅಲುಗಾಡುತ್ತಿರುವುದು ಉಯ್ಯಾಲೆಯನ್ನು ಹೋಲುತ್ತಿದೆ. ಇಂಥ ದಿವ್ಯವಾದ ಶಯನಕ್ಕೆ ಇಲ್ಲಿ ನಮಸ್ಕಾರವನ್ನರ್ಪಿಸಿದೆ. 'ಆಡು ಅರವು ಅಮಳಿಯಿಲ್ ಅರಿತುಯಿಲ್ ಅಮರ್'ನ್ದ ಪರಮ' ಎಂದು ತಿರುಮಂಗೈಯಾಳ್ವಾರ್ರವರು ತಿರುವೆಳುಕೂತ್ತಿರುಕ್ಕೈಯಲ್ಲಿ ಹೇಳಿರುವುದನ್ನು ಇಲ್ಲಿ ಅನುಸಂಧಾನ ಮಾಡಬೇಕು.

**ವಟದಲ–ದೇವಕೀಜಠರ–ವೇದಶಿರಃ–ಕಮಲಾ**
**ಸ್ತನ–ಶಠಕೋಪವಾಗ್ವಪುಷಿ ರಂಗಗೃಹೇ ಶಯಿತಂ ।**
**ವರದಮುದಾರ ದೀರ್ಘಭುಜಲೋಚನ–ಸಂಹನನಂ**
**ಪುರುಷಮುಪಾಸಿಷೀಯ ಪರಮಂ ಪ್ರಣತಾರ್ತಿಹರಂ॥ ॥೭೮॥**

(ವಟದಲ) ಆಲದೆಲೆಯೇನು (ದೇವಕೀ ಜಠರ) ದೇವಕೀದೇವಿಯ ಉದರವೇನು, (ವೇದಶಿರಃ) ವೇದಾಂತಗಳೇನು, (ಕಮಲಾಸ್ತನ) ಶ್ರೀದೇವಿಯ ಸ್ತನಮಂಡಲವೇನು, (ಶಠಕೋಪವಾಕ್) ನಮ್ಮಾಳ್ವಾರ್ರವರ ದಿವ್ಯಸೂಕ್ತಿಗಳೇನು, (ವಪುಷಿ) ಇವುಗಳಂತೆ ಆಕೃತಿಗೊಂಡಿರುವ (ರಂಗಗೃಹೇ) ಶ್ರೀರಂಗ ವಿಮಾನದಲ್ಲಿ (ಶಯಿತಂ) ಶಯನಿಸಿರುವವನೂ,

(ವರದಂ) ವರಗಳನ್ನು ಕೊಡುವವನೂ (ಉದಾರ ದೀರ್ಘ ಭುಜಲೋಚನ ಸಂಹನನಂ) ಉದಾರವಾದ ನೀಳವಾದ ಭುಜಗಳನ್ನೂ ನಿಡಿದಾದ ನೇತ್ರಗಳನ್ನೂ ಉಳ್ಳ ದಿವ್ಯ ಮಂಗಳವಿಗ್ರಹವನ್ನುಳ್ಳವನೂ (ಪ್ರಣತಾರ್ತಿಹರಂ) ಶರಣಾದವರ ಆರ್ತಿಯನ್ನು ಹೋಗಲಾಡಿಸುವವನೂ, (ಪರಮಂ ಪುರುಷಂ) ಆದ ಪರಮಪುರುಷನನ್ನು (ಉಪಾಸಿಷೀಯ) ಉಪಾಸನೆ ಮಾಡುತ್ತೇನೆ. ಚಿಂತಿಸುತ್ತೇನೆ.

ಆದಿಶೇಷನ ಮೇಲೆ ಪವಡಿಸಿರುವ ಶ್ರೀರಂಗನಾಥನನ್ನು ಈ ಶ್ಲೋಕದಿಂದ ಆರಂಭಿಸಿ ಸ್ತೋತ್ರ ಮಾಡಿದೆ. ಶ್ರೀರಂಗ ವಿಮಾನವು ಭಗವಂತನು ನೆಲೆಸಿರುವ ದಿವ್ಯವಾದ ಆಸ್ಥಾನವಾಗಿದೆ. ಆಲದೆಲೆ, ದೇವಕೀದೇವಿಯ ಜಠರ, ಉಪನಿಷತ್ತುಗಳು, ಶ್ರೀದೇವಿಯ ಸ್ತನಮಂಡಲ, ಶಠಕೋಪರ ದಿವ್ಯ ಸೂಕ್ತಿಗಳು ಇವುಗಳು ಹೇಗೆ ಅವನಿಗೆ ಆಶ್ರಯವಾದವೋ ಹಾಗೆ ಶ್ರೀರಂಗ ವಿಮಾನವೂ ಅವನಿಗೆ ಆಶ್ರಯವಾಗಿದೆ ಪೇಯಾಳ್ವಾರ್ರವರು 'ಮನತ್ತುಳ್ಳಾನ್ ಮಾಕಡಲ್ ನೀರ್ ಉಳ್ಳಾನ್, ಮಲರಾಳ್ ತನತ್ತುಳ್ಳಾನ್ ತಣ್ ತುೞಾಯ್ ಮಾರ್ಬನ್' ಎಂದು ಹೇಳಿರುವುದಕ್ಕೂ ಪೂದತ್ತಾಳ್ವಾರ್ರವರು, 'ಮನತ್ತುಳ್ಳಾನ್, ವೇಂಗಡತ್ತಾನ್, ಮಾಕಡಲಾನ್, ಮತ್ತುಂ ನಿನೈಪ್ಪರಿಯ ನೀಳ್ ಅರಂಗತ್ತುಳ್ಳಾನ್' ಎಂದು ಹೇಳಿರುವುದಕ್ಕೂ ಈ ಶ್ಲೋಕ ಸಂವಾದಿಯಾಗಿದೆ. ಭಗವಂತನ ದಿವ್ಯಮಂಗಳ ವಿಗ್ರಹದ ಪರಮ ಸೌಂದರ್ಯವನ್ನು 'ಉದಾರ ದೀರ್ಘಭುಜಲೋಚನ ಸಂಹನನಂ' ಎಂದು ವರ್ಣಿಸಿದೆ. ಶರಣಾದವರ ಆರ್ತಿಯನ್ನೆಲ್ಲಾ ಕಳೆಯುವ ಪರಮ ಕರುಣಾಕರನನ್ನು ಇಲ್ಲಿ ಧ್ಯಾನಮಾಡಿದೆ.

**ಉದಧಿ–ಪರಮವ್ಯೋಮ್ನೋ ವಿಸ್ಮೃತ್ಯ ಪದ್ಮವನಾಲಯಾ**
**ವಿನಿಮಯಮಯೀಂ ನಿದ್ರಾಂ ಶ್ರೀರಂಗನಾಮನಿ ಧಾಮನಿ ।**
**ಫಣಿ–ಪರಿಬೃಢ–ಸ್ಫಾರ–ಪ್ರಶ್ವಾಸನಿಶ್ವಸಿತಕ್ರಮ**
**ಸ್ಖಲಿತನಯನಂ ತನ್ವನ್ ಮನ್ವೀತ ನಃ ಪರಮಃ ಪುಮಾನ್ ॥೬॥**

(ಉದಧಿಪರಮವ್ಯೋಮ್ನೋಃ) ಕ್ಷೀರಸಾಗರವನ್ನೂ ಶ್ರೀವೈಕುಂಠವನ್ನೂ

(ವಿಸ್ಮೃತ್ಯ) ಮರೆತು ಬಿಟ್ಟು (ಪದ್ಮವನಾಲಯಾ ವಿನಿಮಯಮಯೀಂ) ಶ್ರೀದೇವಿಯೊಡನೆ ಪರ್ಯಾಯವಾಗಿರುವ ಬದಲಾಯಿಸಿಕೊಳ್ಳುವ (ನಿದ್ರಾಂ) ಯೋಗ ನಿದ್ರೆಯನ್ನು (ಶ್ರೀರಂಗನಾಮನಿ ಧಾಮನಿ) ಶ್ರೀರಂಗವೆಂಬ ಹೆಸರುಳ್ಳ ದಿವ್ಯಕ್ಷೇತ್ರದಲ್ಲಿ (ಫಣಿ ಪರಿಬೃಢ) ಆದಿಶೇಷನ (ಸ್ಫಾರ) ಅಧಿಕವಾದ (ಪ್ರಶ್ವಾಸ ನಿಶ್ವಸಿತ ಕ್ರಮ) ಉಚ್ಛ್ವಾಸ ನಿಃಶ್ವಾಸಗಳ ಕ್ರಮದಿಂದ (ಸ್ಖಲಿತ ನಯನಂ) ಕಣ್ಣುಗಳು ಹೇಗೆ ಚಲಿಸುವುವೋ ಆ ರೀತಿ (ತನ್ವನ್) ಮಾಡಿ ಕೊಂಡಿರುವ (ಪರಮಃ ಪುಮಾನ್) ಪರಮಪುರುಷನು (ನಃ) ನಮ್ಮನ್ನು (ಮನ್ವೀತ) ಅನುಗ್ರಹಿಸಬೇಕು.

ರಂಗನಾಥನು ಕೆಲವು ಹೊತ್ತು ಶ್ರೀದೇವಿಯೊಡನೆಯೂ ಸ್ವಲ್ಪ ಹೊತ್ತು ನಿದ್ರಾದೇವಿಯೊಡನೆಯೂ ವಿಹರಿಸುತ್ತಾನಂತೆ. 'ನಾವು ಅವನನ್ನು ಮನನ ಮಾಡದಿದ್ದರೂ ಅವನು ನಮ್ಮನ್ನು ಮನನ ಮಾಡುವಂತಾಗಲಿ. ನಮ್ಮನ್ನು ಅವನು ನೆನೆಸಿಕೊಂಡು ನಮಗೆ ಮಂಗಳವುಂಟುಮಾಡಲಿ' ಎಂದು ಬೇಡಿದೆ. ಶ್ರೀವೈಕುಂಠವನ್ನೂ ಕ್ಷೀರಸಾಗರವನ್ನೂ ಮರೆತು ಬಿಟ್ಟು ಅವನು ಬಂದು ಇಲ್ಲಿ ಶ್ರೀರಂಗದಲ್ಲಿ ನೆಲಸಿದ್ದಾನೆ ತನ್ನನ್ನು ಎಲ್ಲರೂ ಸೇವಿಸಲಿ ಎಂಬ ಆಶಯದಿಂದ

'ಪನಿಕ್ಕಡಲಿಲ್ಪಳ್ಳಿಕೋಳ್ಳೈಪ್ಪ[illegible]ವಿಟ್ಟು ಓಡಿವಂದು ಎನ್
ಮನಕ್ಕಡಲಿಲ್ ವಾಳ್ವಲ್ಲ ಮಾಯಮಣಾಳ ನಂಬೀ'

ಎಂದು ಪೆರಿಯಾಳ್ವಾರ್ ಅವರು ಅನುಭವಿಸಿರುವುದನ್ನು ಕಾಣಬಹುದು.

**ಜಲಧಿಮಿವ ನಿಪೀತಂ ನೀರದೇನಾದ್ರಿಮಬ್ಧೌ**
**ನಿಹಿತಮಿವ ಶಯಾನಂ ಕುಂಜರಂ ವಾದ್ರಿಕುಂಜೇ ।**
**ಕಮಲಪಟಕರಾಕ್ಷಂ ಮೇಚಕಂ ಧಾಮ್ನಿ ನೀಲೇ**
**ಫಣಿನಮಧಿಶಯಾನಂ ಪೂರುಷಂ ವಂದಿಷೀಯ ॥ ॥೭೦॥**

(ನೀಲೇ) ನೀಲವಾಗಿರುವ (ಧಾಮ್ನಿ) ಶ್ರೀರಂಗಮಂದಿರದಲ್ಲಿ (ಫಣಿನಂ

ಅಧಿಶಯಾನಂ) ಆದಿಶೇಷನ ಮೇಲೆ ಶಯನಿಸಿರುವವನೂ (ಮೇಚಕಂ) ಕಪ್ಪು ಬಣ್ಣದ ದಿವ್ಯ ವಿಗ್ರಹವುಳ್ಳವನೂ (ಕಮಲಪದಕರಾಕ್ಷಂ) ತಾವರೆಯಂತಹ ಪಾದಗಳು, ಕೈಗಳು ಮತ್ತು ಕಣ್ಣುಗಳನ್ನುಳ್ಳವನೂ (ನೀರದೇನ ನಿಪೀತಂ ಜಲಧಿಂ ಇವ ಸ್ಥಿತಂ) ಮೇಘದಿಂದ ಹೀರಲ್ಪಟ್ಟ ಕಡಲಿನಂತೆ ಇರುವವನೂ (ಅಬ್ಧೌ ನಿಹಿತಂ ಅದ್ರಿಂ ಇವ ಸ್ಥಿತಂ) ಸಮುದ್ರದಲ್ಲಿ ಇಡಲ್ಪಟ್ಟ ಬೆಟ್ಟದಂತಿರುವವನೂ (ಅದ್ರಿಕುಂಜೇ) ಬೆಟ್ಟದ ಪೊದರಿನಲ್ಲಿ (ಶಯಾನಂ) ಶಯನಿಸಿಕೊಂಡಿರುವ(ಕುಂಜರಂ ವಾ) ಆನೆಯೋ ಎಂಬಂತಿರುವವನೂ ಆದ (ಪೂರುಷಂ) ಪರಮ ಪುರುಷನನ್ನು (ವಂದಿಷೀಯ) ನಮಸ್ಕರಿಸುತ್ತೇನೆ.

ಆದಿಶೇಷನ ಮೇಲೆ ಶಯನಿಸಿರುವ ಶ್ರೀರಂಗನಾಥನ ದಿವ್ಯಾದ್ಭುತ ಸೌಂದರ್ಯವನ್ನು ಇಲ್ಲಿ ವರ್ಣಿಸಿದ್ದಾರೆ. ಭಗವಂತನ ಪಾದಗಳು, ಕೈಗಳು ಮತ್ತು ಕಣ್ಣುಗಳು ಇವೆಲ್ಲವೂ ಕಮಲ ಸದೃಶವಾಗಿವೆ. ಇವುಗಳಿಗೆ ಬೇರೆ ಉಪಮಾನವನ್ನು ಕೊಡಲಾಗುವುದಿಲ್ಲ. ಈ ಉಪಮಾನವೂ ಅವನ ಸೌಂದರ್ಯಕ್ಕೇ ಕುಂದೇ ಆಗುವುದು – 'ಕಟ್ಟುರೈಕ್ಕಿಲ್ ತಾಮರೈ ನಿನ್ ಕಣ್ ಪಾದಂ ಕೈ ಒವ್ವಾ' ಎಂದು ನಮ್ಮಾಳ್ವಾರ್‌ರವರು ಹೇಳಿದ್ದಾರೆ. 'ಪಚ್ಚೈಮಾಮಲೈಪೋಲ್ ಮೇನಿ ಪವಳವಾಯ್ ಕಮಲಚ್ಚೆಂಗಣ್' ಎಂದು ತೊಂಡರಡಿಪ್ಪೊಡಿಯಾಳ್ವಾರ್‌ರವರೂ 'ಕಾರಾರ್ ಕರುಮುಹಿಲ್ ಪೋಲೆನ್ನಮ್ಮಾನ್' ಎಂದು ನಮ್ಮಾಳ್ವಾರ್‌ರವರೂ ಅನುಭವಿಸಿದ್ದಾರೆ. ಇಲ್ಲಿ ಶ್ರೀರಂಗನಾಥನಿಗೆ ಮೂರು ಉಪಮಾನಗಳನ್ನು ಹೇಳಿದ್ದಾರೆ. ಮೇಘದಿಂದ ಹೀರಲ್ಪಟ್ಟ ಕಡಲಿನಂತೆ, ಸಮುದ್ರದಲ್ಲಿಡಲ್ಪಟ್ಟ ಬೆಟ್ಟದಂತೆ, ಬೆಟ್ಟದ ಮೇಲೆ ಶಯನಿಸಿರುವ ಆನೆಯಂತೆ ಸ್ವಾಮಿ ಆದಿಶೇಷನ ಮೇಲೆ ಶಯನಿಸಿದ್ದಾನೆ. ಇಂಥ ಪರಮ ಪುರುಷನಿಗೆ ಇಲ್ಲಿ ವಂದನೆಗಳನ್ನರ್ಪಿಸಿದೆ.

**ಶ್ರೀರಂಗೇಶಯ ಇಹ ಶರ್ಮ ನಿರ್ಮಿಮೀತಾಂ**
**ಆತಾಮ್ರಾಧರಪಾದಪಾಣಿವಿದ್ರುಮೋ ನಃ ।**
**ಕಾವೇರೀಲಹರೀಕರೋಪಲಾಲ್ಯಮಾನಃ**
**ಗಂಭೀರಾದ್ಭುತ ಇವ ತರ್ಣಕೋಽರ್ಣವಸ್ಯ ॥** ॥೮೧॥

(ಆತಾಮ್ರ) ಚೆನ್ನಾಗಿ ಕೆಂಪಾಗಿರುವ (ಅಧರ) ಅಧರವೇನು (ಪದ) ಪಾದವೇನು (ಪಾಣಿ) ಕೈಗಳೇನು ಇವುಗಳೇ ಆದ (ವಿದ್ರುಮಃ) ಹವಳಗಳನ್ನುಳ್ಳದೂ (ಕಾವೇರೀ) ಕಾವೇರೀ ನದಿಯ (ಲಹರೀಕರ) ಅಲೆಗಳೆಂಬ ಕೈಗಳಿಂದ (ಉಪಲಾಲ್ಯಮಾನಃ) ಲಾಲನೆಮಾಡಲ್ಪಡುವುದೂ ಆದುದಾಗಿ (ಗಂಭೀರಾದ್ಭುತ) ಗಂಭೀರವಾಗಿ ಆಶ್ಚರ್ಯಕರವಾಗಿ (ಅರ್ಣವಸ್ಯತರ್ಣಕಃ ಇವ) ಸಮುದ್ರದ ಮರಿಯಂತೆ ಇರುವ (ಶ್ರೀರಂಗೇಶಯಃ) ಶ್ರೀರಂಗನಾಥನು (ನಃ) ನಮಗೆ (ಇಹ) ಇಲ್ಲಿ (ಶರ್ಮ) ಸೌಖ್ಯವನ್ನು (ನಿರ್ಮಿಮೀತಾಂ) ಉಂಟುಮಾಡಲಿ.

ಶ್ರೀರಂಗನಾಥನನ್ನು ಇಲ್ಲಿ ಸಮುದ್ರದ ಮರಿ ಎಂದು ವರ್ಣಿಸಿದ್ದಾರೆ. ಶ್ರೀರಂಗನಾಥನ ಅಧರ, ಪಾದ ಮತ್ತು ಕೈಗಳು ಕೆಂಪಾಗಿ ಹವಳದಂತಿವೆ. ಕಾವೇರೀ ನದಿ ಈ ಮಗುವನ್ನು ತನ್ನ ಅಲೆಗಳೆಂಬ ಕೈಗಳಿಂದ ಲಾಲನೆ ಮಾಡುತ್ತಿರುತ್ತಾಳೆ. ಇಂಥ ಶ್ರೀರಂಗನಾಥ ನಮಗೆ ಸುಖವನ್ನುಂಟು ಮಾಡಲೆಂದು ಇಲ್ಲಿ ಬೇಡಿದೆ.

'ತಿರು ಅರಂಗಂ ಪೆರುನಹರುಳ್ ತೆಳ್‌ನೀರ್ ಪೊನ್ನಿ ತಿರೈಕ್ಕೈಯಾಲ್

ಆಡಿವರುಡ ಪಳ್ಳಿಕೊಳ್ಳುಂ ಕರುಮಣಿಯೈ ಕೋಮಳತ್ತೈ'
ಎಂದು ಕುಲಶೇಖರಾಳ್ವಾರ್ರವರು ಸ್ತುತಿಸಿರುವುದನು ಕಾಣಬಹುದು.

**ಸಿಂಚೇದಿವಂ ಚ ಜನಂ ಇಂದಿರಯಾ ತಟಿತ್ವಾನ್**
**ಭೂಷಾಮಣಿದ್ಯುತಿಭಿಃ ಇಂದ್ರಧನುರ್ದಧಾನಃ**
**ಶ್ರೀರಂಗಧಾಮನಿ ದಯಾರಸನಿರ್ಭರತ್ವಾತ್**
**ಅದ್ರೌ ಶಯಾಲುರಿವ ಶೀತಲಕಾಲಮೇಘಃ ॥** ॥೭೨॥

(ಇಂದಿರಯಾ ತಟಿತ್ವಾನ್) ಶ್ರೀದೇವಿ ಎಂಬ ಮಿಂಚಿನಿಂದೊಡಗೂಡಿದವನೂ (ಭೂಷಾಮಣಿದ್ಯುತಿಭಿಃ) ಆಭರಣಗಳಲ್ಲಿರುವ ರತ್ನಗಳಿಂದ ಕೆದರಲ್ಪಟ್ಟ ಕಿರಣಗಳಿಂದ ಆದ (ಇಂದ್ರಧನುಃ) ಕಾಮನ ಬಿಲ್ಲನ್ನು (ದಧಾನಃ)

ವಹಿಸಿಕೊಂಡಿರುವವನೂ (ದಯಾರಸ ನಿರ್ಝರತ್ವಾತ್) ಕೃಪೆ ಎನ್ನುವ ಜಲವನ್ನು ಪೂರ್ಣವಾಗಿ ತುಂಬಿಕೊಂಡಿರುವವನೂ ಆಗಿ (ಶ್ರೀರಂಗಧಾಮನಿ) ಶ್ರೀರಂಗಕ್ಷೇತ್ರದಲ್ಲಿ (ಅದ್ರೌ) ಬೆಟ್ಟದ ಮೇಲೆ (ಶಯಾಲುಃ) ಮಲಗಿ ಕೊಂಡಿರುವ (ಶೀತಲಕಾಲಮೇಘಃ ಇವ) ಶೀತಲವಾದ ಕಾಳಮೇಘದಂತೆ ಇರುವ ಶ್ರೀರಂಗನಾಥನು (ಇಮಂ ಜನಂ ಚ) ಈ ನನ್ನನ್ನೂ ಸಹ (ಸಿಂಚೇತ್) ಅಭಿಷೇಕಮಾಡಿ ಕರುಣಿಸಲಿ.

ಇಲ್ಲಿ ಶ್ರೀರಂಗನಾಥನನ್ನು ಶೀತಲವಾದ ಕೃಷ್ಣಮೇಘಕ್ಕೆ ಹೋಲಿಸಿದೆ. ಮೋಡದಲ್ಲಿ ಮಿಂಚಿರುವಂತೆ ಶ್ರೀರಂಗನಾಥನು ಶ್ರೀದೇವಿ ಎಂಬ ಮಿಂಚನ್ನು ಹೊಂದಿದ್ದಾನೆ. ತಾನು ಧರಿಸಿರುವ ಆಭರಣಗಳಲ್ಲಿರುವ ರತ್ನಗಳ ಕಾಂತಿ ಕಾಮನ ಬಿಲ್ಲನ್ನು ಹೋಲುತ್ತದೆ. ಮೇಘದಲ್ಲಿ ನೀರಿರುವಂತೆ ಈ ಕೃಷ್ಣ ಮೇಘನು ದಯಾರಸದಿಂದ ತುಂಬಿದ್ದಾನೆ. ಮೋಡ ಬೆಟ್ಟದ ಮೇಲೆ ಇಳಿದಿರುವ ಹಾಗೆ ಈ ರಂಗನಾಥನೆಂಬ ಮೇಘ ಆದಿಶೇಷನ ಮೇಲೆ ಶಯಿನಿಸಿದ್ದಾನೆ. ಮೋಡ ಮಳೆಗರೆಯುವಂತೆ ಈ ಶ್ರೀರಂಗನಾಥ ತನ್ನ ಕರುಣೆಯ ವರ್ಷವನ್ನು ನಮ್ಮ ಮೇಲೆ ಸುರಿಸಿ ನಮ್ಮನ್ನು ರಕ್ಷಿಸಲಿ ಎಂದು ಬೇಡಿದೆ.

ಆಮೌಲಿರತ್ನಮಕರಾತ್ ಪುನರಾಚ ಪದ್ಭ್ಯಾಂ
ಧಾಮಕ್ರಮೋನ್ನಮದುದಾರ-ಮನೋಹರಾಂಗಂ ।
ಶ್ರೀರಂಗಶೇಷಶಯನಂ ನಯನೈಃ ಪಿಬಾಮಃ
ಪಶ್ಯನ್ ಮನಃ ಪ್ರವಣಂ ಓಘಮಿವಾಮೃತಸ್ಯ ॥ ॥೮೩॥

(ಆಮೌಲಿರತ್ನಮಕರಾತ್) ಶಿರಸ್ಸಿನಲ್ಲಿ ಧರಿಸಿರುವ ರತ್ನಮಯವಾದ ಮಕರವೇ ಮೊದಲಾಗಿ(ಆಚ ಪದ್ಭ್ಯಾಂ) ಶ್ರೀಪಾದಗಳವರೆಗೆ (ಧಾಮಕ್ರಮ-ಉನ್ನಮತ್-ಉದಾರ-ಮನೋಹರಾಂಗಂ) ತೇಜೋ ವಿಶೇಷದಿಂದ ಕ್ರಮವಾಗಿ ಮೇಲೆದ್ದು ಉನ್ನತವಾಗಿಯೂ ಉದಾರವಾಗಿಯೂ ಇರುವ ಮನೋಹರವಾದ ಅವಯವಗಳನ್ನುಳ್ಳವನಾದ (ಶ್ರೀರಂಗಶೇಷಶಯನಂ) ಶ್ರೀರಂಗದಲ್ಲಿ ಆದಿಶೇಷನ

ಮೇಲೆ ಶಯಿನಿಸಿರುವ ಹಿರಿಯ ದೇವನನ್ನು (ಪಶ್ಯನ್ ಮನಃ ಪ್ರವಣಂ) ಸೇವಿಸುವವರ ಮನಸ್ಸಿನಲ್ಲಿ ಬಂದು ತಂಗುವ (ಅಮೃತಸ್ಯ ಓಘಂ ಇವ) ಅಮೃತದ ಪ್ರವಾಹದಂತೆ (ನಯನೈಃ) ಕಣ್ಣುಗಳಿಂದ (ಪಿಬಾಮಃ) ಹೀರಿ ಕೊಳ್ಳುತ್ತೇವೆ.

ಭಗವಂತನನ್ನು ಅಮೃತ ಪ್ರವಾಹವೆಂದೇ ಇಲ್ಲಿ ಅನುಭವಿಸಿದೆ. ಪ್ರವಾಹದಲ್ಲಿ ಮಕರಗಳು ಇರುವುವಷ್ಟೇ? ಈ ಅಮೃತ ಪ್ರವಾಹದಂತಿರುವ ಶ್ರೀರಂಗನಾಥನಲ್ಲಿ ರತ್ನಮಯವಾದ ಮಕರ ಭೂಷಣಗಳಿವೆ. ಸ್ವಾಮಿಯು ತನ್ನ ದಿವ್ಯ ಮಂಗಳ ವಿಗ್ರಹದ ತೇಜಸ್ಸಿನಿಂದ ಕೂಡಿ ಪಾದಗಳವರೆಗೆ ಮೇಲೆದ್ದು ಉನ್ನತವಾಗಿಯೂ ಉದಾರವಾಗಿಯೂ ಇರುವ ಸುಂದರವಾದ ಅವಯವಗಳನ್ನು ಹೊಂದಿದ್ದಾನೆ. ತೇಜಸ್ಸಿನ ಪ್ರವಾಹವೇ ಹರಿಯುವಂತೆ ಕಂಡು ಬರುತ್ತಿರುವ ಅವನನ್ನು ಕಣ್ಣುಗಳಿಂದ ಕಂಡು ಧನ್ಯರಾಗಬೇಕು.

**ಅರವಿಂದಿತಂ ಅಂಘ್ರಿಪಾಣಿ ವಕ್ತ್ರೈಃ**
**ಅಪಿ ತಾಪಿಂಛಿತಂ ಅಂಚಿತಾಂಗಕಾಂತ್ಯಾ ।**
**ಅಧರೇಣ ಚ ಬಂಧುಜೀವಿತಂ ಶ್ರೀಃ**
**ನಿಯತಂ ನಂದನಯೇತ ರಂಗಚಂದ್ರಂ ॥** ॥೮೪॥

(ಅಂಘ್ರಿಪಾಣಿ ವಕ್ತ್ರೈಃ) ಶ್ರೀಪಾದಗಳು, ಹಸ್ತಗಳು, ಮುಖಮಂಡಲ ಇವುಗಳಿಂದ (ಅರವಿಂದಿತಂ) ತಾವರೆ ವಿಕಸಿಸಿದಂತಿರುವನೂ (ಅಂಚಿತ ಅಂಗಕಾಂತ್ಯಾ) ಸಮೃದ್ಧವಾಗಿ ಹೊಮ್ಮುವ ದಿವ್ಯಮಂಗಳ ವಿಗ್ರಹದ ಕಾಂತಿಯಿಂದ (ತಾಪಿಂಛಿತಂ ಅಪಿ) ಹಸಿರೆಲೆಗಳಿಂದ ಕೂಡಿದ ವೃಕ್ಷಗಳಂತಿರುವನೂ (ಅಧರೇಣ) ಕೆಳದುಟಿಯಿಂದ (ಬಂಧು ಜೀವಿತಂ ಚ) ಬಂಧುಜೀವ ಪುಷ್ಪದಹಾಗಿರುವನೂ ಆಗಿ ಇರುವ (ರಂಗಚಂದ್ರಂ) ಶ್ರೀರಂಗನಾಥನನ್ನು (ಶ್ರೀಃ) ಶ್ರೀದೇವಿಯು (ನಂದನಯೇತ ನಿಯತಂ) ನಿಯತವಾಗಿ ನಂದನವನವೆಂದು ತಿಳಿದು ವಿಹರಿಸುವಳು.

ಶ್ರೀರಂಗನಾಥನು ನಂದನವನದಂತೆ ಶೋಭಿಸಿದ್ದಾನೆ ಎಂದು ಇಲ್ಲಿ ವರ್ಣಿಸಿದ್ದಾರೆ. ನಂದನವನದಲ್ಲಿ ತಾವರೆ, ತಮಾಲವೃಕ್ಷ, ಬಂಧುಜೀವ ಕುಸುಮ ಮೊದಲಾದವೆಲ್ಲಾ ಇರುವುವಷ್ಟೇ? ಶ್ರೀರಂಗನಾಥನ ಶ್ರೀಪಾದಗಳು ಹಸ್ತಗಳು ಮತ್ತು ಮುಖಮಂಡಲ ಅರಳಿದ ತಾವರೆಗಳಂತಿವೆ. ಸ್ವಾಮಿಯ ನೀಲ ತನ-ಕಾಂತಿ ಹಸಿರೆಲೆಗಳಿಂದ ಕೂಡಿದ ಕಮಲ ವೃಕ್ಷದಂತಿದೆ. ಸ್ವಾಮಿಯ ಅಧರವೇ ಬಂಧುಜೀವ ಕುಸುಮ. ಹೀಗೆ ಶ್ರೀರಂಗನಾಥನು ನಂದನವನದಂತೆ ಇದ್ದಾನೆ. ಈ ನಂದನವನದಲ್ಲಿ ಶ್ರೀದೇವಿಯು ವಿಹರಿಸುವವಳಾಗಿದ್ದಾಳೆ. 'ಕಟ್ಟುರೈಕ್ಕಿಲ್ ತಾಮರೈ ನಿನ್ ಕಣ್ ಪಾದಂ ಕೈಯೊವ್ವಾ' ಎಂದು ನಮ್ಮಾಳ್ವಾರ್ರವರು ಅನುಭವಿಸಿರುವುದನ್ನು ಕಾಣಬಹುದು.

**ಅನ್ಯೋನ್ಯರಂಜಕರುಚೋಽನುಪಮಾನ-ಶೋಭಾ:**
**ದಿವ್ಯಸ್ರಗಂಬರ-ಪರಿಷ್ಕರಣಾಂಗರಾಗಾ: |**
**ಸಂಸ್ಪರ್ಶತ: ಪುಲಕಿತಾ-ಇವ ಚಿನ್ಮಯತ್ವಾತ್**
**ರಂಗೇಂದ್ರ ಕಾಂತಿಮಧಿಕಾಂ ಉಪಬೃಂಹಯಂತಿ || ||೮೫||**

(ಅನ್ಯೋನ್ಯರಂಜಕರುಚಃ) ಒಂದಕ್ಕೊಂದು ಶೋಭೆಯನ್ನುಂಟು ಮಾಡುವ ಕಾಂತಿಯನ್ನುಳ್ಳವೂ (ಅನುಪಮಾನ ಶೋಭಾಃ) ಉಪಮಾನವಿಲ್ಲದ ಶೋಭೆಯನ್ನುಳ್ಳವೂ ಆದ (ದಿವ್ಯ ಸ್ರಕ್) ವೈಜಯಂತಿಮಾಲೆಯೇನು, (ಅಂಬರ) ಪೀತಾಂಬರವೇನು, (ಪರಿಷ್ಕರಣ) ಆಭರಣಗಳೇನು (ಅಂಗರಾಗಾಃ) ಗಂಧ ಮೊದಲಾದವು ಏನು ಇವು (ಚಿನ್ಮಯತ್ವಾತ್) ಸ್ವಯಂ ಚೇತನಸ್ವರೂಪ ವಾದುದರಿಂದ (ಸಂಸ್ಪರ್ಶತಃ) ಸ್ವಾಮಿಯ ದಿವ್ಯಮಂಗಳ ವಿಗ್ರಹದ ಸ್ಪರ್ಶದಿಂದ (ಪುಲಕಿತಾಃ ಇವ) ರೋಮಾಂಚಗೊಂಡಂತೆ ಇದ್ದು (ಅಧಿಕಾಂ) ಹೆಚ್ಚಾದ (ರಂಗೇಂದ್ರಕಾಂತಿಂ) ಶ್ರೀರಂಗನಾಥನ ಶೋಭೆಯನ್ನು (ಉಪಬೃಂಹಯಂತಿ) ಅಧಿಕಗೊಳಿಸುತ್ತವೆ.

ಪೌಷ್ಕರ ಸಂಹಿತೆಯಲ್ಲಿ 'ಸ್ರಗ್ವಸ್ತ್ರಾಭರಣೈಃ ಯುಕ್ತಂ ಸ್ವಾನುರೂಪೈಃ ಅನೂಪಮೈಃ । ಚಿನ್ಮಯೈಃ ಸ್ವಪ್ರಕಾಶೈಶ್ಚ ಅನ್ಯೋನ್ಯರುಚಿರಂಜಕೈಃ ॥'

ಎಂದು ಹೇಳಿರುವುದಕ್ಕೆ ಈ ಶ್ಲೋಕ ಅನುಗುಣವಾಗಿದೆ. ಸ್ವಾಮಿಯು ಧರಿಸಿರುವ ಭೂಷಣಗಳೂ, ವೈಜಯಂತೀಮಾಲೆ ಪೀತಾಂಬರ ಹಾಗೂ ದಿವ್ಯ ಗಂಧ ಮೊದಲಾದವೂ ಚೇತನಸ್ವರೂಪವಾದವು. ಇವುಗಳು ಸ್ವಾಮಿಯ ದಿವ್ಯ ದೇಹ ಸ್ಪರ್ಶದಿಂದ ಆನಂದಹೊಂದಿ ಪುಲಕಿತವಾದಂತಿವೆ. ಇವುಗಳೂ ಸಹ ಒಂದಕ್ಕೊಂದು ಶೋಭೆಯನ್ನುಂಟುಮಾಡುವುವಾಗಿವೆ. ಇವು ಶ್ರೀರಂಗ ನಾಥನ ಸೌಂದರ್ಯವನ್ನು ಅಧಿಕಗೊಳಿಸುತ್ತವೆ. 'ಭೂಷಣಾನಾಂ ಚ ಭೂಷಣಂ' ಆದ ಸ್ವಾಮಿಯ ಸಂಶ್ಲೇಷದಿಂದ ತಾವೂ ಆಧಿಕ್ಯಹೊಂದಿ ಆ ಸ್ವಾಮಿಯ ಸಮುದಾಯಶೋಭೆಯನ್ನೂ ಹೆಚ್ಚಿಸುತ್ತವೆ.

**ದ್ರುತ–ಕನಕಜಗಿರಿ–ಪರಿಮಿಲದುದಧಿ**
**ಪ್ರಚಲಿತ–ಲಹರೀವತ್ ಅಹಮಹಮಿಕಯಾ ।**
**ಸ್ನಪಯತಿ ಜನಮಿಮಂ ಅಪಹರತಿ ತಮಃ**
**ಫಣಿಶಯ–ಮರತಕಮಣಿ–ಕಿರಣಗಣಃ ॥** ॥೮೬॥

(ಫಣಿಶಯ) ಆದಿಶೇಷನ ಮೇಲೆ ಶಯನಿಸಿರುವ ಶ್ರೀರಂಗನಾಥನಾದ (ಮರತಕಮಣಿ) ಮರತಕ ಪಚ್ಚೆಮಣಿಯ (ಕಿರಣಗಣಃ) ಕಿರಣಗಳ ಸಮೂಹವು (ದ್ರುತ) ಕರಗಿಸಿದ (ಕನಕಜಗಿರಿ) ಸ್ವರ್ಣಮಯವಾದ ಮೇರು ಪರ್ವತದೊಡನೆ (ಪರಿಮಿಲತ್) ಮಿಳಿತವಾದ (ಉದಧಿ) ಸಮುದ್ರದಿಂದ (ಪ್ರಚಲಿತ) ಹರಡಿದ (ಲಹರೀವತ್) ಅಲೆಗಳಹಾಗೆ (ಅಹಮಹಮಿಕಯಾ) ನಾ ಮುಂದೆ ನಾ ಮುಂದೆ ಎಂದು ಬಂದು (ಇಮಂಜನಂ) ಈ ನನ್ನನ್ನು (ಸ್ನಪಯತಿ) ಸ್ನಾನ ಮಾಡಿಸುತ್ತದೆ. (ತಮಃ) ಅಜ್ಞಾನಾಂಧಕಾರವನ್ನು (ಅಪಹರತಿ) ಕಳೆದುಹಾಕುತ್ತದೆ.

ಶ್ರೀರಂಗನಾಥನನ್ನು ಇಲ್ಲಿ ಅಲೆಗಳಿಂದ ಕೂಡಿದ ಸಮುದ್ರಕ್ಕೆ ಹೋಲಿಸಿದೆ. ಸ್ವರ್ಣಮಯವಾದ ಮೇರು ಪರ್ವತ ಕರಗಿ ನೀರಾಗಿ ಸಮುದ್ರ ದೊಡನೆ ಸೇರಿದರೆ ಆ ಸಮುದ್ರದ ಅಲೆಗಳು ಹೇಗೆ ಸೊಗಯಿಸುವುವೋ ಹಾಗೆ ಸ್ವಾಮಿ ಶೋಭಿಸಿದ್ದಾನೆ. ಪೀತಾಂಬರ ಸ್ಥಾನದಲ್ಲಿ ಕರಗಿದ ಸ್ವರ್ಣ ಪರ್ವತ. ನೀಲತನು ಸಾಗರಕ್ಕೆ ಹೋಲುತ್ತದೆ. ಅಲೆಗಳು ಕಿರಣಗಳು. ಇಂಥ

ಹೊಂಬಣ್ಣದೊಡನೆ ಕೂಡಿದ ನೀಲವರ್ಣದ ತೆರೆಗಳು ಒಂದರ ಹಿಂದೆ ಒಂದು ಏಳುತ್ತಾ ಬರುವಂತೆ ಶ್ರೀರಂಗನಾಥನ ದೇಹ ಕಾಂತಿ ಹರಡುತ್ತಾ ಇದೆ. ನಮ್ಮ ಅಜ್ಞಾನವನ್ನು ಆ ಕಾಂತಿ ಹೋಗಲಾಡಿಸುತ್ತದೆ. 'ವಳ್ಳಲೇ ಮದುಶೂದನಾ ಎನ್ಮರತಕ ಮಲೈಯೇ', 'ವೇಲೈವಣ್ಣನೈ ಎರ್ ಕಣ್ಣನೈ', 'ಮಣಿವರ್ಣ್ಣ ಅಮ್ಮಾನೈ', 'ವಂದು ಎಯ್ದುಮಾರರಿಯೇನ್ ಮಲ್‌ಕು ನೀಲಚ್ಚುಡರ್ ತೞೈಪ್ಪ ಶೆಮ್‌ಶುಡರ್ ಶೋದಿಹಳ್ ಪೂತ್ತು ಒರುಮಾಣಿಕ್ಕಂ ಶೇರ್ವದು ಪೋಲ್' ಎಂದು ಆಳ್ವಾರ್‌ರವರುಗಳು ಅನುಭವಿಸಿರುವುದನ್ನು ಕಾಣಬಹುದು.

**ಭೋಗೀಂದ್ರ-ನಿಃಶ್ವಸಿತ-ಸೌರಭವರ್ಧಿತಂ ಶ್ರೀ**
**ನಿತ್ಯಾನುಷಕ್ತ-ಪರಮೇಶ್ವರಭಾವ-ಗಂಧಿ ।**
**ಸೌಗಂಧ್ಯಮಾಪ್ಲುತದಿಶಾವಧಿ ರಂಗನೇತುಃ**
**ಆನಂದಸಂಪದಿ ನಿಮಜ್ಜಯತೇ ಮನಾಂಸಿ ॥ ॥೮೭॥**

(ಭೋಗೀಂದ್ರ) ಶಯನವಾಗಿರುವ ಆದಿಶೇಷನು (ನಿಃಶ್ವಸಿತ) ಬಿಟ್ಟ ಉಸಿರಿನ (ಸೌರಭ) ಪರಿಮಳದಿಂದ (ವರ್ಧಿತಂ) ಬೆಳೆಸಲ್ಪಟ್ಟದ್ದೂ (ಶ್ರೀನಿತ್ಯಾನುಷಕ್ತ) ಶ್ರೀದೇವಿಯ ನಿತ್ಯ ಸಂಶ್ಲೇಷದಿಂದುಂಟಾದ (ಪರಮೇಶ್ವರ ಭಾವ) ಸರ್ವೇಶ್ವರಭಾವದಿಂದ (ಗಂಧಿ) ಪರಿಮಳಿಸುತ್ತಿರುವುದೂ (ಆಪ್ಲುತದಿಶಾವಧಿ) ದಿಕ್ಕುಗಳ ಕೊನೆಯನ್ನು ವ್ಯಾಪಿಸಿರುವಂತಹದೂ ಆದ (ರಂಗನೇತುಃ ಸೌರಭ್ಯಂ) ಶ್ರೀರಂಗನಾಥನ ಪರಿಮಳವು (ಮನಾಂಸಿ) ಸಂದರ್ಶಿಸುವವರ ಮನಸ್ಸನ್ನು (ಆನಂದಸಂಪದಿ) ಆನಂದವೆನ್ನುವ ಸಂಪತ್ತಿನಲ್ಲಿ (ನಿಮಜ್ಜಯತೇ) ಮುಳುಗಿಸುತ್ತದೆ.

ಎಲ್ಲ ದಿಕ್ಕುಗಳನ್ನೂ ವ್ಯಾಪಿಸಿರುವ ಶ್ರೀರಂಗನಾಥನ ದಿವ್ಯಪರಿಮಳವನ್ನು ಇಲ್ಲಿ ಸ್ತುತಿಸಿದೆ. 'ಸರ್ವಗಂಧಃ ಸರ್ವರಸಃ' ಎಂದು ಉಪನಿಷತ್ತು ಇದನ್ನು ಕೊಂಡಾಡುತ್ತದೆ. ಆದಿಶೇಷನ ಉಸಿರಿನ ಪರಿಮಳದೊಡನೆ ಸೇರಿದ ಶ್ರೀರಂಗನಾಥನ ಸರ್ವೇಶ್ವರಭಾವದ ಪರಿಮಳ ಸಂದರ್ಶಿಸುವವರ ಮನಸ್ಸನ್ನು ಆನಂದಗೊಳಿಸುತ್ತದೆ.

**ರಂಗಭರ್ತುರಪಿ ಲೋಚನಚರ್ಚಾಂ**
**ಸಾಹಸಾವಳಿಷು ಲೇಖಯಮಾನಂ ।**
**ಪುಷ್ಪಹಾಸ ಇತಿ ನಾಮ ದುಹಾನಂ**
**ಸೌಕುಮಾರ್ಯಮತಿವಾಙ್ಮನಸಂ ನಃ ॥ ॥೮೮॥**

(ಲೋಚನಚರ್ಚಾಂ ಅಪಿ) ತನ್ನ ಮೇಲೆ ದೃಷ್ಟಿಯು ಬೀಳುವುದನ್ನೂ (ಸಾಹಸಾವಳಿಷು) ಸಾಹಸ ಕೆಲಸಗಳ ಸಮೂಹದಲ್ಲಿ ( ಲೇಖಯಮಾನಂ ) ಬರೆಯುವಂತೆ ಮಾಡುತ್ತಿರುವುದೂ (ಪುಷ್ಪಹಾಸ ಇತಿನಾಮ) ಪುಷ್ಪಹಾಸ ಎಂಬ ಶ್ರೀನಾಮವನ್ನು (ದುಹಾನಂ) ಪ್ರಕಾಶಿಸುವುದೊ ಆದ (ರಂಗಭರ್ತುಃ ಸೌಕುಮಾರ್ಯಂ) ಶ್ರೀರಂಗನಾಥನ ಸೌಕುಮಾರ್ಯವು ( ನಃ ) ನಮ್ಮ ಅತಿವಾಙ್ಮನಸಂ) ಮಾತಿಗೂ ಅರಿವಿಗೂ ವಿಷಯವಾಗದುದು ಆಗಿದೆ.

ಆ ಸ್ವಾಮಿಯ ಸೌಕುಮಾರ್ಯ ಪರಮ ವಿಲಕ್ಷಣ. ಸೇವಾರ್ಥಿಗಳು ಕಣ್ಣಿನಿಂದ ಭಗವಂತನನ್ನು ನೋಡುವುದೇ ಸಾಹಸ. ನಿಶ್ಚಲವಾದ ದೃಷ್ಟಿಯಿಂದ ನೋಡಿದರೇನೇ ಆ ಸೌಂದರ್ಯ ಓಡಿಹೋಗುವುದೋ ಏನೋ ಎಂದು ಭಯವಾಗುವುದು. ಹೀಗೆ ನೋಡುವುದೇ ಒಂದು ಸಾಹಸ. 'ತನ್ನ ನೋಟವನ್ನೇ ತಾನು ಸಹಿಸಲಾರ' ಎಂಬ ಅರ್ಥವನ್ನೂ ಹೇಳಬಹುದು ಶ್ಲೋಕದಲ್ಲಿರುವ ಅನ್ವಯಕ್ಕನುಸಾರವಾಗಿ. ಇಂಥ ಅವನ ಸೌಕುಮಾರ್ಯ ಅವಾಙ್ಮನಸಗೋಚರವಾದುದು.

**ಏಕೈಕಸ್ಮಿನ್ ಪರಮವಯವೇಽನಂತ-ಸೌಂದರ್ಯಮಗ್ನಂ**
**ಸರ್ವಂ ದ್ರಕ್ಷ್ಯೇ ಕಥಮಿತಿ ಮುಧಾ ಮಾಮಥಾ ಮಂದಚಕ್ಷುಃ।**
**ತ್ವಾಂ ಸೌಭ್ರಾತ್ರವ್ಯತಿಕರಕರಂ ರಂಗರಾಜಾಂಗಕಾನಾಂ**
**ತಲ್ಲಾವಣ್ಯಂ ಪರಿಣಮಯಿತಾ ವಿಶ್ವಪಾರೀಣವೃತ್ತಿ ॥ ॥೮೯॥**

(ಹೇ ಮಂದಚಕ್ಷುಃ) ಎಲೈ ಮೂಢವಾದ ಕಣ್ಣೇ, (ಏಕೈಕಸ್ಮಿನ್) ಒಂದೊಂದು (ಅವಯವೇಪರಂ) ಅವಯವದಲ್ಲಿ (ಅನಂತ) ಎಲ್ಲೆಯಿಲ್ಲದ (ಸೌಂದರ್ಯ) ಸೌಂದರ್ಯದಲ್ಲಿ (ಮಗ್ನಂ) ಮುಳುಗಿರುವ ನೀನು "(ಸರ್ವಂ)

ಎಲ್ಲಾ ಅವಯವಗಳನ್ನೂ (ಕಥಂ) ಹೇಗೆ (ದ್ರಕ್ಷ್ಯೇ) ನಾನು ಅನುಭವಿಸುವೆ" (ಇತಿ) ಹೀಗೆಂದು (ಮುಧಾ) ವ್ಯರ್ಥವಾಗಿ (ಮಾಮಥಾಃ) ಶಂಕಿಸಬೇಡ. (ರಂಗರಾಜಾಂಗಕಾನಾಂ) ಶ್ರೀರಂಗನಾಥನ ಅವಯವಗಳ (ಸೌಭ್ರಾತ್ರವ್ಯತಿಕರ ಕರಂ) ಸೌಭ್ರಾತ್ರಭಾವವನ್ನು ಅಭಿವೃದ್ಧಿಗೊಳಿಸುವ (ತತ್ ಲಾವಣ್ಯಂ) ಆ ಸಮುದಾಯ ಶೋಭೆಯಾದುದು (ತ್ವಾಂ) ನಿನ್ನನ್ನು (ವಿಶ್ವಪಾರೀಣವೃತ್ತಿ) ಎಲ್ಲ ಅವಯವಗಳನ್ನೂ ಪೂರ್ತಿಯಾಗಿ ಅನುಭವಿಸಿದವನಂತೆ (ಪರಿಣಮಯಿತಾ) ನೆರವೇರಿಸುವುದು.

ಇಲ್ಲಿ ಶ್ರೀರಂಗನಾಥನ ಲಾವಣ್ಯವನ್ನು ಅನುಸಂಧಾನಮಾಡಿದೆ. ಒಂದೊಂದು ಅವಯವದ ಸೊಬಗು ಸೌಂದರ್ಯವೆನಿಸುವುದು. ಎಲ್ಲಾ ಅವಯವಗಳ ಸಮುದಾಯಶೋಭೆ ಲಾವಣ್ಯವೆನಿಸುತ್ತದೆ. ಭಗವಂತನ ಒಂದೊಂದು ಅವಯವ ನಿರವಧಿಕಾತಿಶಯವಾದ ಸೌಂದರ್ಯವನ್ನು ಹೊಂದಿದೆ. ನಮ್ಮ ಕಣ್ಣು ಒಂದೊಂದರ ಸೌಂದರ್ಯದಲ್ಲಿಯೂ ಸೆರೆಹಿಡಿಯಲ್ಪಡುತ್ತದೆ. ಎಲ್ಲ ಅವಯವಗಳ ಸೌಂದರ್ಯವನ್ನೂ ಅನುಭವಿಸುವುದು ಶಕ್ಯವಾಗದು. ಆದರೆ ಭಗವಂತನ ಲಾವಣ್ಯವನ್ನು ಅನುಭವಿಸಿದಾಗ ಎಲ್ಲ ಅವಯವಗಳ ಒಟ್ಟು ಶೋಭೆಯನ್ನು ಅನುಭವಿಸಬಹುದು.

'ತಿರುಚ್ಚೆಯ್ಯ ಕಮಲಕ್ಕಣ್ಣುಂ ಶೆವ್ವಾಯುಂ ಶೆವ್ವಡಿಯುಂ
ಶೆಯ್ಯ ಕೈಯ್ಯುಂ
ತಿರುಚ್ಚೆಯ್ಯ ಕಮಲವುಂದಿಯುಂ ಶೆಯ್ಯಕಮಲ್ಯೆಮಾರ್ಪುಂ
ಶೆಯ್ಯವುಡ್ಯೆಯುಂ
ತಿರುಚ್ಚೆಯ್ಯಮುಡಿಯುಂ ಆರಮುಂ ಪಡ್ಯೆಯುಂ ತಿಹಳ್ವಾನ್
ಶಿಂದ್ಯೆಯುಳಾನೇ"

ಎಂದು ನಮ್ಮಾಳ್ವಾರ್ರವರು ಅನುಭವಿಸಿದ್ದಾರೆ.

**ವಪುರ್ಮಂದಾರಸ್ಯ ಪ್ರಥಮ-ಕುಸುಮೋಲ್ಲಾಸ-ಸಮಯಃ**
**ಕ್ಷಮಾಲಕ್ಷ್ಮೀಭೃಂಗೀ-ಸಕಲಕರಣೋನ್ಮಾದನ-ಮಧು ।**
**ವಿಕಾಸಸ್ಸೌಂದರ್ಯಸ್ರಜಿ ರಸಿಕತಾಸೀಧುಚುಳಕೋ**
**ಯುವತ್ವಂ ರಂಗೇಂದೋಃ ಸುರಭಯತಿ ನಿತ್ಯಂ ಸುಭಗತಾಂ ॥ ॥೯೦॥**

(ವಪುಃ ಮಂದಾರಸ್ಯ) ದಿವ್ಯಮಂಗಳವಿಗ್ರಹವೆನ್ನುವ ಮಂದಾರ ವೃಕ್ಷಕ್ಕೆ (ಪ್ರಥಮಕುಸುಮೋಲ್ಲಾಸ ಸಮಯಃ) ಮೊದಲ ಹೂ ಬಿಡುವ ಪರ್ವವಾಗಿಯೂ (ಕ್ಷಮಾ) ಭೂದೇವಿಯೇನು (ಲಕ್ಷ್ಮೀ) ಶ್ರೀದೇವಿಯೇನು ಇವರುಗಳಾಗುವ (ಭೃಂಗೀ) ಭೃಂಗಿಗಳಿಗೆ (ಸಕಲಕರಣ) ಎಲ್ಲ ಇಂದ್ರಿಯಗಳನ್ನೂ (ಉನ್ಮಾದನ) ಉನ್ಮತ್ತಗೊಳಿಸಬಲ್ಲ (ಮಧು) ಜೇನಿನಂತೆಯೂ (ಸೌಂದರ್ಯಸ್ರಜಿ) ಸೌಂದರ್ಯವೆಂಬ ಹೂಮಾಲೆಯಲ್ಲಿ ಉಂಟಾದ (ವಿಕಾಸಃ) ವಿಕಾಸದಂತೆಯೂ (ರಸಿಕತಾಸೀಧುಚುಳಕಃ) ರಾಸಿಕ್ಯವಾಗಿರುವ ಮಧುವನ್ನೂ ಅಡಗಿಸಿ ಇಟ್ಟುಕೊಂಡಿರುವಂತೆಯೂ (ರಂಗೇಂದೋಃ ನಿತ್ಯಂಯುವತ್ವಂ) ಶ್ರೀರಂಗನಾಥನ ನಿತ್ಯ ಯೌವ್ವನವು (ಸುಭಗತಾಂ) ಸೌಭಾಗ್ಯವನ್ನು (ಸುರಭಯತಿ) ಪರಿಮಳಿಸುತ್ತದೆ.

ಇಲ್ಲಿ ಶ್ರೀರಂಗನಾಥನ ನಿತ್ಯಯೌವ್ವನವನ್ನು ಸ್ತೋತ್ರಮಾಡಿದೆ. ಇದನ್ನು ನಾಲ್ಕು ರೂಪಕಗಳಿಂದ ವರ್ಣಿಸಿದೆ. ಮಂದಾರ ವೃಕ್ಷದ ಹೂ ಬಿಡುವ ಪರ್ವ ಆ ಯೌವ್ವನ ; ಶ್ರೀಭೂದೇವಿಯರೆಂಬ ಭೃಂಗಗಳಿಗೆ ಆನಂದೋನ್ಮಾದವನ್ನುಂಟುಮಾಡುವ ಮಕರಂದ ಅದು. ಸೌಂದರ್ಯವೆಂಬ ಹೂಮಾಲೆಯಲ್ಲಿ ಉಂಟಾಗುವ ವಿಕಾಸ. ರಸಿಕತೆ ಎಂಬ ಮಧುವನ್ನು ಅಡಗಿಸಿರುವ ಅಂಗೈ. ಭಗವಂತನ ನಿತ್ಯಯೌವ್ವನವನ್ನು ಹೀಗೆ ಅನುಸಂಧಾನಮಾಡಿದೆ. ಭಗವದ್ಯಾಮುನರು 'ಅಚಿಂತ್ಯದಿವ್ಯಾದ್ಭುತ ನಿತ್ಯಯೌವ್ವನ ಸ್ವಭಾವ ಲಾವಣ್ಯಮಯಾಮೃತೋದಧಿಂ' ಎಂದು ಅನುಭವಿಸಿರುವುದನ್ನು ಕಾಣಬಹುದು.

**ಕಿರೀಟ ಚೂಡರತ್ನರಾಜಿಃ ಆಧಿರಾಜ್ಯಜಲ್ಪಿಕಾ ।**
**ಮುಖೇಂದುಕಾಂತಿರುನ್ಮುಖಂ ತರಂಗಿತೇವ ರಂಗಿಣಃ ॥ ॥೯೧॥**

(ರಂಗಿಣಃ) ಶ್ರೀರಂಗನಾಥನ (ಆಧಿರಾಜ್ಯಜಲ್ಪಿಕಾ) ಸರ್ವೇಶ್ವರತ್ವವನ್ನು ತಿಳಿಸಿಕೊಡುವ (ಕಿರೀಟಚೂಡರತ್ನರಾಜಿಃ) ಕಿರೀಟ, ಕೋರಂಬ ಇವುಗಳಲ್ಲಿ ಕೆತ್ತಿರುವ ರತ್ನಗಳ ಪಂಕ್ತಿಯು (ಉನ್ಮುಖಂ) ಮೇಲ್ಮುಖವಾಗುವ ಹಾಗೆ (ತರಂಗಿತಾ) ಹರಡಿದ (ಮುಖೇಂದುಕಾಂತಿಃ ಇವ) ಮುಖ ಚಂದ್ರನ ಕಾಂ[illegible]

ಇಲ್ಲಿ ಶ್ರೀರಂಗನಾಥನ ದಿವ್ಯ ಕಿರೀಟದ ವರ್ಣನೆ ಇದೆ. ಮುಖಚಂದ್ರನ ಕಾಂತಿಯು ಮೇಲ್ಮುಖವಾಗಿ ಹರಡಿ ಕಿರೀಟವಾಗಿದೆಯೋ ಎಂಬಂತೆ ಅದು ಶೋಭಿಸಿದೆ. ನಮ್ಮಾಳ್ವಾರ್‌ರವರು,

'ಮುಡಿಚ್ಚೋದಿಯಾಯ್ ಉನದುಮುಹಚ್ಚೋದಿ ಮಲರ್ನ್ದದುವೋ
ಅಡಿಚ್ಚೋದಿ ನೀ ನಿನ್ರ ತಾಮರೈಯಾಯ್ ಅಲರ್ನ್ದದುವೋ
ಪಡಿಚ್ಚೋದಿ ಆಡೈಯೋಡುಂ ಪಲ್‌ಹಲನಾಯ್ ನಿನ್‌ಪೈಂಪೊನ್
ಕಡಿಚ್ಚೋದಿ ಕಲಂದದುವೋ ತಿರುಮಾಲೇಕಟ್ಟುರೈಯೇ' ಎಂದೂ
'ಮುತ್ತ ಇಮ್ಮೂವುಲಕಂ ವಿರಿಹಿನ್ರ ಶುಡರ್‌ಮುಡಿಕ್ಕೇ ಒತ್ತುಮೈ
ಕೊಂಡದು ಉಳ್ಳಂ'

ಎಂದೂ ಅನುಭವಿಸಿರುವುದನ್ನು ಕಾಣಬಹುದು.

**ಶಿಖಾರತ್ನೋದ್ದೀಪ್ರಂ ದಿಶಿದಿಶಿ ಚ ಮಾಣಿಕ್ಯಮಕರೀ**
**ಲಸಚ್ಛೃಂಗಂ ರಂಗಪ್ರಭುಮಣಿಕಿರೀಟಂ ಮನುಮಹೇ ।**
**ಸಮುತ್ತುಂಗಸ್ಫೀತಂ ಚಿದಚಿದಧಿರಾಜ್ಯಶ್ರಿಯ ಇವ**
**ಪ್ರಿಯಾಕ್ರೀಡಂ ಚೂಡಾಮಣಿಮಪಿ ನಿತಂಬಂ ತಮಭಿತಃ ॥ ॥೯೨॥**

(ದಿಶಿದಿಶಿಚ) ದಿಕ್ಕು ದಿಕ್ಕುಗಳಲ್ಲೆಲ್ಲಾ (ಶಿಖಾರತ್ನ) ಚೂಡಾಮಣಿಯಿಂದ (ಉದ್ದೀಪ್ರಂ) ಅತಿಶಯವಾಗಿ ಬೆಳಗುವುದೂ (ಮಾಣಿಕ್ಯಮಕರೀಲಸತ್‌ಶೃಂಗಂ) ಮಕರ ರೂಪದಲ್ಲಿರುವ ಮಾಣಿಕ್ಯಮಣಿಯಿಂದ ಪ್ರಕಾಶಿಸುವ ಅಗ್ರಭಾಗವುಳ್ಳದೂ ಆದ (ರಂಗಪ್ರಭುಮಣಿ ಕಿರೀಟಂ) ಶ್ರೀರಂಗನಾಥನ ರತ್ನ ಕಿರೀಟವನ್ನು (ಚಿದಚಿದಧಿರಾಜ್ಯಶ್ರಿಯಃ) ಸಕಲ ಚೇತನಾಚೇತನಗಳಿಗೂ ಪ್ರಭುವಾಗಿರುವ ಸಾಮ್ರಾಜ್ಯಲಕ್ಷ್ಮಿಗೆ (ಸಮುತ್ತುಂಗಸ್ಫೀತಂ) ಉನ್ನತವಾಗಿಯೂ ದೊಡ್ಡದಾಗಿಯೂ ಇರುವ (ಪ್ರಿಯಾ ಕ್ರೀಡಂ) ಪ್ರಿಯವಾದ ಕ್ರೀಡಾಶೈಲವೆಂದು (ಮನುಮಹೇ) ಭಾವಿಸುತ್ತೇವೆ. (ತಂ ಅಭಿತಃ) ಆ ಕ್ರೀಡಾಶೈಲದ ಸುತ್ತಲೂ ಇರುತ್ತಿರುವ (ಚೂಡಾಮಣಿಮಪಿ) ಕೊ ೯ ರ ಂ ಬ ದ ರತ್ನಗಳನ್ನೂ (ನಿತಂಬಂ) ಆ ಪರ್ವತ ಪ್ರದೇಶದ ಸುತ್ತಮುತ್ತಲ ತಪ್ಪಲೆಂದು ತಿಳಿಯುತ್ತೇವೆ.

ಸ್ವಾಮಿಯ ಕಿರೀಟ ಶ್ರೀದೇವಿಯ ಸ್ವೇಚ್ಛಾವಿಹಾರಕ್ಕೆ ನಿರ್ಮಿಸಿದ ಬೆಟ್ಟವೋ ಎಂಬಂತಿದೆ ಎಂದು ಹೇಳುತ್ತಾರೆ ಇಲ್ಲಿ. ಉಭಯವಿಭೂತಿ ನಾಯಕತ್ವವನ್ನು ಸೂಚಿಸುವುದು ಇದು. ಕಿರೀಟವೇ ಕ್ರೀಡಾಪರ್ವತ. ಅದರ ಚೂಡಾಮಣಿಯ ಪ್ರಕಾಶ ದಿಕ್ಕುಗಳನ್ನೆಲ್ಲಾ ಬೆಳಗುತ್ತದೆ. ಕೋರಂಬದ ರತ್ನಗಳು ಆ ಪರ್ವತದ ಪರಿಸರ ಪ್ರದೇಶಗಳಂತಿವೆ. ಮಾಣಿಕ್ಯಮಣಿಗಳ ಪ್ರಕಾರವೇ ಶಿಖರಗಳೋಪಾದಿ ಇರುತ್ತದೆ. ಇಂಥ ಅಪೂರ್ವವಾದ ಸನ್ನಿವೇಶದಿಂದ ಮೆರೆದಿದ್ದಾನೆ ಶ್ರೀರಂಗನಾಥ.

**ವಿಹರತು ಮಯಿ ರಂಗಿಣಶ್ಚೂಲಿಕಾ**
**ಭ್ರಮರಕ-ತಿಲಕೋರ್ಧ್ವಪುಂಡ್ರೋಜ್ಜ್ವಲಂ ।**
**ಮುಖಮಮೃತ-ತಟಾಕ-ಚಂದ್ರಾಂಬುಜ-**
**ಸ್ಮಯಹರ-ಶುಚಿಮುಗ್ಧ-ಮಂದಸ್ಮಿತಂ ॥** ॥೯೩॥

(ಚೂಲಿಕಾ) ಕೇಶಪಾಶವೇನು (ಭ್ರಮರಕ) ಹಣೆಯಿಂದ ತೂಗಾಡುವ ಮುಂಗುರುಳುಗಳೇನು (ತಿಲಕ) ತಿಲಕ ಎಂಬ ಆಭರಣವೇನು (ಊರ್ಧ್ವ ಪುಂಡ್ರ) ಊರ್ಧ್ವಪುಂಡ್ರವೇನು ಇವುಗಳಿಂದ (ಉಜ್ವಲಂ) ಬೆಳಗುತ್ತಿರುವುದೂ (ಅಮೃತ ತಟಾಕ) ಅಮೃತಮಯವಾದ ಸರೋವರವೇನು (ಚಂದ್ರ) ಚಂದ್ರನೇನು (ಅಂಬುಜ) ತಾವರೆ ಹೂವೇನು ಇವುಗಳ (ಸ್ಮಯ) ಗರ್ವವನ್ನು (ಹರ) ಹೋಗಲಾಡಿಸುವಂಥ (ಶುಚಿ) ಬೆಳ್ಳಗಿರುವುದೂ (ಮುಗ್ಧ) ಸುಂದರ ವಾದುದೂ ಆದ (ಮಂದಸ್ಮಿತಂ) ಮಂದಹಾಸವನ್ನು ಉಳ್ಳುದೂ ಆದ (ರಂಗಿಣಃ ಮುಖಂ) ಶ್ರೀರಂಗನಾಥನ ಮುಖಮಂಡಲವು (ಮಯಿ) ನನ್ನಲ್ಲಿ (ವಿಹರತು) ವಿಹಾರಮಾಡಲಿ.

ಶ್ರೀರಂಗನಾಥನ ಮುಖಮಂಡಲವನ್ನು ಇಲ್ಲಿ ವರ್ಣಿಸಿದ್ದಾರೆ. ಭಗವಂತನ ವದನಾರವಿಂದ ತೂಗಾಡುವ ಮುಂಗುರುಳುಗಳಿಂದಲೂ, ಉಜ್ವಲವಾದ ತಿಲಕಾಭರಣದಿಂದಲೂ, ಊರ್ಧ್ವಪುಂಡ್ರದಿಂದಲೂ ಚೆಲುವಾಗಿದೆ. ಆ ಮುಖಮಂಡಲದಲ್ಲಿ ತೋರುವ ಮಂದಹಾಸದ ಚೆಲುವು ವರ್ಣನಾತೀತ. ಆ ಮಂದಹಾಸ ಶುಭ್ರವೂ ಮುಗ್ಧವೂ ಆದುದು. ಅಮೃತ

ಮಯವಾದ ತಟಾಕ, ಚಂದ್ರ ಮತ್ತು ತಾವರೆ ಹೂಗಳ ಗರ್ವವನ್ನು ಅಡಗಿಸುವಂತೆ ಆ ಮಂದಹಾಸ ಶೋಭಿಸಿದೆ. ಇಂಥ ಸುಂದರವಾದ ಮುಖ ಮಂಡಲ ಎಂದೆಂದೂ ನಮ್ಮ ಕಣ್ಣುಗಳ ಮುಂದೆ ಪ್ರಕಾಶಿಸಲಿ. ಯಾಮುನರು 'ಮುಖಶ್ರಿಯಾ ನ್ಯಕ್ಕೃತ ಪೂರ್ಣನಿರ್ಮಲಾಮೃತಾಂಶುಬಿಂಬಾಂಬುರುಹೋಜ್ಜ್ವಲಶ್ರಿಯಂ' ಎಂದು ಅನುಭವಿಸಿರುವುದನ್ನು ಅನುಸಂಧಾನಮಾಡಬಹುದು. ಸ್ವಾಮಿಯ ಮಂದಹಾಸವು ಸ್ಥಿರವಾಗಿ ಹೊಳೆಯುವ ಮಿಂಚಿನಂತೆಯೂ ಮುತ್ತುಗಳ ಹಾರದಂತೆಯೂ ಮಿರುಗುವುದೆಂದು – ಆಳ್ವಾರ್ ಅವರು 'ಶೆಯ್ಯ ಈಶುಡರ್ ವೆಣ್ ಮಿನ್ನುಕ್ಕೊಲ್, ಅನ್ರಿ ಎಲಿವಿ ಅಡುಂ ಅಣಿ ಮುತ್ತಂಗೊಲೋ ಅರಿಯೇನ್, ಕುನ್ರಂ ಎಡುತ್ತ ಪಿರಾನ್ ಮರುವಲ್ ಎನದಾವಿ ಅಡುಂ' ಎಂದು ಅನುಭವಿಸಿದ್ದಾರೆ.

ಮುಖಪುಂಡರೀಕಮುಪರಿ ತ್ರಿಕಂಟಿಕಂ
ತಿಲಕಾಶ್ಚ ಕೇಸರಸಮಾಸ್ಸಮೌಕ್ತಿಕಾಃ ।
ಇಹ ರಂಗಭರ್ತುರಭಿಯನ್ಮಧುವ್ರತ
ಪ್ರಕರಶ್ರಿಯಂ ಭ್ರಮರಕಾಣಿ ಬಿಭ್ರತಿ ॥ ॥೯೪॥

(ರಂಗಭರ್ತುಃ) ಶ್ರೀರಂಗನಾಥನ (ತ್ರಿಕಂಟಕಂ) ಮೂರು ರೇಖೆಗಳೊಡನೆ ಕೂಡಿದ (ಮುಖಪುಂಡರೀಕಂ ಉಪರಿ) ಮುಖಾರವಿಂದದ ಮೇಲೆ (ಸಮೌಕ್ತಿಕಾಃ) ಮುತ್ತುಗಳೊಡನೆ ಕೂಡಿದ (ತಿಲಕಾಃ) ತಿಲಕಾಭರಣಗಳು (ಕೇಸರಸಮಾಃ) ಪುಷ್ಪಕೇಸರಕ್ಕೆ ಸಮಾನವಾಗಿ (ಇಹ) ಈ ಮುಖಮಂಡಲದಲ್ಲಿ (ಭ್ರಮರಕಾಣಿ) ಮುಂಗುರುಳುಗಳು (ಅಭಿಯತ್) ಮುಖಕ್ಕೆ ಅಭಿಮುಖವಾಗಿ ಬರುತ್ತಿರುವ (ಮಧುವ್ರತಪ್ರಕರ) ದುಂಬಿಗಳ ಹಿಂಡುಗಳ (ಶ್ರಿಯಂ) ಶೋಭೆಯನ್ನು (ಬಿಭ್ರತಿ) ವಹಿಸುತ್ತವೆ.

ಪೆರಿಯಾಳ್ವಾರ್ 'ಶೆಂಗಮಲಪ್ಪೂವಿಲ್ ತೇನುಣ್ಣುಂವಂಡೇಪೋಲ್' ಎಂದು ವರ್ಣಿಸಿದಂತೆ ಭಗವಂತನ ಮುಖಾರವಿಂದದ ಮೇಲೆ ಸುಳಿದಾಡುವ ಕಪ್ಪಾದ ಮುಂಗುರುಳುಗಳು ಅಲ್ಲಿ ಮಕರಂದವನ್ನು ಹೀರಲು ಬಂದ ದುಂಬಿಗಳ ಹಿಂಡಿನಂತೆ ಶೋಭಿಸುತ್ತವೆ. ಮುತ್ತುಗಳೊಡನೆ ಕೂಡಿದ

ತಿಲಕಾಭರಣವು ಭಗವಂತನ ಮುಖಮಂಡಲದಲ್ಲಿ ವಿರಾಜಿಸಿದೆ. ಇದು ತಾವರೆ ಹೂವಿನ ಪುಷ್ಪಕೇಸರದಂತೆ ಇದೆ. ಭಗವಂತನ ಮುಖಮಂಡಲವೇ ಪದ್ಮ ವಾದರೆ ಕಪ್ಪಾದ ಮುಂಗುರುಳುಗಳು ಭೃಂಗಗಳು.

**ಹೃದಯಂ ಪ್ರಸಾದಯತಿ ರಂಗಪತೇಃ**
**ಮಧುರೋರ್ಧ್ವಪುಂಡ್ರತಿಲಕಂ ಲಲಿತಂ ।**
**ಅಳಿಕಾರ್ಧಚಂದ್ರದಳ-ಸಂವಲಿತಾಂ**
**ಅಮೃತಸ್ರುತಿಂ ಯದಭಿಶಂಕಯತೇ ॥** ॥೯೫॥

(ಯತ್) ಯಾವ ಊರ್ಧ್ವಪುಂಡ್ರವು (ಅಳಿಕ) ಹಣೆಯ (ಅರ್ಧಚಂದ್ರದಲ) ಅರ್ಧಚಂದ್ರನ ಭಾಗದಿಂದ (ಸಂವಲಿತಾಂ) ಪ್ರವಹಿಸುವ (ಅಮೃತಸ್ರುತಿಂ) ಅಮೃತ ಪ್ರವಾಹವೋ ಎಂಬುವ (ಅಭಿಶಂಕಯತೇ) ಸಂದೇಹಕ್ಕೆ ಆಸ್ಪದ ಗೊಳಿಸುತ್ತದೋ (ತತ್) ಅಂತಹ (ರಂಗಪತೇಃ) ಶ್ರೀರಂಗನಾಥನ (ಲಲಿತಂ) ಋಜುವಾದ ( ಮಧುರ ) ಭೋಗ್ಯವಾಗಿರುವ ( ಊರ್ಧ್ವಪುಂಡ್ರತಿಲಕಂ ) ಊರ್ಧ್ವಪುಂಡ್ರತಿಲಕವು (ಹೃದಯಂ) ಮನಸ್ಸನ್ನು (ಪ್ರಸಾದಯತಿ) ಪ್ರಸನ್ನ ಗೊಳಿಸುತ್ತದೆ.

ಊರ್ಧ್ವಪುಂಡ್ರತಿಲಕದ ವರ್ಣನೆ ಈ ಶ್ಲೋಕದಲ್ಲಿದೆ. ಈ ತಿಲಕ ಅಮೃತದ ಪ್ರವಾಹದಂತೆ ತೋರುತ್ತಿದೆ. ಭಗವಂತನ ಮುಖವು ಅರ್ಧ ಚಂದ್ರದಂತೆ ಇದೆ. ಚಂದ್ರನಿಂದ ಅಮೃತವು ಪ್ರವಹಿಸುವಂತೆ ಈ ಮುಖ ಮಂಡಲದಿಂದ ಊರ್ಧ್ವಪುಂಡ್ರ ತಿಲಕವು ಪ್ರವಹಿಸುತ್ತಿದೆ. ಈ ತಿಲಕವು ತನ್ನ ಮಾಧುರ್ಯದಿಂದ ನಮ್ಮ ಮನಸ್ಸನ್ನು ಸಂತೋಷಪಡಿಸುತ್ತದೆ.

**ಸರಸೀರುಹೇ ಸಮವನಾಮ್ಯ ಮುದಾತ್**
**ಉಪರಿ ಪ್ರನೃತ್ಯದಳಿಪಂಕ್ತಿ-ನಿಭೇ ।**
**ಸ್ಫುರತೋ ಭ್ರುವಾವುಪರಿ ಲೋಚನಯೋಃ**
**ಸವಿಲಾಸ್ಯಲಾಸ್ಯಗತಿ ರಂಗಭೃತಃ ॥** ॥೯೬॥

(ಸರಸೀರುಹೇ) ಎರಡು ತಾವರೆ ಹೂಗಳನ್ನೂ (ಮದಾತ್) ಮದದಿಂದ (ಸಮವನಾಮ್ಯ) ಕೆಳಗೆ ತಳ್ಳಿ (ಉಪರಿ) ಮೇಲೆ (ಪ್ರನೃತ್ಯತ್) ನರ್ತನ ಮಾಡುತ್ತಿರುವ (ಅಳಿಪಂಕ್ತಿನಿಭೇ) ದುಂಬಿಗಳ ಸಾಲಿನಂತೆ ಇರುವ (ರಂಗಭೃತಃ ಭ್ರುವೌ) ಶ್ರೀರಂಗನಾಥನ ಹುಬ್ಬುಗಳು (ಲೋಚನಯೋಃ ಉಪರಿ) ಕಣ್ಣುಗಳ ಮೇಲೆ (ಸವಿಲಾಸ್ಯಗತಿ ಯಥಾತಥಾ) ವಿಲಾಸದಿಂದ ಕೂಡಿದ ನಡೆಯ ಸೌಂದರ್ಯವಿರುವಂತೆ (ಸ್ಫುರತಃ) ಪ್ರಕಾಶಿಸುತ್ತವೆ.

ಹುಬ್ಬುಗಳ ಸೌಂದರ್ಯವನ್ನು ಇಲ್ಲಿ ವರ್ಣಿಸಿದೆ. ಕೆಂದಾವರೆಗಳಂತಹ ಕಣ್ಣುಗಳ ಮೇಲೆ ವಿರಾಜಿಸುವ ಕಪ್ಪು ಬಣ್ಣದ ಹುಬ್ಬುಗಳು ದುಂಬಿಗಳಂತೆ ಶೋಭಿಸಿವೆ. ಮಧುಪಾನದಿಂದ ಮದಿಸಿದ ದುಂಬಿಗಳು ತಾವರೆಯನ್ನು ಮೆಟ್ಟಿ ನಿಂತಂತೆ ಎರಡು ಹುಬ್ಬುಗಳೂ ಸುಂದರವಾಗಿವೆ. ವಿಲಾಸದಿಂದ ಆಗುವ ದುಂಬಿಗಳ ಸಂಚಾರದಂತೆ ಆ ಹುಬ್ಬಿನ ಚಲನೆ ಸುಂದರವಾಗಿ ಶೋಭಿಸಿದೆ.

ಸ್ಮರಶರ-ನಳಿನ-ಭ್ರಮಾನ್ನೇತ್ರಯೋಃ
ಪರಿಸರ-ನಮದಿಕ್ಷುಚಾಪಚ್ಛವಿ ।
ಯುಗಮುದಯತಿ ರಂಗಭರ್ತುರ್ಭ್ರುವೋಃ
ಗುರುಕುಲಮಿವ ಶಾರ್ಙ್ಗನೃತ್ತಶ್ರಿಯಃ ॥ ॥೯೭॥

(ನೇತ್ರಯೋಃ) ಕಣ್ಣುಗಳಲ್ಲಿ (ಸ್ಮರಶರನಳಿನಭ್ರಮಾತ್) ಮನ್ಮಥನ ಬಾಣವಾಗುವ ತಾವರೆ ಹೂಗಳು ಎಂಬ ಭ್ರಮದಿಂದ (ಪರಿಸರ) ಅವುಗಳ ಸಮೀಪದಲ್ಲಿ (ನಮತ್) ಬಗ್ಗಿರುವ (ಇಕ್ಷುಚಾಪ) ಕಬ್ಬಿನ ಬಿಲ್ಲಿನಂತಹ (ಛವಿ) ಕಾಂತಿಯನ್ನು ಹೊಂದಿರುವುದಾಗಿ (ರಂಗಭರ್ತುಃ ಭ್ರುವೋಃ ಯುಗಂ) ಶ್ರೀರಂಗನಾಥನ ಹುಬ್ಬುಗಳೆರಡೂ (ಶಾರ್ಙ್ಗ) ಶಾರ್ಙ್ಗ ಧನುಸ್ಸಿನ (ನೃತ್ತಶ್ರಿಯಃ) ನರ್ತನ ಲಕ್ಷ್ಮಿಗೆ (ಗುರುಕುಲಮಿವ) ಆಚಾರ್ಯಕುಲದಂತೆ (ಉದಯತಿ) ಪ್ರಕಾಶಿಸುತ್ತಿವೆ.

ಇಲ್ಲಿಯೂ ಶ್ರೀರಂಗನಾಥನ ಹುಬ್ಬುಗಳ ಸೊಗಸನ್ನು ವರ್ಣಿಸಿದೆ. ಕಣ್ಣುಗಳು ತಾವರೆ ಹೂಗಳಂತಿವೆ. ತಾವರೆಯು ಮನ್ಮಥನ ಬಾಣವಲ್ಲವೇ ? ಆ ಬಾಣದ ಬಳಿ ಬಾಗಿರುವ ಬಿಲ್ಲಿನಂತೆ ಹುಬ್ಬುಗಳು ಸೊಗಯಿಸಿವೆ. ಮನ್ಮಥನ ಇಕ್ಷುಚಾಪದ ಕಾಂತಿಯನ್ನು ಈ ಹುಬ್ಬುಗಳು ಹೊಂದಿವೆ. ಶ್ರೀರಂಗನಾಥನು ಕೈಯಲ್ಲಿ ಹಿಡಿದು ಬಗ್ಗಿಸುವ ಶಾರ್ಙ್ಗಧನುಸ್ಸಿನ ನರ್ತನಕ್ಕೆ ಈ ಹುಬ್ಬುಗಳು ಶಿಕ್ಷಣಕೊಡುವಂತೆ ಇವೆ. ನಮ್ಮಾಳ್ವಾರ್‌ರವರು

'ಇನ್ನುಯಿರ್‌ಕ್ಕು ಏಳ್ಳೈಯರ್‌ವೇಲ್ ವಳ್ಳೈಯುಂ ಇಣೈ
ನೀಲವಿಕ್ಕೋಲ್
ಮನ್ನಿಯಶೀರ್ ಮದನನ್ ಕರುಪ್ಪು ಚ್ಚಿಲೈಕೊಲ್ ಮದನನ್
ತನ್ನುಯಿರ್ ತಾಪ್ಪೈ ಕಣ್ಣಪೆರುಮಾನ್ ಪುರುವವಮ್ಮೈಯೇ'

ಎಂದು ತಿರುವಾಯ್ಮೊಳಿಯಲ್ಲಿ ಅನುಭವಿಸಿರುವುದನ್ನೂ ಆಂಡಾಳ್ ನಾಯ್‌ಚ್ಚಿಯಾರ್ ತಿರುಮೊಳಿಯಲ್ಲಿ 'ತನ್ ಕೈಶಾರ್ಙ್ಗಂ ಅದುವೇಪೋಲ್ ಪುರುವವಟ್ಟಂ ಅಳ್ಹಿಯ ಪೊರುತ್ತಮಿಲಿಯೈಕ್ಕಂಡೀರೇ' ಎಂದೂ ಅನುಭವಿಸಿರುವುದನ್ನು ಕಾಣಬಹುದು.

**ಕೃಪಯಾ ಪರಯಾ ಕರಿಷ್ಯಮಾಣೇ**
**ಸಕಲಾಂಗಂ ಕಿಲ ಸರ್ವತೋಽಕ್ಷಿ ನೇತ್ರೇ ।**
**ಪ್ರಥಮಂ ಶ್ರವಸೀ ಸಮಾಸ್ತೃಣಾತೇ**
**ಇತಿ ದೈರ್ಘ್ಯೇಣ ವಿದಂತಿ ರಂಗನೇತುಃ ॥** ॥೯೮॥

(ಪರಯಾಕೃಪಯಾ) ಅಪಾರವಾದ ಕೃಪೆಯಿಂದ (ಸಕಲಾಂಗಂ) ಎಲ್ಲಾ ಅವಯುವಗಳನ್ನೂ (ಸರ್ವತಃ) ಎಲ್ಲ ಅಂಶಗಳಿಂದಲೂ (ಅಕ್ಷಿ) ಕಣ್ಣಾಗಿ (ಕರಿಷ್ಯಮಾಣೇ) ಮಾಡುವಂಥವುಗಳಂದ (ರಂಗನೇತುಃ ನೇತ್ರೇ) ಶ್ರೀರಂಗನಾಥನ ಕಣ್ಣುಗಳು (ಪ್ರಥಮಂ) ಮೊದಮೊದಲು (ಶ್ರವಸಿ)

ಕಿವಿಗಳವರಗೆ ( ಸಮಾಸ್ತೃಣಾತೇ) ಹರಡಿಕೊಂಡಿವೆ (ಇತಿ) ಹೀಗೆಂದು (ದೈರ್ಘ್ಯೇಣ) ಆ ಕಣ್ಣುಗಳ ದೀರ್ಘಸ್ವಭಾವದಿಂದ (ವಿದಂತಿ) ತಿಳಿಯುತ್ತಾರೆ.

ಕಣ್ಣುಗಳು ನೀಳವಾಗಿವೆ ಎಂದು ಅನುಭವಿಸಿದ್ದಾರೆ. ಅರ್ಚಾಮೂರ್ತಿಯ ಕೃಪೆ ಪರಮಪದನಾಥನ ಕೃಪೆಗಿಂತ, ವಿಭವಾವತಾರಗಳ ಕೃಪೆಗಿಂತ ಅಧಿಕವಾದುದೆಂಬುವುದನ್ನು ಈ ನಿಡಿದಾದ ಕಣ್ಣುಗಳು ತೋರಿಸುತ್ತಿವೆ. ಕೃಪಾಶಾಲಿಯಾದ ಭಗವಂತನು ತನ್ನ ಮೈಯ್ಯನ್ನೆಲ್ಲಾ ಕಣ್ಣಾಗಿಮಾಡಿ ಕೊಳ್ಳಲು ಯೋಚಿಸಿ ಮೊದಮೊದಲು ಕಣ್ಣುಗಳು ಕಿವಿಗಳವರಗೆ ಹರಡು ವಂತೆಮಾಡಿದನು ಎಂದು ಅನುಭವಿಸಿದ್ದಾರೆ. 'ಕರಿಯುವಾಹಿ ಪ್ಪುಡೈಪರಂದು ಮಿಳಿರ್‌ನ್ದು ಶೆವ್ವರಿಯೋಡಿ ನೀಂಡ ಅಪ್ಪೆರಿಯುವಾಯ ಕಣ್ಗಳ್ ಎನ್ನೈ ಪೇದೈಮೈ ಶೇಯ್‌ದನವೇ'ಎಂದು ತಿರುಪ್ಪಾಣಾಳ್ವಾರ್ ಅನುಭವಿಸಿರುವುದನ್ನು ಕಾಣಬಹುದು.

ಶ್ರವೋ ನಾಸಾರೋಧಾತ್ತದವಧಿಕ–ಡೋಲಾಯಿತಗತೇ
ವಿಶಾಲಸ್ಫೀತಾಯದ್ರುಚಿರ–ಶಿಶಿರಾತಾಮ್ರ–ಧವಲೇ ।
ಮಿಥೋ ಬದ್ಧಸ್ಪರ್ಧಸ್ಫುರಿತ ಶಫರದ್ವಂದ್ವಲಲಿತೇ
ಕ್ರಿಯಾಸ್ತಾಂ ಶ್ರೀರಂಗ ಪ್ರಣಯಿ–ನಯನಾಬ್ಜೇ–ಮಯಿ
ದಯಾಂ ॥ ॥೯೯॥

(ಶ್ರವೋ ನಾಸಾರೋಧಾತ್) ಕಿವಿ ಮೂಗು ಇವುಗಳು ಅಡ್ಡಿಯಾದುದ ರಿಂದ (ತದವಧಿಕ ಡೋಲಾಯಿತಗತೇ) ಆ ಎರಡು ಅವಯವಗಳ ಎಲ್ಲೆಯಲ್ಲಿ ಸುತ್ತಾಡುತ್ತಾ ಇರುವುವೂ (ವಿಶಾಲ) ವಿಶಾಲಗಳಾಗಿ (ಸ್ಫೀತ) ದೊಡ್ಡವು ಗಳಾಗಿ (ಆಯತ್) ನೀಳವಾಗಿ (ರುಚಿರ) ಸುಂದರವಾಗಿ (ಶಿಶಿರ) ತಂಪಾಗಿ (ಆತಾಮ್ರಧವಲೇ) ಸ್ವಲ್ಪ ಕೆಂಪಾಗಿ ಬೆಳ್ಳಗಿರುವುವೂ, (ಮಿಥಃ ಬದ್ಧಸ್ಪರ್ಧ) ಪರಸ್ಪರ ಸ್ಪರ್ಧಿಸುವುವೂ (ಸ್ಫುರಿತ) ಮಿಮ್ಮುವುವೂ ಆದ ( ಶಫರದ್ವಂದ್ವ ) ಎರಡು ದೊಡ್ಡ ಮೀನುಗಳಂತೆ ( ಲಲಿತೇ ) ಮನೋಹರಗಳಾದವೂ ಆದ (ಶ್ರೀರಂಗಪ್ರಣಯಿನಯನಾಬ್ಜೇ) ಶ್ರೀರಂಗನಾಥನ ಕಮಲದಂತಹ ನೇತ್ರಗಳು (ಮಯಿ) ನನ್ನಲ್ಲಿ (ದಯಾಂ) ದಯೆಯನ್ನು (ಕ್ರಿಯಾಸ್ತಾಂ) ಮಾಡಲಿ.

ಇಲ್ಲಿಯೂ ಶ್ರೀರಂಗನಾಥನ ದಿವ್ಯನೇತ್ರಗಳನ್ನು ಅನುಭವಿಸಿದೆ. ನೇತ್ರಗಳನ್ನು ಎರಡು ದೊಡ್ಡ ಮೀನುಗಳಿಗೆ ಇಲ್ಲಿ ಹೋಲಿಸಿದೆ. ಆ ಕಣ್ಣುಗಳು ಕಿವಿಗಳ ಕಡೆ ಹೋದಾಗ ಅವುಗಳ ಚಲನೆಯನ್ನು ಕಿವಿಗಳು ತಡೆಯುತ್ತವೆ. ಹಾಗೆಯೇ ಇನ್ನೊಂದು ದಿಕ್ಕಿನಲ್ಲಿ ಚಲಿಸಿದಾಗ ಮೂಗು ಅವುಗಳ ಚಲನೆಯನ್ನು ತಡೆಯುತ್ತದೆ. ಕಿವಿ ಮತ್ತು ಮೂಗು ಇವುಗಳೆರಡರ ಪರಿಸರದ ನಡುವೆ ಆ ಮೀನುಗಳು ಸುತ್ತಾಡುತ್ತಾ ಇವೆ. ಒಂದರೊಡನೆ ಒಂದು ಸ್ಪರ್ಧಿಸುವಂತೆ ಇವೆ ಆ ಎರಡು ನೇತ್ರಗಳು. ಶ್ರೀರಂಗನಾಥನ ಕಮಲದಂತಹ ನೇತ್ರಗಳನ್ನು ಇಲ್ಲಿ ನೀಳವಾದವೂ ಸ್ವಲ್ಪ ಕೆಂಪಾಗಿ ಬೆಳ್ಳಗಿರುವುವೂ, ದೊಡ್ಡವಾದವೂ, ಪರಸ್ಪರ ಸ್ಪರ್ಧೆಯಿಂದ ಚಿಮ್ಮುತ್ತಿರುವುವೂ ಆದ ಮೀನುಗಳಿಗೆ ಹೋಲಿಸಿ, ಅಂಥ ಸುಂದರವಾದ ನೇತ್ರಗಳು ನಮ್ಮ ಮೇಲೆ ದಯೆ ತೋರಲಿ ಎಂದು ಬೇಡಿದೆ.

ಕರುಣಾಮೃತಕೂಲಮುದ್ವಹೈಷಾ
ಪ್ರಣಮತ್ಸ್ವಾಗತಿಕೀ ಪ್ರಸನ್ನಶೀತಾ ।
ಮಯಿ ರಂಗಧನೋಪಕರ್ಣಿಕಾಕ್ಷ್ಣೋಃ
ಸರಿತೋರ್ವೀಕ್ಷಣವೀಚಿಸಂತತಿಸ್ಸ್ಯಾತ್ ॥ ॥೧೦೦॥

( ಹೇ ರಂಗಧನ ) ಎಲೈ ಶ್ರೀರಂಗನಾಥನೇ (ಕರುಣಾಮೃತಕೂಲ ಮುದ್ವಹಾ) ದಡಗಳು ತುಂಬಿ ಹರಿಯುವ ಕರುಣೆ ಎಂಬುವ ಅಮೃತವನ್ನುಳ್ಳದೂ (ಪ್ರಣಮತ್ಸ್ವಾಗತಿಕೀ) ಬಂದು ನಮಿಸುವವರನ್ನು ಆದರದಿಂದ ಸ್ವಾಗತಿಸುವುದೂ (ಪ್ರಸನ್ನಶೀತಾ) ಪ್ರಸನ್ನತೆ ಮತ್ತು ತಂಪು ಇರುವುದೂ (ಉಪಕರ್ಣಿಕಾ) ಕಿವಿಯವರಗೂ ವ್ಯಾಪಿಸಿರುವುದೂ ಆದ (ಏಷಾ) ಹೀಗೆ ವಿಲಕ್ಷಣವಾಗಿರುವ ( ಅಕ್ಷ್ಣೋಃ ವೀಚಿಸಂತತಿಃ ) ಕಣ್ಣುಗಳೆಂಬುವ ನದಿಗಳ ಕಟಾಕ್ಷಗಳೆಂಬುವ ಅಲೆಗಳ ಸಂತತಿಯು (ಮಯಿಸ್ಯಾತ್) ನನ್ನ ಮೇಲೆ ಹರಡಲಿ.

ಇಲ್ಲಿ ಶ್ರೀರಂಗನಾಥನ ದಿವ್ಯನೇತ್ರಗಳನ್ನು ಎರಡು ಸುಂದರವಾದ ನದಿಗಳಿಗೆ ಹೋಲಿಸಿದೆ. ಈ ನದಿಗಳು ಕರುಣೆ ಎಂಬ ಅಮೃತದಿಂದ

ಪೂರ್ಣವಾಗಿ ಎರಡು ದಡಗಳನ್ನೂ ಆವರಿಸುತ್ತವೆ. ಪ್ರಸನ್ನವಾಗಿಯೂ ಶೀತವಾಗಿಯೂ ಇವೆ ಇವು. ಬಂದು ನಮಸ್ಕಾರಮಾಡುವವರನ್ನು ಆದರದಿಂದ 'ಬಂದಿರಾ, ಕ್ಷೇಮವೇ ?' ಎಂದು ಮಾತಾಡಿಸುತ್ತವೆ. ಕಿವಿಯವರೆಗೂ ಹರಡಿ ವಿಶಾಲವಾಗಿವೆ. ಈ ಕಣ್ಣುಗಳೆಂಬ ನದಿಗಳ ಕಟಾಕ್ಷಗಳೆಂಬ ಅಲೆಗಳು ನಮ್ಮ ಮೇಲೆ ಹರಡಲಿ. ಸ್ವಾಮಿಯ ಕರುಣಾಮೃತಪೂರ್ಣವಾದ ಕಟಾಕ್ಷ ಗಳಿಗೆ ನಾವು ವಿಷಯವಾಗುವಂತಾಗಲಿ ಎಂದು ಬೇಡಿದೆ.

**ವಿಲಸತಿ ನಾಸಾಕಲ್ಪಕವಲ್ಲೀ ಮುಗ್ಧೇವ ರಂಗನಿಲಯಸ್ಯ ।**
**ಸ್ಮಿತಮಪಿ ತನ್ನವಕುಸುಮಂ ಚುಬುಕಕಪೋಲಂ ಚ**
**ಪಲ್ಲವೋಲ್ಲಸಿತಂ ॥೧೦೧॥**

( ರಂಗನಿಲಯಸ್ಯ ) ಶ್ರೀರಂಗನಾಥನ ( ನಾಸಾ ) ನಾಸಿಕವಾದುದು (ಮುಗ್ಧಾ) ಸುಂದರವಾದ (ಕಲ್ಪಕವಲ್ಲೀ ಇವ) ಕಲ್ಪವೃಕ್ಷದ ಬಳ್ಳಿಯಂತೆ (ವಿಲಸತಿ) ಪ್ರಕಾಶಿಸುತ್ತದೆ. (ಸ್ಮಿತಮಪಿ) ಮುದಹಾಸವೂ ಸಹ (ತತ್‌ನವ ಕುಸುಮಂ ಇವ) ಆ ಕಲ್ಪವೃಕ್ಷದ ಬಳ್ಳಿಯಲ್ಲಿ ಆಗತಾನೇ ಅರಳಿದ ಹೂವಿನಂತೆ. (ಚುಬುಕ ಕಪೋಲಂ) ಗಲ್ಲ ಮತ್ತು ಕಪೋಲಗಳು (ಪಲ್ಲವೋಲ್ಲಸಿತಂ ಇವ) ಆ ಕಲ್ಪವೃಕ್ಷ ಬಳ್ಳಿಯ ಚಿಗುರಿನ ಆವಿರ್ಭಾವದಂತೆ (ವಿಲಸತಿ) ಪ್ರಕಾಶಿಸುತ್ತದೆ.

ಶ್ರೀರಂಗನಾಥನನ್ನು ಪಾರಿಜಾತ ವೃಕ್ಷನೆಂದು 68ನೆಯ ಶ್ಲೋಕದಲ್ಲಿ ವರ್ಣಿಸಿದೆ. ಅಂಥ ಕಲ್ಪವೃಕ್ಷದ ಬಳ್ಳಿ, ಕುಸುಮ ಮೊದಲಾದವನ್ನು ಇಲ್ಲಿ ನಿರೂಪಿಸಿದೆ. ಶ್ರೀರಂಗನಾಥನ ನಾಸಿಕವೇ ಕಲ್ಪವಲ್ಲಿ. ಮಂದಹಾಸ ಆ ಕಲ್ಪವಲ್ಲಿಯ ಅರಳಿದ ಹೂ. ಅವನ ಗಲ್ಲ ಮತ್ತು ಕಪೋಲಗಳು ಆ ಬಳ್ಳಿಯ ಚಿಗುರುಗಳು. ನಮ್ಮಾಳ್ವಾರ್‌ರವರು ಭಗವಂತನ ನಾಸಿಕವನ್ನು 'ಮಾಟ್ಟುಯಿರ್ ಕರ್ಪಕತ್ತಿನ್‌ವಲ್ಲಿಯೋ ಕೊಳ್ಳುನ್ದೋ ಅರಿಯೇನ್' ಎಂದು ಅನುಭವಿಸಿರು ವುದನ್ನು ಕಾಣಬಹುದು.

ನಯನಶಫರವಿದ್ಧೌ ಕರ್ಣಪಾಶಾವರುದ್ಧೌ
ರುಷ ಇವ ಲುಠತೋರ್ಚಿರ್ಮಂಜರೀರುದ್ಗಿರಂತೌ ।
ಪರಿಮಿಲದಲಕಾಲೀಶೈವಲಾಂ ಅಂಸವೇಲಾಂ
ಅನು ಮಣಿಮಕರೋದ್ಘೌ ರಂಗಧುರ್ಯಾಮೃತಾಬ್ಧೇಃ॥ ॥೧೦೨॥

(ರಂಗಧುರ್ಯ) ಶ್ರೀರಂಗನಾಥನೆಂಬ (ಅಮೃತಾಬ್ಧೇಃ) ಅಮೃತ ಸಾಗರದ (ಪರಿಮಿಲತ್-ಅಲಕಾಲೀ-ಶೈವಲಾಂ) ಸುತ್ತಲೂ ತೂಗಾಡುತ್ತಿರುವ ಮುಂಗುರುಳಗಳೆಂಬ ಪಾಚಿಯನ್ನುಳ್ಳ (ಅಂಸವೇಲಾಂ ಅನು) ತೋಳು ಗಳೆಂಬ ತೀರಗಳ ಪಕ್ಕದಲ್ಲಿ (ನಯನಶಫರವಿದ್ಧೌ) ಕಣ್ಣುಗಳೆಂಬ ಮೀನು ಗಳಿಂದ ಹೊಡೆಯಲ್ಪಟ್ಟವಾಗಿ (ಕರ್ಣಪಾಶಾವರುದ್ಧೌ) ಕಿವಿಗಳೆನ್ನುವ ಬಲೆಗಳಿಂದ ಹಿಡಿಯಲ್ಪಟ್ಟವಾದ (ರುಷಃ) ಈ ಎರಡು ಕೆಲಸಗಳಿಂದ ಉಂಟಾದ ಕೋಪದಕಾರಣ (ಅರ್ಚಿರ್ಮಂಜರೀಃ) ಹೂಗೊಂಚಲಿನಂತಿರುವ ತೇಜಸ್ಸುಗಳನ್ನು (ಉದ್ಗಿರಂತೌ ಇವ) ಕೆದರುತ್ತವೆಯೋ ಎಂಬಂತಿರುವ (ಮಣಿಮಕರೋದ್ಘೌ) ಶ್ರೇಷ್ಠವಾದ ರತ್ನ ಮಕರ ಕುಂಡಲಗಳು (ಲುಠತಃ) ಥಳಥಳವೆಂದು ಪ್ರಕಾಶಿಸುತ್ತವೆ.

ಭುಜದವರೆಗೆ ಹರಡಿರುವ ಮೀನಾಕಾರದ ಕುಂಡಲಗಳನ್ನು ಇಲ್ಲಿ ವರ್ಣಿಸಿದೆ. 'ಉದ್ಘ' ಶಬ್ದ ಶ್ರೇಷ್ಠವಾಚಕ. 'ಮಕರೋದ್ಘೌ' ಎಂಬುದು ಶ್ರೇಷ್ಠವಾದ ಮಕರಕುಂಡಲಗಳನ್ನು ಹೇಳುತ್ತದೆ. ಇವು ಅನುಪಮವಾದ ತೇಜಸ್ಸನ್ನು ಬೀರುತ್ತಿರುವುದನ್ನು ಇಲ್ಲಿ ಅನುಭವಿಸಿದೆ. ಶ್ರೀ ರಂಗನಾಥನೇ ಅಮೃತಸಾಗರನಾಗಿದ್ದಾನೆ ಮುಖಮಂಡಲವನ್ನಾವರಿಸಿರುವ ಮುಂಗುರುಳು ಗಳು ಸಾಗರದಲ್ಲಿನ ಪಾಚಿಯಂತಿವೆ. ತೋಳುಗಳವರೆಗೆ ಅಲಂಕಾರವಾಗಿರುವ ಆ ಮಕರಕುಂಡಲಗಳು ಕಣ್ಣುಗಳೆಂಬ ಮೀನುಗಳಿಂದ ಹೊಡೆಯಲ್ಪಟ್ಟವೂ, ಕಿವಿಗಳೆಂಬ ಬಲೆಗಳಿಂದ ಹಿಡಿಯಲ್ಪಟ್ಟವೂ ಆಗಿ, ಕೋಪಗೊಂಡು ಕಿಡಿಗಳನ್ನು ಕೆದರುವಂತೆ ಹೊಳೆಯುತ್ತಿವೆ ಎಂದು ವರ್ಣಿಸಿದೆ.

'ಕಳಿವಂಡೆಂಗುಂ ಕಲಂದಾಪ್ಪೋಲ್ ಕಮೞ್ ಪೂಂಕುೞಲ್‌ಹಳ್ ತಡಂ ತೋಳ್ಮೇಲ್ ಮಿಳಿರ ನಿನ್ರು' ಎಂದು ನಾಯ್‌ಚ್ಚಿಯಾರ್ ತಿರುಮೊಳಿ ಯಲ್ಲಿ ಆಂಡಾಳ್ ಹಾಡಿರುವುದನ್ನು ಅನುಸಂಧಾನ ಮಾಡಬೇಕು.

**ಅಧರಮಧುರಾಂಭೋಜಂ ತತ್ಕರ್ಣಪಾಶಮೃಣಾಲಿಕಾ**
**ವಲಯಮಭಿ ಮಾಮಾಸ್ತಾಂ ರಂಗೇಂದುವಕ್ತ್ರಸರಶ್ಚಿರಂ ।**
**ನಯನಶಫರಂ ನಾಸಾಶೈವಾಲ-ವಲ್ಲರಿ ಕರ್ಣಿಕಾ**
**ಮಕರ ಮಲಕ ಶ್ರೇಣೀ ಪರ್ಯಂತ-ನೀಲವನಾವಲಿ॥ ॥೧೦೪॥**

(ಅಧರ) ಕೆಳದುಟಿ ಎನ್ನುವ (ಮಧುರಾಂಭೋಜಂ) ಭೋಗ್ಯವಾದ ತಾವರೆ ಹೂವನ್ನು ಹೊಂದಿದುದಾಗಿಯೂ (ಕರ್ಣಪಾಶ) ಕಿವಿಗಳ ಪ್ರಾಂತವೆಂಬುವ (ಮೃಣಾಲಿಕಾವಲಯಂ) ತಾವರೆಯ ಬಳ್ಳಿಯ ಸುತ್ತುಗಳನ್ನುಳ್ಳದಾಗಿಯೂ (ನಯನ ಶಫರಂ) ಕಣ್ಣುಗಳೆಂಬ ಮೀನುಗಳನ್ನು ಹೊಂದಿರುವುದಾಗಿಯೂ (ನಾಸಾಶೈವಾಲವಲ್ಲರಿ) ಮೂಗು ಎನ್ನುವ ಪಾಚಿಯ ಬಳ್ಳಿಯನ್ನುಳ್ಳದಾಗಿಯೂ (ಕರ್ಣಿಕಾಮಕರಂ) ಕರ್ಣಭೂಷಣಗಳೆಂಬ ಮಕರಗಳನ್ನು ಹೊಂದಿ (ಅಲಕಶ್ರೇಣೀ) ಮುಂಗುರುಳುಗಳೆಂಬುವ (ಪರ್ಯಂತ ನೀಲವನಾವಲಿ) ಹತ್ತಿರ ಸುತ್ತುವರಿದಿರುವ ಶ್ಯಾಮಲವಾದ ತೋಪುಗಳನ್ನುಳ್ಳದಾಗಿಯೂ (ತತ್) ಪರಮವಿಲಕ್ಷಣವಾದ (ರಂಗೇಂದು ವಕ್ತ್ರಸರಃ) ಶ್ರೀರಂಗನಾಥನ ಮುಖಮಂಡಲವೆನ್ನುವ ಸರೋವರವು (ಚಿರಂ) ಎಂದೆಂದೂ (ಮಾಮಭಿ) ನನ್ನನ್ನು ನೋಡುತ್ತಾ (ಆಸ್ತಾಂ) ಇರಲಿ.

ಶ್ರೀರಂಗನಾಥನ ಮುಖಮಂಡಲವನ್ನು ಸುಂದರವಾದ ಸರೋವರ ವೆಂದು ರೂಪಣ ಮಾಡಿದೆ ಇಲ್ಲಿ. ಅಧರವೇ ತಾವರೆ ಹೂ. ಕರ್ಣಪಾಶವೇ ತಾವರೆಯ ಬಳ್ಳಿ. ಕಣ್ಣುಗಳೇ ಮೀನುಗಳು. ನಾಸಿಕವೇ ಪಾಚಿಯಬಳ್ಳಿ. ಕರ್ಣಭೂಷಣಗಳೇ ಮಕರಗಳು. ಮುಖವನ್ನಾವರಿಸಿರುವ ಕುಟಿಲ ಕುಂತಳಗಳ ಸಮೂಹವೇ ಸುತ್ತ ಇರುವ ಶ್ಯಾಮಲವಾದ ಉಪವನಗಳು. ಇಂಥ ಪರಮಭೋಗ್ಯವಾದ ಸರೋವರವು ಎಂದೆಂದೂ ನನ್ನ ಕಣ್ಮುಂದೆ ಪ್ರಕಾಶಿಸುತ್ತಿರಲಿ ಎಂದು ಇಲ್ಲಿ ಬೇಡಿದೆ.

•

**ರಮಯತು ಸ ಮಾಂ ಕಂಠಃ ಶ್ರೀರಂಗನೇತುರುದಂಚಿತ**
**ಕ್ರಮುಕ-ತರುಣಗ್ರೀವಾ-ಕಂಬು ಪ್ರಲಂಬಮಲಿಮ್ಲುಚಃ ।**

ಪ್ರಣಯವಿಲಸಲ್ಲಕ್ಷ್ಮೀ-ವಿಶ್ವಂಭರಾ-ಕರಕಂದಲೀ
ಕನಕವಲಯ-ಕ್ರೀಡಾಸಂಕ್ರಾಂತರೇಖ ಇವೋಲ್ಲಸನ್ ॥ ॥೧೦೪॥

( ಶ್ರೀ ರಂಗನೇತುಃ ) ಶ್ರೀರಂಗನಾಥನ (ಉದಂಚಿತ-ಕ್ರಮುಕ ತರುಣ ಗ್ರೀವಾ ಕಂಬು ಪ್ರಲಂಬ ಮಲಿಮ್ಲುಚಃ) ಉದ್ದವಾಗಿ ಬೆಳೆದ ಅಡಿಕೆ ಮರದ ಎಳೆಯದಾದ ಕುತ್ತಿಗೆಯೇನು ಶಂಖವೇನು ಇವುಗಳ ಸೌಂದರ್ಯವನ್ನು ಅಪಹರಿಸುವುದಾಗಿಯೂ, (ಪ್ರಣಯ) ಪ್ರೀತಿಯೊಡನೆ (ವಿಲಸತ್) ಆಲಿಂಗನ ಮಾಡಿಕೊಳ್ಳುವ (ಲಕ್ಷ್ಮೀ) ಶ್ರೀದೇವಿಯೇನು (ವಿಶ್ವಂಭರಾ) ಭೂದೇವಿಯೇನು ಇವರ (ಕರಕಂದಲೀ) ಬಾಳೆಯಮರದಂತಹ ಮೃದುವಾದ ಕೈಗಳ (ಕನಕ ವಲಯ) ಚಿನ್ನದ ಬಳೆಗಳ ಕಾರಣ (ಕ್ರೀಡಾ ಸಂಕ್ರಾತರೇಖಃ ಇವ) ಕ್ರೀಡೆಯಲ್ಲಿ ಬಂದು ಸೇರಿದ ರೇಖೆಯೋ ಎಂಬಂತೆ ( ಉಲ್ಲಸನ್ ) ಪ್ರಕಾಶಿಸುತ್ತಿರುವ (ಸಃಕಂಠಃ) ವಿಲಕ್ಷಣವಾದ ಆ ಕುತ್ತಿಗೆಯು (ಮಾಂ) ನನ್ನನ್ನು (ರಮಯತು) ಸಂತೋಷಪಡಿಸಲಿ.

ಶ್ರೀರಂಗನಾಥನ ಕುತ್ತಿಗೆಯಲ್ಲಿರುವ ಮೂರು ರೇಖೆಗಳನ್ನು ಇಲ್ಲಿ ವರ್ಣಿಸಿದೆ. ಉದ್ದವಾಗಿ ಬೆಳೆದ ಅಡಕೆಮರದ ಎಳೆಯದಾದ ಕುತ್ತಿಗೆ ಯಂತೆಯೂ ಶಂಖದಂತೆಯೂ ಅದು ಸುಂದರವಾಗಿದೆ. ಆ ರೇಖೆಗಳು ಹೇಗೆ ಸೊಗಯಿಸಿವೆ ಎಂದರೆ ಶ್ರೀಭೂದೇವಿಯರು ತಮ್ಮ ಮೃದುವಾದ ಕೈಗಳಿಂದ ಸ್ವಾಮಿಯನ್ನು ಆಲಿಂಗನಮಾಡಿಕೊಂಡಾಗ ಅವರ ಕೈಗಳಲ್ಲಿದ್ದ ಬಳೆಗಳ ಗುರುತುಗಳು ಬಂದು ಸೇರಿವೆಯೋ ಎಂಬುತಿವೆ ಎಂದು ಇಲ್ಲಿ ಉತ್ಪ್ರೇಕ್ಷಿಸಿದೆ.

ಅಧಿಷ್ಠಾನಸ್ತಂಭೌ ಭುವನಪೃಥುಯಂತ್ರಸ್ಯ ಕಮಲಾ
ಕರೇಣೋಃ ಆಲಾನೇ ಅರಿಕರಿಘಟೋನ್ಮಾಥಮುಸಲೌ ।
ಫಣೀಂದ್ರ-ಸ್ಫೀತಸ್ರಗ್ವ್ಯತಿಕರಿತ ಸಂದಿಗ್ಧವಿಭವೌ
ಭುಜೌ ಮೇ ಭೂಯಾಸ್ತಾಂ ಅಭಯಮಭಿರಂಗ
ಪ್ರಣಯಿನಃ ॥ ॥೧೦೫॥

( ಭುವನ ಪೃಥುಯಂತ್ರಸ್ಯ) ಭೂಮಿಯುನ್ನುವ ದೊಡ್ಡಯಂತ್ರಕ್ಕೆ (ಅಧಿಷ್ಠಾನಸ್ತಂಭೌ) ಆಧಾರಸ್ತಂಭಗಳಾಗಿ ಇರುವುವೂ, (ಕಮಲಾಕರೇಣೋಃ) ಲಕ್ಷ್ಮಿ ಎನ್ನುವ ಹೆಣ್ಣಾನೆಗೆ (ಆಲಾನೇ) ಕಟ್ಟಹಾಕುವ ಕಂಬಗಳಂತೆಯೂ (ಅಂಕರಿಘಟೋನ್ಮಾಥಮುಸಲೌ ) ಶತ್ರುಗಳೆಂಬ ಆನೆಯ ಸಮೂಹವನ್ನು ಮುಗಿಸುವ ಒನಕೆಗಳಂತೆಯೂ (ಫಣೀಂದ್ರ) ಆದಿಶೇಷನ ಶರೀರವೇನು, (ಸ್ಫೀತಸ್ರಕ್) ದೊಡ್ಡದಾದ ಹೂ ಹಾರವೇನು (ವ್ಯತಿಕರಿತ) ಇವುಗಳೊಡನೆ ಸೇರಿರುವುವೂ (ಸಂದಿಗ್ಧ ವಿಭವೌ) ಸಂದೇಹಿಸಲ್ಪಟ್ಟ ಹಿರಿಮೆಯುನ್ನುಳ್ಳವೂ ಆದ (ರಂಗಪ್ರಣಯಿನಃ ಭುಜೌ) ಶ್ರೀ ರಂಗನಾಥನ ಭುಜಗಳು (ಮೇ) ನನಗೆ (ಅಭಯಂ ಅಭಿಭೂಯಾಸ್ತಾಂ) ಅಭಯುವನ್ನುಂಟುಮಾಡಲಿ.

ಚೇತನಾಚೇತನಮಯುವಾದ ಲೋಕಕ್ಕೆ ಆಧಾರವೋ ಎಂಬಂತಹ ಭುಜಗಳು. 'ಬಾಹುಚ್ಛಾಯಾಂ ಅನಷ್ಟಭ್ಧೋ' ಎಂಬಂತೆ. ಎರಡು ಕೈಗಳೂ ಎರಡು ಒನಕೆಗಳಂತೆ ಶತ್ರುನಾಶಕವಾಗಿವೆ. ಆದಿಶೇಷನ ಮೇಲೆ ಶಯುನಿಸಿದ ಸ್ವಾಮಿ ತುಲಸೀ ಮಾಲೆಗಳನ್ನು ಧರಿಸಿದ್ದಾನೆ. ಇವೆಲ್ಲಾ ಒಟ್ಟಿಗೆ ಸೇರಿರುವಾಗ ಆದಿಶೇಷ ಯಾರು, ಮಾಲೆ ಯಾವುದು, ಭುಜಗಳು ಯಾವುವು ಎಂದು ತಿಳಿಯುವುದಕ್ಕೆ ಆಗದಂತೆ ಇವೆ. ಅಂಥ ಮಹಿಮೆಯುಳ್ಳ ಭುಜಗಳು ನನಗೆ ಅಭಯುವನ್ನುಂಟುಮಾಡಲಿ ಎಂದು ಬೇಡಿದೆ.

**ಪ್ರತಿಜಲಧಿತೋ ವೇಲಾಶಯ್ಯಾಂ ವಿಭೀಷಣ ಕೌತುಕಾತ್**
**ಪುನರಿವ ಪುರಸ್ಕರ್ತುಂ ಶ್ರೀರಂಗಿಣಃ ಫಣಿಪುಂಗವೇ ।**
**ಸಮುಪದಧತಃ ಕಂಚಿತ್ಕಂಚಿತ್ಪ್ರಸಾರಯುತೋ ಭುಜ**
**ದ್ವಯುಮಪಿ ಸದಾದಾನ ಶ್ರದ್ಧಾಲು ದೀರ್ಘಂ**
**ಉಪಾಸ್ಮಹೇ ॥ ॥೧೦೬॥**

(ಪ್ರತಿ ಜಲಧಿತಃ) ಕಡಲಿಗೆ ಎದುರು ಮುಖವಾಗಿ (ವೇಲಾಶಯ್ಯಾಂ) ಸಮುದ್ರ ತೀರದಲ್ಲಿ ಶಯುನಿಸಿದುದನ್ನು (ವಿಭೀಷಣಕೌತುಕಾತ್) ವಿಭೀಷಣನ ಕುತೂಹಲದ ಕಾರಣ (ಪುನಃ) ಮತ್ತೆ (ಪುರಸ್ಕರ್ತುಂ ಇವ) ಆದರಿಸಿ ಅಂಗೀಕರಿಸುವಂತೆ (ಫಣಿಪುಂಗವೇ) ಆದಿಶೇಷನ ಮೇಲೆಯೂ (ಕಂಚಿತ್ ಭುಜಂ)

ಒಂದು ಕೈಯನ್ನು (ಸಮುಪದಧತಃ) ತಲೆದಿಂಬಾಗಿ ಇಟ್ಟುಕೊಂಡವನೂ (ಕಂಚಿತ್) ಮತ್ತೊಂದು ಭುಜವನ್ನು (ಪ್ರಸಾರಯತಃ) ನೀಡಿಕೊಂಡಿರುವವನೂ ಆದ (ಶ್ರೀ ರಂಗಿಣಃ) ಶ್ರೀ ರಂಗನಾಥನ (ದೀರ್ಘಂ) ನೀಳವಾದುದೂ (ಸದಾ ದಾನಶ್ರದ್ಧಾಲು) ಯಾವಾಗಲೂ ದಾನಮಾಡುವುದರಲ್ಲಿ ಶ್ರದ್ಧೆಯುಳ್ಳುದೂ ಆದ (ಭುಜದ್ವಯಂ ಅಪಿ) ಎರಡು ಕೈಗಳನ್ನೂ (ಉಪಾಸ್ಮಹೇ) ಚಿಂತಿಸುತ್ತೇವೆ.

ಭಗವಂತನು ರಾಮನಾಗಿ ಅವತರಿಸಿದಾಗ ಲಂಕಾಪಟ್ಟಣವನ್ನು ಸುಡುವುದಕ್ಕಾಗಿ ಸೇತುಬಂಧನವನ್ನು ಮಾಡಿಸಿದನಷ್ಟೇ? ಆಗ ಸಮುದ್ರರಾಜನಲ್ಲಿ ಶರಣಾಗತಿ ಮಾಡಿ ಅವನು ಸಮುದ್ರ ತೀರದಲ್ಲಿ ಶಯನಿಸಿದ್ದನು. ಆ ಸುಂದರ ದೃಶ್ಯವನ್ನು ಮತ್ತೆ ಕಾಣಬೇಕೆಂಬ ಕುತೂಹಲವಿದ್ದ ವಿಭೀಷಣನಿಗೆ ಸಂತೋಷ ಉಂಟು ಮಾಡುವುದಕ್ಕಾಗಿ ಸ್ವಾಮಿ ಶ್ರೀರಂಗದಲ್ಲಿ ಆದಿಶೇಷನ ಮೇಲೆ ಹಾಗೆಯೇ ಶಯನಿಸಿದ್ದಾನೆ ಎಂದು ಇಲ್ಲಿ ಅನುಭವಿಸಿದೆ. 'ಬಾಹುಂ ಭುಜಗ ಭೋಗಾಭಂ ಉಪಧಾಯಾಂಸೂದನಃ । ಗೋಸಹಸ್ರಪ್ರದಾತಾರಂ ಉಪಧಾಯ ಮಹದ್ಭುಜಂ' । ಎಂದು ಆಗ ಮಾಡಿದಂತೆ ಶ್ರೀ ರಂಗನಾಥನೂ ಸಹ ಒಂದು ತೋಳನ್ನು ತಲೆದಿಂಬಾಗಿಟ್ಟುಕೊಂಡು ಮತ್ತೊಂದು ತೋಳನ್ನು ನೀಡಿಕೊಂಡು ಶಯನಿಸಿದ್ದಾನೆ. ಪೆರಿಯಾಳ್ವಾರ್ರವರು 'ಮನ್ನುಡೈ ವಿಬೀಡಣರ್ಕ್ಕಾಯ್ ಮದಿಳಲಂಗೈತಿಶೈ ನೋಕ್ಕಿಮಲರ್ಕಣ್ ವೈತ್ತ, ಎನ್ನುಡೈಯ ತಿರುವರಂಗರ್ಕನ್ರಿಯುಂ ಮತ್ತೊರುವರ್ಕಾಳಾವರೇ' ಎಂದು ಹೇಳಿರುವುದನ್ನು ಇಲ್ಲಿ ಅನುಸಂಧಾನ ಮಾಡಬೇಕು.

**ಕುಸುಮಭರಾಲಸಾ ಸ್ಫಟಿಕವೇದಿಶಯಾ ವಿಟಪಾ**
**ಅಮರತರೋಃ ಪರಂ ಪರಿಹಸತ್ಪೃಥು-ರಂಗಭುಜಃ ।**
**ಬಹುಮಣಿಮುದ್ರಿಕಾ ಕನಕಕಂಕಣ-ದೋರ್ವಲಯೈಃ**
**ಕಿಸಲಯಿ ದೋರ್ದ್ವಯಂ ಫಣಿನಿನಿರ್ಭರಸುಪ್ತಮಿಮಃ ॥ ॥೧೦೭॥**

(ಬಹು) ಅನೇಕಗಳಾದ (ಮಣಿ ಮುದ್ರಿಕಾ) ರತ್ನಗಳ ಉಂಗುರಗಳೇನು (ಕನಕ) ಸ್ವರ್ಣಮಯವಾದ (ಕಂಕಣ) ಕೈಬಳೆಗಳೇನು (ದೋರ್ವಲಯೈಃ)

ತೋಳ್ಬಳೆಗಳೇನು ಇವುಗಳಿಂದ (ಕಿಸಲಯಿ) ಚಿಗುರುಗಳುಳ್ಳುದಾಗಿಯೂ, (ಫಣಿನಿ) ಆದಿಶೇಷನ ಮೇಲೆ (ನಿರ್ಭರ ಸುಪ್ತಂ) ಯಾವ ಯೋಚನೆಯೂ ಇಲ್ಲದೆ ನಿದ್ರಿಸಿರುವುದೂ ಆಗಿ ಹೀಗೆ ಇರುವುದರಿಂದ (ಕುಸುಮ ಭರಾಲಸೌ) ಹೂವುಗಳು ತುಂಬಿರುವುದರಿಂದ ಬಾಗಿರುವುವೂ (ಸ್ಫಟಿಕವೇದಿಶಯೌ) ಸ್ಫಟಿಕ ಶಿಲೆಯ ಜಗಲಿಯ ಮೇಲೆ ಮಲಗಿರುವುವೂ ಆದ (ಅಮರತರೋಃ ವಿಟಪೌ) ಕಲ್ಪಕವೃಕ್ಷದ ಎರಡು ಕೊಂಬೆಗಳನ್ನು (ಪರಂ) ಅತ್ಯಧಿಕವಾಗಿ (ಪರಿಹಸತ್) ಅಪಹಾಸ್ಯ ಮಾಡುವುವೂ ಆದ (ಪೃಥು) ಪುಷ್ಟವಾದ (ರಂಗ ಭುಜಃ ದೋರ್ದ್ವಯಂ) ಶ್ರೀ ರಂಗನಾಥನ ಭುಜದ್ವಯವನ್ನು (ಇಮಃ) ಆಶ್ರಯಿಸುತ್ತೇವೆ.

ಶ್ರೀ ರಂಗನಾಥನ ಎರಡು ಭುಜಗಳನ್ನೂ ಇಲ್ಲಿ ಅನುಸಂಧಾನ ಮಾಡಿದೆ. ಹಿಂದಿನ ಶ್ಲೋಕಕ್ಕೆ ವಿವರಣರೂಪವಾಗಿದೆ ಈ ಶ್ಲೋಕ. ಕಲ್ಪವೃಕ್ಷಕ್ಕಿಂತಲೂ ಅಧಿಕವಾದ ವೈಭವ ಇವಕ್ಕೆ ಇವೆ. ಕಲ್ಪವೃಕ್ಷದ ಕೊಂಬೆಗಳ ಚೆಲುವನ್ನು ಈ ಬಾಹುಗಳು ಮೀರಿಸಿವೆ. ಕಲ್ಪವೃಕ್ಷಕ್ಕೆ ಹೂಗಳು ಮೊದಲಾದವು ಇದ್ದರೆ ಈ ಬಾಹುಗಳಿಗೆ ರತ್ನಮಯವಾದ ಆಭರಣಗಳೇ ಹೂಗಳೂ ಚಿಗುರುಗಳೂ ಆಗಿವೆ. ಆ ಕಲ್ಪವೃಕ್ಷ ಸ್ಫಟಿಕದ ಜಗಲಿಯ ಮೇಲೆ ಬಾಗಿದ್ದರೆ ರಂಗನಾಥನಾಗುವ ಕಲ್ಪವೃಕ್ಷ ಆದಿಶೇಷನ ಮೇಲೆ ಶಯಿನಿಸಿದ್ದಾನೆ. ಬೇಡಿದವರಿಗೆ ಬೇಡಿದುದನ್ನು ಕರುಣಿಸುವ ಈ ಭುಜದ್ವಯಗಳು ಯಾವ ಆತಂಕವೂ ಇಲ್ಲದೆ ನಿರ್ಭರವಾಗಿ ನಿದ್ರಿಸಿವೆ ಎಂಬುದು ಸಾಭಿಪ್ರಾಯವಾಗಿದೆ. ಕಲ್ಪವೃಕ್ಷ ಹೂವಿನ ಭಾರಕ್ಕೆ ಬಾಗಿದ್ದರೆ ಈ ರಂಗನಾಥನೆಂಬ ಕಲ್ಪವೃಕ್ಷನು ಆ ಭಾರವನ್ನು ಶ್ರೀ ಸುದರ್ಶನ ಮೊದಲಾದವರಲ್ಲಿ ಒಪ್ಪಿಸಿ ನಿಶ್ಚಿಂತೆಯಾಗಿ ಶಯಿನಿಸಿದ್ದಾನೆ. ಶ್ರೀರಂಗನಾಥನೆಂಬುವ ಕಲ್ಪವೃಕ್ಷದ ಎರಡು ಸುಂದರವಾದ ಕೊಂಬೆಗಳಾಗಿ ಈ ಭುಜದ್ವಯ ಶೋಭಿಸಿದೆ.

ಮುದ್ರಕ್ಷಾವ್ರತಕೌತುಕೇ ಸುಕಟಕೇ ವಿಕ್ರಾಂತಿಕರ್ಣೇಜಪೇ
ಶಾರ್ಙ್ಗಜ್ಯಾಕಿಣಕರ್ಕಶಿಮ್ನಿ ಸುಮನ
ಸ್ಸ್ರಜಿಸ್ಮೋಹನೇ ಮಾರ್ದವೇ ।

ದೋರ್ದ್ವಂದ್ವಂ ಬಹುಶಃ ಪ್ರಲೋಭ್ಯ
ಕಮಲಾಲೀಲೋಪಧಾನಂ ಭವತ್
ತಚ್ಚಿತ್ರಾಲಕಮುದ್ರಿತಂ ವಿಜಯತೇ
ಶ್ರೀರಂಗಸಂಸಂಗಿನಃ॥ ॥೧೦೮॥

(ಮದ್ರಕ್ಷಾವ್ರತಕೌತುಕೇ) ನನ್ನನ್ನು ಕಾಪಾಡಬೇಕೆಂಬ ವ್ರತಕ್ಕೆ ಕಟ್ಟಿದ ಕಂಕಣ ಸೂತ್ರವಾಗಿ ಉಳ್ಳ (ಸುಕಟಕೇ) ಸುಂದರವಾದ ಬಳೆಯುಲ್ಲಿಯೂ, (ವಿಕ್ರಾಂತಿ ಕರ್ಣೇಜಪೇ) ಪರಾಕ್ರಮ ಸೂಚಕವಾದ (ಶಾರ್ಙ್ಗಜ್ಯಾಕಿಣ ಕರ್ಕಶಿಮ್ನಿ) ಶಾರ್ಙ್ಗವೆಂಬ ಧನುಸ್ಸಿನ ನಾಣಿನಿಂದ ಉಂಟಾದ ಕಲೆಯ ಬಲ ದಿಂದಲೂ, (ಸುಮನಃ ಸ್ರಜಸ್ಮ್ಯೋಹನೇ) ಪುಷ್ಪಮಾಲೆಯೇ ಇದು ಎಂದು ಮೋಹಿಸುವುದಕ್ಕೆ ತಕ್ಕುದಾದ (ಮಾರ್ದವೇ) ಸೌಕುಮಾರ್ಯದಿಂದಲೂ, (ಬಹುಶಃ) ಅನೇಕವಾಗಿ (ಪ್ರಲೋಭ್ಯ) ಆಶೆಯನ್ನುಂಟುಮಾಡಿ (ಕಮಲಾ) ಶ್ರೀದೇವಿಗೆ (ಲೀಲೋಪಧಾನಂ ಭವತ್) ಲೀಲಾರ್ಥವಾದ ತಲೆದಿಂಬಾಗಿ ಆಗುವುದೂ (ತಚ್ಚಿತ್ರ ಅಲಕಮುದ್ರಿತಂ) ಆ ದೇವಿಯ ವಿಚಿತ್ರವಾದ ಮುಂಗು ರುಳುಗಳ ಮುದ್ರೆಯನ್ನುಳ್ಳದೂ ಆದ (ಶ್ರೀರಂಗಸಂಸಂಗಿನಃ ದೋರ್ದ್ವಂದ್ವಂ) ಶ್ರೀ ರಂಗನಾಥನ ತೋಳುಗಳೆರಡೂ (ವಿಜಯತೇ) ಉತ್ಕರ್ಷವನ್ನು ಹೊಂದಿ ಬೆಳಗುತ್ತವೆ.

ಶ್ರೀ ರಂಗನಾಥನ ಬಾಹುಗಳು ಪರ್ಯಾಯವಾಗಿ ಶ್ರೀದೇವಿಗೆ ತಲೆ ದಿಂಬಾಗಿರುವುದಂತೆ. ದೇವಿಗೆ ಈ ಬಾಹುಗಳು ಲೀಲೋಪಧಾನವಾಗುವುದಕ್ಕೆ ಮೂರು ಕಾರಣಗಳನ್ನು ಹೇಳಿದ್ದಾರೆ. ಮೊದಲನೆಯದಾಗಿ ಈ ಬಾಹುಗಳು ಆಶ್ರಿತರನ್ನು ರಕ್ಷಿಸುವೆನೆಂಬ ವ್ರತವನ್ನು ಧರಿಸಿ ಕಂಕಣ ಕಟ್ಟಿದಂತೆ ಇವೆ ಯಂತೆ. ಆದುದರಿಂದ ಶ್ರೀದೇವಿಗೆ ಇವುಗಳಲ್ಲಿ ಪ್ರೀತಿ ಅಧಿಕ. ಅಲ್ಲದೆ ಶಾರ್ಙ್ಗಧನುಸ್ಸಿನ ನಾಣಿನ ಕಲೆ ಈ ತೋಳುಗಳಲ್ಲಿವೆ. ಪರಾಕ್ರಮ ಸೂಚಕ ವಾದುದು ಇದು. ಮತ್ತು ಈ ಬಾಹುಗಳು ಪುಷ್ಪಹಾಸ ಸುಕುಮಾರ ವಾಗಿಯೂ ಇವೆ. ಈಮೂರು ಕಾರಣಗಳಿಂದ ದೇವಿಯ ಈ ಬಾಹುಗಳನ್ನು

ಪರ್ಯಾಯವಾಗಿ ತನಗೆ ತಲೆದಿಂಬಾಗಿ ಮಾಡಿಕೊಳ್ಳುತ್ತಾಳೆ. ಅಂಥ ಭುಜ ದ್ವಯುಗಳು ಉತ್ಕೃಷ್ಟವಾಗಿ ಜಯಿಸಲಿ ಎಂದು ಇಲ್ಲಿ ಅನುಭವಿಸಿದೆ.

**ಭವಾರ್ತಾನಾಂ ವಕ್ತ್ರಾಮೃತಸರಸಿ ಮಾರ್ಗಂ ದಿಶದಿವ**
**ಸ್ವಯಂ ವಕ್ತ್ರೇಣೇದಂ ವರದಮಿತಿ ಸಂದರ್ಶಿತಮಿವ ।**
**ಕರಾಂಭೋಜಂ ಪಂಕೇರುಹವನರುಷಾ ಪಾಟಲಮಿವ**
**ಶ್ರಯಾಮಿ ಶ್ರೀ ರಂಗೇಶಯಿತುಃ**
**ಉಪಧಾನೀಕೃತಮಹಂ॥ ॥೧೦೯॥**

(ಭವಾರ್ತಾನಾಂ) ಸಂಸಾರ ತಾಪದಿಂದ ನರಳುವವರಿಗೆ (ವಕ್ತ್ರಾಮೃತ ಸರಸಿ) ಮುಖಮಂಡಲವೆಂಬುವ ಅಮೃತ ಸರೋವರವನ್ನು ಹೋಗಿ ಸೇರಲು (ಮಾರ್ಗಂ) ದಾರಿಯನ್ನು (ದಿಶದ್ ಇವಸ್ಥಿತಂ) ಉಪದೇಶಿಸುವಂತೆ ಇರುವುದೂ, (ವರದಂ ಇತಿ) ವರಗಳನ್ನೆಲ್ಲಾ ಕೊಡಬಲ್ಲದು ಎಂದು (ವಕ್ತ್ರೇಣ) ಮುಖಮಂಡಲದಿಂದ (ಸ್ವಯಂ) ತಾನೇ (ಸಂದರ್ಶಿತಂ ಇವ) ತೋರಿಸಿಕೊಟ್ಟ ಲ್ಪಟ್ಟಂತೆ ಇರುವುದೂ, (ಪಂಕೇರುಹವನರುಷಾ ಇವ) ತಾವರೆಯ ವನದ ಮೇಲಿನ ಕೋಪದಿಂದಲೋ ಎಂಬಂತೆ (ಪಾಟಲಂ) ಕೆಂಪಾಗಿರುವುದೂ, (ಉಪಧಾನೀಕೃತಂ) ತಲೆದಿಂಬಾಗಿ ಮಾಡಿಕೊಳ್ಳಲ್ಪಟ್ಟಿರುವುದೂ, ಆದ (ಶ್ರೀರಂಗೇಶಯಿತುಃ ಕರಾಂಭೋಜಂ) ಶ್ರೀ ರಂಗನಾಥನ ಕರಪದ್ಮವನ್ನು (ಅಹಂಶ್ರಯಾಮಿ) ನಾನು ಆಶ್ರಯಿಸುತ್ತೇನೆ.

ಇಲ್ಲಿ ಶ್ರೀ ರಂಗನಾಥನ ಬಲಗೈಯನ್ನು ಅನುಸಂಧಾನ ಮಾಡುತ್ತಿದ್ದಾರೆ. ಈ ಬಲಗೈ ಭಗವಂತನ ಮುಖಮಂಡಲವನ್ನು ತೋರುತಿರುವುದಷ್ಟೇ? ಅದನ್ನು ನೋಡಿದರೆ ಭಗವಂತನ ಮುಖಮಂಡಲವೆಂಬ ಅಮೃತಸರೋವರಕ್ಕೆ ದಾರಿ ತೋರುವಂತಿದೆ! ಸಂಸಾರ ತಾಪದಿಂದ ನೊಂದವರು ಅದನ್ನು ಸೇರಿ 'ಏಷ ಬ್ರಹ್ಮ ಪ್ರವಿಷ್ಟೋಽಸ್ಮಿ ಗ್ರೀಷ್ಮೇ ಶೀತಮಿವ ಹ್ರದಂ' ಎಂಬಂತೆ ತಾಪವನ್ನು ಹೋಗಲಾಡಿಸಿಕೊಳ್ಳಬಹುದು. ಭಗವಂತನ ಮುಖಮಂಡಲ

ವಾದರೋ ಆ ಬಲಗೈಯನ್ನೇ ತೋರಿಸಿಕೊಡುವಂತಿದೆ. 'ಈ ಬಲಗೈ ತಾನೇ ಎಲ್ಲಾ ವರಗಳನ್ನೂ ಕೊಡುತ್ತದೆ. ಅದನ್ನು ಆಶ್ರಯಿಸಿ' ಎಂದು ಶ್ರೀ ರಂಗ ನಾಥನ ಮುಖಮಂಡಲ ಆ ಕೈಯ್ಯನ್ನು ತೋರಿಸಿಕೊಡುತ್ತಿರುವಂತಿದೆ. ಆ ಹಸ್ತ ಕಾಂತಿಯಲ್ಲಿ ತಾವರೆಯನ್ನು ಧಿಕ್ಕರಿಸುತ್ತಿದೆ. ಭಗವಂತನಿಗೆ ಆ ಬಲಗೈ ದಿಂಬಾಗಿದೆ. ಅಂಥ ಕರಪದ್ಮವನ್ನು ಆಶ್ರಯಿಸುತ್ತೇನೆ.

**ಕಿರೀಟಂ ಶ್ರೀರಂಗೇಶಯಿತುಃ ಉಪಧಾನೀಕೃತಭುಜೋ**
**ವಿಧೀಶಾಧೀಶತ್ವಾದ್ಘಟಿತ ಇತಿ ಸಂಸ್ಪೃಶ್ಯ ವದತಿ ।**
**ನಿಹೀನಾನಾಂ ಮುಖ್ಯಂ ಶರಣಮಿತಿ ಬಾಹುಸ್ತದಿತರಃ**
**ಸ್ಫುಟಂ ಬ್ರೂತೇ ಪಾದಾಂಬುಜಯುಗಲಮಾಜಾನುನಿಹಿತಃ ॥೧೧೦॥**

(ಶ್ರೀ ರಂಗೇಶಯಿತುಃ) ಶ್ರೀ ರಂಗನಾಥನ (ಉಪಧಾನೀಕೃತ ಭುಜಃ) ತಲೆದಿಂಬಾಗಿ ಮಾಡಿಕೊಳ್ಳಲ್ಪಟ್ಟ ಶ್ರೀ ಹಸ್ತವು (ಕಿರೀಟಂ) ಕಿರೀಟವನ್ನು (ಸಂಸ್ಪೃಶ್ಯ) ಮುಟ್ಟಿತೋರಿ (ವಿಧಿ–ಈಶ–ಅಧೀಶತ್ವಾತ್ ಘಟತೇ ಇತಿವದತಿ) ಬ್ರಹ್ಮ ರುದ್ರರುಗಳಿಗೂ ಪ್ರಭುವಾದ ಕಾರಣ ಇವರಿಗೆ ಈ ಕಿರೀಟ ತಕ್ಕುದಾಗಿದೆ ಎಂದು ಹೇಳುತ್ತಿದೆ. (ಆಜಾನು) ಮೊಣಕಾಲಿನವರೆಗೆ (ನಿಹಿತಃ) ನೀಳವಾಗಿ ಇಡಲ್ಪಟ್ಟಿರುವ (ತದಿತರಃ ಬಾಹುಃ) ಮತ್ತೊಂದು ಶ್ರೀ ಹಸ್ತವಾದುದು (ಪಾದಾಂಬುಜ ಯುಗಲಂ) ಪಾದಕಮಲಗಳೆರಡನ್ನು (ಸಂಸ್ಪೃಶ್ಯ) ಮುಟ್ಟಿ ತೋರಿಸಿ (ನಿಹೀನಾನಾಂ) ನಿರ್ಗತಿಕರಿಗೆ (ಮುಖ್ಯಂಶರಣಂ ಇತಿ) ಈ ಪಾದಗಳೇ ಪ್ರಧಾನವಾದ ಗತಿ ಎಂದು (ಸ್ಫುಟಂ ಬ್ರೂತೇ) ಸ್ಪಷ್ಟವಾಗಿ ಹೇಳುತ್ತಿದೆ.

ಶ್ರೀ ರಂಗನಾಥನ ಎರಡು ಕೈಗಳನ್ನೂ ಸೇರಿಸಿ ಇಲ್ಲಿ ಅನುಭವಿಸುತ್ತಿದ್ದಾರೆ. ಈ ಎರಡು ಕೈಗಳೂ ಮೌನವಾಗಿದ್ದರೂ ತಮ್ಮ ಚಿಹ್ನೆಗಳಿಂದಲೇ ತತ್ತ್ವವನ್ನು ತಿಳಿಸುತ್ತಿವೆ. ಬಲಗೈ ಭಗವಂತನ ಪರತ್ವವನ್ನೂ ಎಡಗೈ ಅವನ ಸೌಲಭ್ಯ ವನ್ನೂ ತಿಳಿಸುತ್ತದೆ. ಬಲಗೈ ಕಿರೀಟವನ್ನು ಮುಟ್ಟಿ 'ಸರ್ವೇಶ್ವರತ್ವ ಸೂಚಕವಾದ ಈ ಕಿರೀಟವನ್ನು ಧರಿಸಿರುವ ಸ್ವಾಮಿ ಪರಾತ್ಪರನಾದವನು.

ಅವನಿಗೇ ಈ ಕಿರೀಟ ತಕ್ಕುದ್ದಾಗಿದೆ' ಎಂದು ಭಗವಂತನ ಪರತ್ವವನ್ನು ತಿಳಿಸುತ್ತದೆ. ಮತ್ತೊಂದು ಕೈಯಾದುದು ಮೊಣಕಾಲಿನವರೆಗೆ ನೀಡಿಕೊಂಡು ಭಗವಂತನ ಪಾದಕಮಲಗಳನ್ನು ಮುಟ್ಟಿತೋರಿಸುತ್ತಾ 'ಈ ಪಾದಗಳೇ ಅಶರಣ್ಯರಿಗೆ ಗತಿ. ಈ ಪಾದಗಳನ್ನು ಆಶ್ರಯಿಸಿ ಬದುಕಿ' ಎಂದು ಅವನ ಪರಮಸೌಲಭ್ಯವನ್ನು ಸ್ಪಷ್ಟವಾಗಿ ತಿಳಿಸುತ್ತದೆ. ಈರೀತಿಯಲ್ಲಿ ಶ್ರೀ ರಂಗನಾಥನ ಪರತ್ವ ಮತ್ತು ಸೌಲಭ್ಯಗಳನ್ನು ಇವು ತೋರುತ್ತಿವೆ.

**ಮಲಯಜಶಶಿಲಿಪ್ತಂ ಮಾಲತೀದಾಮತಲ್ಪಂ**
**ಸುಮಣಿಸರವಿತಾನಂ ಕೌಸ್ತುಭಸ್ವಸ್ತಿದೀಪಂ ।**
**ದನುಜವೃಷವಿಷಾಣೋಲ್ಲೇಖಚಿತ್ರಂ ಚ ಲಕ್ಷ್ಮೀ**
**ಲಲಿತಗೃಹಮುಪಾಸೇ ರಂಗಸರ್ವಂಸಹೋರಃ ॥** ॥೧೧೧॥

(ಮಲಯಜ ಶಶಿಲಿಪ್ತಂ) ಚಂದನದಿಂದಲೂ ಪಚ್ಚಕರ್ಪೂರದಿಂದಲೂ ಲಿಪ್ತವಾದುದೂ, (ಮಾಲತೀದಾಮತಲ್ಪಂ) ಮೊಲ್ಲೆಯ ಹೂಗಳ ಹಾರಗಳನ್ನೇ ಶಯನವನ್ನಾಗಿ ಉಳ್ಳದೂ, (ಸುಮಣಿಸರವಿತಾನಂ) ಶ್ರೇಷ್ಠವಾದ ರತ್ನಗಳ ಸರಗಳ ಮೇಲ್ಕಟ್ಟನ್ನುಳ್ಳುದೂ, (ಕೌಸ್ತುಭಸ್ವಸ್ತಿದೀಪಂ) ಕೌಸ್ತುಭವೆನ್ನುವ ಮಂಗಳ ದೀಪವನ್ನುಳ್ಳುದೂ (ದನುಜವೃಷ) ಅಸುರರುಗಳಾದ ವೃಷಭಗಳ (ವಿಷಾಣ) ಕೊಂಬುಗಳಿಂದಾದ (ಉಲ್ಲೇಖ) ರೇಖೆಗಳನ್ನು (ಚಿತ್ರಂಚ) ಚಿತ್ರಗಳನ್ನಾಗಿ ಉಳ್ಳುದೂ ಆಗಿರುವ (ರಂಗ ಸರ್ವಂಸಹೋರಃ) ಶ್ರೀ ರಂಗನಾಥನ ವಕ್ಷಃಸ್ಥಲವನ್ನು (ಲಕ್ಷ್ಮೀಲಲಿತಗೃಹಂ ಉಪಾಸೇ) ಶ್ರೀದೇವಿಯ ವಿಲಾಸ ಮಂದಿರವೆಂದು ಭಾವಿಸಿ ಅನುಸಂಧಾನ ಮಾಡುತ್ತೇನೆ.

ಭಗವಂತನ ವಕ್ಷಃಸ್ಥಲ ಶ್ರೀದೇವಿಯ ವಿಹಾರ ಮಂದಿರವಾಗಿದೆ. ವಿಹಾರ ಮಂದಿರದಲ್ಲಿ ಚಂದನಾದಿಗಳನ್ನು ಲೇಪಿಸುವಂತೆ ಭಗವಂತನ ವಕ್ಷಃಸ್ಥಲ ಚಂದನಾದಿಗಳಿಂದ ಅಲಂಕೃತವಾಗಿದೆ. ಈ ವಿಹಾರ ಮಂದಿರದಲ್ಲಿ

ಮೊಲ್ಲೆಯ ಹೂವಮಾಲೆಗಳೇ ಶಯನಗಳಾಗಿವೆ. ವಿಹಾರಮಂದಿರದ ಮೇಲ್ಕಟ್ಟು ಆದರೋ ಅನರ್ಘವಾದ ರತ್ನಗಳ ಹಾರಗಳೇ ಆಗಿವೆ. ವಿಹಾರಮಂದಿರಕ್ಕೆ ದೀಪವಿರಬೇಕಲ್ಲಾ! ಕೌಸ್ತುಭಮಣಿಯೇ ಮಂಗಳ ದೀಪ. ಚಿತ್ರಗಳು ವಿಹಾರಮಂದಿರದಲ್ಲಿರುವಂತೆ ಭಗವಂತನ ವಕ್ಷಃಸ್ಥಲದಲ್ಲಿ ಶತ್ರುಗಳಾದ ರಾಕ್ಷಸರ ಕೊಂಬುಗಳಿಂದಾದ ಗುರುತುಗಳಿವೆ. ಈ ರೀತಿಯಲ್ಲಿ ಭಗವಂತನ ದಿವ್ಯ ವಕ್ಷಃಸ್ಥಲ ಶ್ರೀದೇವಿಯ ವಿಲಾಸಮಂದಿರದಂತೆ ಕಂಗೊಳಿಸುತ್ತದೆ.

**ಹಾರಸ್ಫಾರಿತಫೇನಂ ಅಂಶುಲಹರೀಮಾಲರ್ಧಿ ಮುಕ್ತಾಫಲ-**
**ಶ್ರೇಣೀಶೀಕರ ದುರ್ದಿನಂ ತತ ಇತೋ ವ್ಯಾಕೀರ್ಣರತ್ನೋತ್ಕರಂ ।**
**ಆವಿಃಕೌಸ್ತುಭಲಕ್ಷ್ಮಿ ರಂಗವಸತೇಃ ನಿಸ್ಸೀಮಭೂಮಾದ್ಭುತಂ**
**ವಕ್ಷೋ ಮಂದರ-ಮಥ್ಯಮಾನ-ಜಲಧಿಶ್ಲಾಘಂ**
**ವಿಲೋಕೇಮಹಿ ॥ ॥೧೧೨॥**

(ಹಾರ ಸ್ಫಾರಿತಫೇನಂ) ಮುಕ್ತಾಹಾರಗಳನ್ನೇ ಪುಷ್ಟವಾದ ನೊರೆಯನ್ನಾಗಿ ಹೊಂದಿ, (ಅಂಶುಲಹರೀ ಮಾಲರ್ಧಿ) ಕಾಂತಿಗಳೆಂಬುವ ಅಲೆಗಳ ಶ್ರೇಣಿಯ ಸಮೃದ್ಧಿಯನ್ನು ಹೊಂದಿದುದಾಗಿಯೂ, (ಮುಕ್ತಾಫಲ ಶ್ರೇಣೀ ಶೀಕರ ದುರ್ದಿನಂ) ಮುತ್ತುಗಳ ಸಾಲುಗಳೆಂಬ ಜಲಬಿಂದುಗಳಿಂದ ವ್ಯಾಪಿಸಲ್ಪಟ್ಟುದಾಗಿಯೂ (ಇತಃತತಃ) ಇತ್ತ ಅತ್ತ (ವ್ಯಾಕೀರ್ಣರತ್ನೋತ್ಕರಂ) ಚೆದುರಿರುವ ರತ್ನ ಸಮೂಹಗಳನ್ನುಳ್ಳುದಾಗಿಯೂ, (ಆವಿಃಕೌಸ್ತುಭಲಕ್ಷ್ಮಿ) ಕೌಸ್ತುಭಮಣಿಯೂ ಶ್ರೀದೇವಿಯೂ ತೋರಿಬಂದುದಾಗಿ (ನಿಃಸೀಮ ಭೂಮಾದ್ಭುತಂ) ಎಲ್ಲೆಯಿಲ್ಲದಹಿರಿಮೆಯಿಂದ ಅದ್ಭುತವಾಗಿರುವ (ರಂಗವಸತೇಃವಕ್ಷಃ) ಶ್ರೀ ರಂಗನಾಥನ ವಕ್ಷಸ್ಥಲವು (ಮಂದರ ಮಥ್ಯಮಾನ ಜಲಧಿಶ್ಲಾಘಂ) ಮಂದರ ಪರ್ವತದಿಂದ ಕಡೆಯಲ್ಪಟ್ಟ ಸಮುದ್ರದೊಡನೆಸಮನಾದ ಹಿರಿಮೆಯನ್ನು ಹೊಂದಿದುದಾಗಿ (ವಿಲೋಕೇಮಹಿ) ನಾವು ಸಂದರ್ಶಿಸುತ್ತೇವೆ.

ಸ್ವಾಮಿಯ ವಕ್ಷಃಸ್ಥಲವು ಮಥನ ಮಾಡಲ್ಪಟ್ಟ ಕ್ಷೀರಸಾಗರದಂತೆ ಇದೆಯೆಂದು ಅನುಭವಿಸಿದೆ. ಕ್ಷೀರಸಾಗರದಲ್ಲಿ ನೊರೆಯಿದ್ದಂತೆ ಮುಕ್ತಾ

ಹಾರಗಳು ಶೋಭಿಸಿವೆ. ಮುತ್ತುರತ್ನಗಳ ಕಾಂತಿಯು ಹರಹೇ ಅಲೆ ಗಳಂತಿವೆ. ಹೇಗೆ ಸಾಗರದಲ್ಲಿ ರತ್ನಗಳು ಅಲ್ಲಲ್ಲಿ ಚೆದರಿರುವುವೋ ಹಾಗೆ ಸ್ವಾಮಿಯ ವಕ್ಷಃಸ್ಥಳದಲ್ಲಿಯೂ ಆಭರಣಗಳ ರತ್ನಗಳು ಹರಡಿವೆ. ಕೌಸ್ತುಭ ಮಣಿ ಮತ್ತು ಶ್ರೀದೇವಿ ಇವರು ಸಮುದ್ರದಿಂದ ಬಂದವರು. ಇಲ್ಲಿ ಸ್ವಾಮಿಯ ವಕ್ಷಃಸ್ಥಲದಲ್ಲಿ ಇವರಿದ್ದಾರೆ. ಹೀಗಾಗಿ ಮಥಿಸಲ್ಪಟ್ಟ ಕ್ಷೀರ ಸಾಗರಕ್ಕೂ ಸ್ವಾಮಿಯ ವಕ್ಷಃಸ್ಥಲಕ್ಕೂ ಸಾಮ್ಯವಿದೆ ಎಂದು ಇಲ್ಲಿ ಅನು ಭವಿಸಿದೆ. 'ಕರುಮಾ ಮಣಿಪ್ಪೂಣ್ ಕುಲಾವಿತಿಹಳ್ಳುಂ ತಿರುಮಾರ್ವಿ ರುಂದವಾ ಕಾಣೀರೇ' ಎಂಬುದು ಪೆರಿಯಾಳ್ವಾರ್ ಅವರ ಅನುಭವ.

**ವಕ್ಷಃಸ್ಥಲ್ಯಾಂ ತುಲಸಿಕಮಲಾಕೌಸ್ತುಭೈರ್ವೈಜಯಂತೀ**
**ಸರ್ವೇಶತ್ವಂ ಕಥಯತಿತರಾಂ ರಂಗಧಾಮ್ನಃ ತದಾಸ್ತಾಂ ।**
**ಕೂರ್ಮವ್ಯಾಘ್ರೀನಖಪರಿಮಿಲತ್ ಪಂಚಹೇತೀ ಯಶೋದಾ**
**ನದ್ಧಾ ಮೌಗ್ಧ್ಯಾಭರಣಮಧಿಕಂ ನಸ್ಸಮಾಧಿಂ ಧಿನೋತಿ ॥೧೧೩॥**

(ರಂಗಧಾಮ್ನಃ) ಶ್ರೀ ರಂಗನಾಥನ (ವಕ್ಷಃಸ್ಥಲ್ಯಾಂ) ವಕ್ಷಃಸ್ಥಲದಲ್ಲಿ (ತುಲಸಿ ಕಮಲಾಕೌಸ್ತುಭೈಃ) ತುಲಸಿಮಾಲೆ, ಶ್ರೀದೇವಿ, ಕೌಸ್ತುಭಮಣಿ ಇವುಗಳೊಡನೆ ಕೂಡಿ ಇರುವ (ವೈಜಯಂತೀ) ವನಮಾಲೆಯು (ಸರ್ವೇ ಶತ್ವಂ) ಇವನು ಸರ್ವಸ್ವಾತ್ಮಪರನೆಂಬುವುದನ್ನು (ಕಥಯತಿತರಾಂ) ಚೆನ್ನಾಗಿ ಪ್ರಕಾಶಪಡಿಸುತ್ತದೆ. (ತತ್ ಆಸ್ತಾಂ) ಅದು ಹಾಗೆ ಇರಲಿ. (ಮೌಗ್ಧ್ಯಾ ಭರಣಂ) ಎಳೆಯತನದಲ್ಲಿ ಸದೃಶವಾಗುವ ಆಭರಣವಾದುದೂ (ಯಶೋದಾ ನದ್ಧಾ) ಯಶೋದಾ ದೇವಿಯಿಂದ ಇಡಲ್ಪಟ್ಟುದೂ ಆದ (ಕೂರ್ಮ-ವ್ಯಾಘ್ರೀ ನಖ-ಪರಿಮಿಲತ್ ಪಂಚಹೇತೀ) ಆಮೆಯ ತಾಲಿ, ವ್ಯಾಘ್ರನಖದೊಡನೆ ಕೂಡಿದ ಪಂಚಾಯುಧಗಳ ಆಭರಣವಾದುದು (ನಃ) ನಮ್ಮ (ಸಮಾಧಿಂ) ಚಿತ್ತವೃತ್ತಿಯನ್ನು (ಅಧಿಕಂ ಧಿನೋತಿ) ಅಧಿಕವಾಗಿ ಸಂತೋಷಪಡಿಸುತ್ತದೆ.

ಇಲ್ಲಿ ಭಗವಂತನ ವಕ್ಷಃಸ್ಥಲದಲ್ಲಿ ಪರತ್ವವನ್ನೂ ಸೌಲಭ್ಯವನ್ನೂ ಅನುಭವಿಸಿದ್ದಾರೆ. ಭಗವಂತನ ವಕ್ಷಃಸ್ಥಲದಲ್ಲಿ ಶ್ರೀದೇವಿ ತುಲಸೀಮಾಲೆ,

ಕೌಸ್ತುಭಮಣಿ, ವೈಜಯಂತೀ ಮೊದಲಾದವು ವಿರಾಜಿಸಿ ಆವನು ಸರ್ವಸ್ವಾತ್ವರನೆಂಬುದನ್ನು ತೋರುತ್ತವೆ. ಇವುಗಳ ಜೊತೆಗೆ ಆ ವಕ್ಷಃಸ್ಥಲದಲ್ಲಿ ಯಶೋದಾದೇವಿಯು ಇಟ್ಟ ಆಮೆಯತಾಲಿ, ವ್ಯಾಘ್ರನಖದೊಡನೆ ಕೂಡಿದ ಪಂಚಾಯುಧಗಳ ಆಭರಣಗಳೂ ವಿರಾಜಿಸಿವೆ. ಇವು ಆ ಭಗವಂತನ ಸೌಲಭ್ಯವನ್ನು ಸೂಚಿಸುತ್ತವೆ. ಸ್ವಾಮಿಯ ಅರ್ಚಾವತಾರದಲ್ಲಿ ವಿಭವಾವತಾರದ ಅನುಭವವನ್ನೂ ಹೊಂದಲಾಗಿದೆ. 'ಅಕ್ಕುವಡಮುಡುತ್ತು ಆಮೈತ್ತಾಲಿಪೂಂಡ ಅನಂದಶಯನನ್' ಎಂದು ಪೆರಿಯಾಳ್ವಾರ್ ಅವರು ಅನುಭವಿಸಿದ್ದಾರೆ. ಯಾದವಾಭ್ಯುದಯದಲ್ಲಿ ವೇದಾಂತ ದೇಶಿಕರು 'ಗ್ರಹಾದಿದೋಷಾನ್ ಅಪಹಂತುಕಾಮಾ ಗೋಪ್ತುಃಸತಾಂ ಗೋಪತಯಃ ಸಮೇತಾಃ। ಸುವರ್ಣಸೂತ್ರಗ್ರಥಿತಾಭಿರಾಮಾಂ ಪಂಚಾಯುಧೀಂ ಆಭರಣಂ ಬಬಂಧುಃ॥' ಎಂದು (ಯಾದವಾಭ್ಯುದಯ4-9) ಅನುಭವಿಸಿರುವುದನ್ನು ಕಾಣಬಹುದು.

**ಕಿಯಾನ್ಭರೋ ಮಮ ಜಗದಂಡಮಂಡಲೀತಿ**
**ಅತೃಪ್ತಿತಃ ಕೃಶಿತಮಿವೋದರಂ ವಿಭೋಃ ।**
**ರಿರಕ್ಷಿಷೋಚಿತ-ಜಗತೀಪರಂಪರಾಂ**
**ಪರಾಮಿವ ಪ್ರಥಯತಿ ನಾಭಿಪಂಕಜಂ ॥** ॥೧೧೪॥

(ವಿಭೋಃ) ಶ್ರೀ ರಂಗನಾಥನ (ಉದರಂ) ಹೊಟ್ಟೆಯು (ಜಗದಂಡ ಮಂಡಲೀ) ಹದಿನಾಲ್ಕು ಲೋಕಗಳನ್ನುಳ್ಳ ಅಂಡ ಸಮೂಹವು (ಮಮ) ನನಗೆ (ಕಿಯಾನ್ ಭರಃ ಇತಿ) ಎಷ್ಟು ಭಾರ ಎನ್ನುವ (ಅತೃಪ್ತಿತಃ) ಮನದ ಕೊರೆಯಿಂದಾಗಿ (ಕೃಶಿತಂ ಇವ) ಕೃಶವಾದ ಹಾಗೆ, (ನಾಭಿಸಂಕಜಂ) ನಾಭಿಯಕಮಲವು (ಪರಾಂ) ಬೇರೆಯಾದ (ರಿರಕ್ಷಿಷೋಚಿತ ಜಗತೀ ಪರಂಪರಾಂ) ತಾನು ರಕ್ಷಣೆ ಮಾಡಲು ತಕ್ಕುದಾದ ಲೋಕ ಸಮೂಹವನ್ನು (ಪ್ರಥಯತಿ ಇವ) ಪ್ರಕಾಶಿಸುವಂತೆ ಇದೆ.

ಪೂರ್ವಾರ್ಧದಿಂದ ಉದರವನ್ನೂ ಉತ್ತರಾರ್ಧದಿಂದ ನಾಭಿಕಮಲವನ್ನೂ ವರ್ಣಿಸಿದೆ. ಮನಸ್ಸಿನಲ್ಲಿ ಅತೃಪ್ತಿ ಇದ್ದರೆ ಉಂಡುದು ಮೈಗೆ

ಹತ್ತುವುದಿಲ್ಲ. ಆದರಿಂದ ಉದರ ಕೃಶವಾಗುತ್ತದೆ. 'ಮುತ್ತಿಲಂಗು ಕಾರಾರ್ ತಿಣ್ ಕಡಲೇಳುಂ ಮಲೈಯೇಳುಂ ಇವುಲಹೇಳುಂ ಉಂಡುಂ ಆರಾದೆನ್ರು ಇರುಂದಾನ್ನೈ ಕಂಡದು ತೆನ್ನರಂಗತ್ತೈ' ಎಂದು ತಿರುಮಂಗೈ ಆಳ್ವಾರವರು (6–3–2) ಹೇಳಿದಂತೆ 'ದೊಡ್ಡ ಉದರ ಪಡೆದ ನಮಗೆ ಇದು ಒಂದು ಎಣೆಯೇ' ಎಂದು ಅವನು ಭಾವಿಸುವುದರಿಂದ ಉದರ ಕೃಶವಾಗಿದೆ. ಮಹಾ ಪುರುಷನಿಗೆ ಉದರ ಕೃಶವಾಗಿರುವುದು ಲಕ್ಷಣ.

ಭಗವಂತನ ನಾಭಿ ಅವನ ಅತೃಪ್ತಿಯನ್ನು ಹೊಗಲಾಡಿಸಿ ಮೇಲೆ ಮೇಲೆ ಅವನ ರಕ್ಷಣೆಯನ್ನು ಪಡೆಯಬಹುದಾದ ಜಗತ್ತುಗಳ ಪರಂಪರೆಯನ್ನು ಪ್ರಕಾಶಿಸುತ್ತದೆ. ಸಮಸ್ತವಾದ ಲೋಕಗಳನ್ನೂ ತನ್ನ ಉದರದಲ್ಲಿಯೇ ಅವನು ಇಟ್ಟುಕೊಂಡಿದ್ದುದನ್ನು ಆ ನಾಭಿ ಅವುಗಳನ್ನು ಹೊರಕ್ಕೆ ತಂದು ತೋರಿಸುತ್ತಾ ಅವನು ಅತೃಪ್ತಿಪಡಬೇಕಾದುದಿಲ್ಲ ಎಂದು ಅವನಿಗೆ ಸಮಾಧಾನವನ್ನು ಸೂಚಿಸುವಂತಿದೆ.

ತ್ರಿವಿಧಚಿದಚಿದ್ವ್ಯೂಹಂ ತುಂದಾವಲಂಬಿ ವಲಿತ್ರಯಂ
ವಿಗಣಯದಿವೈಶ್ವರ್ಯಂ ವ್ಯಾಖ್ಯಾತಿ ರಂಗಮಹೇಶಿತುಃ ।
ಪ್ರಣತವಶತಾಂ ಬ್ರೂತೇ ದಾಮೋದರತ್ವಕರಃ ಕಿಣಃ
ತದುಭಯಗುಣಾಕೃಷ್ಟಂ ಪಟ್ಟಂ ಕಿಲೋದರಬಂಧನಂ ॥ ॥೧೧೫॥

(ರಂಗಮಹೇಶಿತುಃ) ಶ್ರೀ ರಂಗನಾಥನ (ತುಂದಾವಲಂಬಿ) ಉದರವನ್ನು ಅವಲಂಬಿಸಿರುವ (ವಲಿತ್ರಯಂ) ವಲಿತ್ರಯವು ಎಂದರೆ ಮೂರು ಗೆರೆಗಳು (ತ್ರಿವಿಧ ಚಿದಚಿದ್ವ್ಯೂಹಂ) ಮೂರು ಬಗೆಯಾದ ಚೇತನರು ಮತ್ತು ಮೂರು ಬಗೆಯಾದ ಅಚೇತನದ ಸಮೂಹವನ್ನು (ವಿಗಣಯದಿವ) ಎಣಿಸುವಂತೆ ಇರುತ್ತಿದ್ದು (ಐಶ್ವರ್ಯಂ) ಸಕಲ ಚೇತನಾಚೇತನರನ್ನು ನಿಯಮಿಸುವ ಐಶ್ವರ್ಯವನ್ನು (ವ್ಯಾಖ್ಯಾತಿ) ವ್ಯಾಖ್ಯಾನ ಮಾಡುತ್ತದೆ. (ದಾಮೋದರತ್ವಕರಃ ಕಿಣಃ) 'ದಾಮೋದರ' ಎಂಬುವ ಶ್ರೀ ನಾಮವನ್ನು ಹೊಂದುವುದಕ್ಕೆ

ಕಾರಣವಾದ ಹಗ್ಗದ ಗುರುತು (ಕಲೆ) (ಪ್ರಣತವಶತಾಂಬ್ರೂತೇ) ಆಶ್ರಿತ ಪರಾಧೀನನೆಂಬುದನ್ನು ಹೇಳುತ್ತಿದೆ . (ಉದರ ಬಂಧನಂ) ಉದರಬಂಧನ ಅಥವಾ ಒಡ್ಯಾಣವೆಂಬುದು (ತದುಭಯ ಗುಣಾಕೃಷ್ಟಂ ಪಟ್ಟಂಕಿಲ) ಮೇಲೆ ಹೇಳಿದ ಪರತ್ವ ಮತ್ತು ಸೌಲಭ್ಯಗಳೆಂಬ ಎರಡು ಗುಣಗಳಿಗೂ ಕಟ್ಟಿದ ಗುರುತಿನಂತೆ ಇದೆ.

ಈ ಮೂರು ರೇಖೆಗಳು ಇರುವೆಡೆಯಲ್ಲಿಯೇ ಸೌಲಭ್ಯವೆನ್ನುವ ಗುಣ ವನ್ನು ತಿಳಿಸುವ ರೇಖೆಯೊಂದೂ ಇದೆ ಎಂದು ತಿಳಿಸಿದ್ದಾರೆ. ಭಗವಂತನ ಉದರದಲ್ಲಿ ಪ್ರಕಾಶಿಸುವ ವಲಿತ್ರಯ ನಿತ್ಯ, ಮುಕ್ತ ಮತ್ತು ಬದ್ಧ ಎಂಬ ಮೂರ ಬಗೆಯಾದ ಚೇತನರುಗಳ ಹಾಗೂ ತ್ರಿಗುಣದ್ರವ್ಯ, ಕಾಲ ಮತ್ತು ಶುದ್ಧ ಸತ್ವ ಎಂಬ ಮೂರು ಬಗೆಯಾದ ಅಚೇತನಗಳ ಸಮೂಹವನ್ನು ಎಣಿಸಿ ತೋರುವಂತಿದ್ದು ಭಗವಂತನ ಸರ್ವ ನಿಯಾಮಕತ್ವವನ್ನು ತೋರು ವಂತಿದೆ. ಹಾಗೆಯೇ ಆ ಉದರದಲ್ಲಿ ಅವನ ಪರಮ ಸೌಲಭ್ಯವನ್ನು ತೋರಿ ಸುವ ಗುರುತೊಂದೂ ಇದೆ. ಅದು ಅವನು ಕೃಷ್ಣನಾಗಿ ಅವತರಿಸಿದಾಗ ಯಶೋದಾದೇವಿ ಅವನನ್ನು ಒರಳಿಗೆ ಸೇರಿಸಿ ಕಟ್ಟಿದಾಗ ಆದ ಗುರುತು.'ಮೆಲ್ ತೋಳ ಕಡೈವೆಣ್ಣೆಯ್ ಉಂಡಾಯ್ಯೆ ತಾಂಬೇಕೊಂಡು ಆರ್ತತಝ್ಂಬು' ಎಂದು ಪೊಯ್‌ಹೈ ಆಳ್ವಾರ್ರವರೂ, 'ವೆಣ್ಣೆಯ್ ಕಳವಿನಿಲ್ ಉರವಿಡ್ಕೈ ಅಪ್ಪೊಂಡು ಎತ್ತಿರಂ ಉರಲಿನೋಡು ಇಣೈಂದಿರುಂದು ಏಂಗಿಯ ವೆಳವೇ' ಎಂದು ನಮ್ಮಾಳ್ವಾರ್ರವರೂ ಅವನ ಈ ಸೌಲಭ್ಯ ಗುಣಕ್ಕೆ ಪರವಶರಾಗಿದ್ದಾರೆ.

**ತ್ರಯೋದೇವಾಸ್ತುಲ್ಯಾಃ ತ್ರಿತಯಮಿದಮದ್ವೈತಂ ಅಧಿಕಂ**
**ತ್ರಿಕಾದಸ್ಮಾತ್ತತ್ತ್ವಂ ಪರಮಿತಿ ವಿತರ್ಕಾನ್ ವಿಘಟಯನ್ ।**
**ವಿಭೋಃ ನಾಭೀಪದ್ಮೋ ವಿಧಿಶಿವನಿದಾನಂ ಭಗವತಃ**
**ತದನ್ಯದ್ಭ್ರೂಭಂಗೀಪರವದಿತಿ ಸಿದ್ಧಾಂತಯತಿ ನಃ ॥ ॥೧೧೬॥**

(ತ್ರಯೋದೇವಾಸ್ತುಲ್ಯಾಃ) ತ್ರಿಮೂರ್ತಿಗಳು ಸಮಪ್ರಧಾನರೆಂದೂ, (ಇದಂ ತ್ರಿತಯಂ ಅದ್ವೈತಂ) ಈ ಮೂರು ಮೂರ್ತಿಗಳೂ ಒಂದೇ ಎಂದೂ, (ಅಸ್ಮಾತ್ ತ್ರಿಕಾತ್ ಅಧಿಕಂ ತತ್ವಂಪರಂ) ಈ ಮೂರ್ತಿತ್ರಯಕ್ಕಿಂತ ಮೇಲ್ಪಟ್ಟ ನಾಲ್ಕನೆಯದು ಪರಬ್ರಹ್ಮ (ಇತಿ) ಹೀಗೆ ಹೇಳುವ (ವಿತರ್ಕಾನ್)

ವಿಪ್ರತಿಪತ್ತಿಗಳನ್ನು (ವಿಘಟಯನ್) ಹೋಗಲಾಡಿಸುವುದಾಗಿ (ವಿಧಿಶಿವನಿದಾನಂ) ಬ್ರಹ್ಮರುದ್ರರಿಗೆ ಮೂಲಕಾರಣವಾಗಿರುವ (ಭಗವತಃ ವಿಭೋಃನಾಭೀಪದ್ಮಃ) ಭಗವಂತನಾದ ಶ್ರೀ ರಂಗನಾಥನ ನಾಭಿಕಮಲವು (ತದನ್ಯತ್) ಆ ಭಗವಂತನನ್ನು ಬಿಟ್ಟು ಬೇರೆ ಎಲ್ಲವೂ (ಭ್ರೂಭಂಗೀಪರವತ್ ಇತಿ) ಅವನ ಹುಬ್ಬಿನ ಚಲನೆಗೆ ಅಧೀನವಾಗಿದೆ ಎಂದು (ನಃ) ನಮಗೆ (ಸಿದ್ಧಾಂತ ಯತಿ) ನಿಶ್ಚಯಮಾಡಿಕೊಡುತ್ತದೆ.

ನಾಭೀಕಮಲವು ಭಗವಂತನ ಪರತ್ವವನ್ನೂ ಬ್ರಹ್ಮರುದ್ರಾದಿಗಳ ಅಪರತ್ವವನ್ನೂ ಕೈಯಲ್ಲಿ ತೋರಿಸಿಕೊಡುತ್ತದೆ. ರುದ್ರನನ್ನು ಬ್ರಹ್ಮದೇವ ಸೃಜಿಸಿದ. ಆ ಬ್ರಹ್ಮದೇವನನ್ನು ಸೃಜಿಸಿದವನು ಭಗವಂತನಾದ ಶ್ರೀಮನ್ನಾರಾಯಣ. ಪರಮಾತ್ಮನ ನಾಭೀಕಮಲವು 'ಬ್ರಹ್ಮರುದ್ರಾದಿಗಳಿಗೆ ಭಗವಂತನು ಮೂಲಕಾರಣ. ಆದುದರಿಂದ ಈ ನಾರಾಯಣನೇ ಪರತತ್ವ'ವೆಂದು ಲೋಕಕ್ಕೆ ಉದ್ಘೋಷಿಸುವಂತಿದೆ. ಸರ್ವಕಾರಣನಾದ ಭಗವಂತನ ಶಾಸನಕ್ಕನುಸಾರವಾಗಿ ಉಳಿದವರೆಲ್ಲರೂ ನಡೆದುಕೊಳ್ಳುವರೆಂಬುದನ್ನು ಈ ನಾಭಿಕಮಲ ತೋರುತ್ತಿದೆ. 'ನಾನ್ಮುಹನ್ನೈ ನಾರಾಯಣನ್ ಪಡೈತ್ತಾನ್' ನಾನ್ಮುಹನುಂ ತಾನ್ ಮುಹಮಾಯ್ ಶಂಕರನೈತಾನ್ ಪಡೈತ್ತಾನ್' ಎಂದು ತಿರುಮಳಿಶೈ ಆಳ್ವಾರ್ರವರೂ, 'ಮುದಲಾಂ ತಿರು ಉರುವಂ ಮೂನ್ರೆನ್ಬರ್, ಒನ್ರೇಮುದಲಾಹುಂ ಮೂನ್ರುಕ್ಕುಂ ಎನ್ಬರ್ ಮುದಲ್ವಾ ನಿಹರಿಲಹು ಕಾರ್ ಉರುವಾ ನಿನ್ ಅಹತ್ತದನ್ರೇ ಪುಹರಿಲಹು ತಾಮರೈಯಿನ್ ಪೂ' ಎಂದು ಪೆರಿಯತಿರುವಂದಾದಿಯಲ್ಲಿ ನಮ್ಮಾಳ್ವಾರ್ರವರೂ ಅನುಭವಿಸಿರುವುದನ್ನು ಕಾಣಬಹುದು.

**ಗರ್ಭೀಕೃತ್ವಾ ಗೋಪ್ತುಮನಂತಂ ಜಗದಂತಃ**
**ಮಜ್ಜದ್ಭ್ರಮ್ಯಾ ವಾಂಛತಿ ಸಾಮ್ಯಂ ನನು ನಾಭಿಃ ।**
**ಉತ್ಕ್ಷಿಪ್ಯೈತತ್ ಪ್ರೇಕ್ಷಿತುಮುದ್ಯದ್ಭ್ರಮಿಭೂಯಂ**
**ನಾಭೀಪದ್ಮೋ ರಂಹತಿ ರಂಗಾಯುತನಾಬ್ಧೇಃ ॥** ॥೧೧೭॥

(ರಂಗಾಯುತನಾಬ್ಧೇಃ) ಕಡಲಿಸಂತಿರುವ ಶ್ರೀ ರಂಗನಾಥನ (ನಾಭಿಃ) ನಾಭಿಯು (ಅನಂತಂ) ಎಲ್ಲೆಯಿಲ್ಲದ (ಜಗತ್) ಲೋಕವನ್ನು (ಗರ್ಭೀಕೃತ್ವಾ)

ಒಳಗೆ ಅಡಗಿಸಿ (ಗೋಪ್ತುಂ) ರಕ್ಷಿಸುವುದಕ್ಕಾಗಿ (ಅಂತಃ) ಒಳಗೆ (ಮಜ್ಜ ದ್ಭ್ರಮ್ಯಾ) ಮುಳುಗುತ್ತಿರುವ ಸುಳಿಯೊಡನೆ (ಸಾಮ್ಯಂ) ಸಾಮ್ಯವನ್ನು (ವಾಂಛತಿ ನನು) ಬಯಸುವಂತಿದೆ! (ನಾಭೀಪದ್ಮಃ) ನಾಭಿಯ ಕಮಲವೋ ಎಂದರೆ (ಏತತ್) ಈ ಒಳಗೆ ಅಡಗಿಸಿದ್ದ ಜಗತ್ತನ್ನು (ಉತ್ಕ್ಷಿಪ್ಯ) ಮೇಲಕ್ಕೆ ತಂದು (ಪ್ರೇಕ್ಷಿತುಂ) ನೋಡುವುದಕ್ಕಾಗಿ (ಉದ್ಯತ್). ಮೇಲ್ಮುಖವಾಗಿ ಬರುತ್ತಿರುವ (ಭ್ರಮಿಭೂಯಂ) ಸುಳಿಯಾಗಿರುವ ಸ್ಥಿತಿಯನ್ನು (ರಂಹತಿ) ಹೊಂದುತ್ತದೆ.

ನಾಭಿಯನ್ನೂ ನಾಭಿಕಮಲವನ್ನೂ ಇಲ್ಲಿ ಅನುಭವಿಸಿದೆ. ನಾಭಿಯು ಮಂಡಲಾಕಾರವಾಗಿ ಆಳವಾಗಿದೆ. ನಾಭಿಕಮಲವೂ ಮಂಡಲಾಕಾರವಾಗಿ ಮೇಲೆದ್ದಿದೆ. ಭಗವಂತನೆಂಬ ಕಡಲಿನಲ್ಲಿ ನಾಭಿ ಸುಳಿಯಂತಿದೆ. ಲೋಕವೆಂಬ ಪದಾರ್ಥಗಳನ್ನು ಒಳಗೆ ಅಡಗಿಸುವುದು ಈ ಸುಳಿ. ನಾಭಿಕಮಲವಾದರೋ ಆದನ್ನು ಮೇಲೆ ತಂದು ನೋಡುವುದಕ್ಕಾಗಿದೆ ಎಂದು ಅನುಭವಿಸಿದೆ. ನಾಭಿಯು ಲೋಕಗಳೆಂಬ ಪದಾರ್ಥಗಳನ್ನೆಲ್ಲಾ ತನ್ನೊಳಗೆ ಸೆಳೆದುಕೊಂಡು ಮರೆ ಮಾಡುವುದಾದರೆ ಆ ನಾಭಿಯ ಕಮಲ ಅವುಗಳನ್ನೆಲ್ಲಾ ಮೇಲ್ಮುಖವಾಗಿ ತರುವ ಸುಳಿಯ ಸ್ಥಿತಿಯನ್ನು ಅನುಕರಿಸುತ್ತಿದೆ.

**ಮದಮಿವ ಮಧುಕೈಟಭಸ್ಯ ರಂಭಾ-**
**ಕರಭ-ಕರೀಂದ್ರ ಕರಾಭಿರೂಪ್ಯದರ್ಪಂ ।**
**ಸ್ಫುಟಮಿವ ಪರಿಭೂಯ ಗರ್ವಗುರ್ವೋಃ**
**ಕಿಮುಪಮಿಮೀಮಹಿ ರಂಗಕುಂಜರೋರ್ವೋಃ ॥ ॥೧೧೮॥**

(ಮಧುಕೈಟಭಸ್ಯ) ಮಧುಕೈಟಭರ (ಮದಮಿವ) ಮದವನ್ನು ಅಡ ಗಿಸಿದಂತೆ (ರಂಭಾ-ಕರಭ-ಕರೀಂದ್ರಕರ-ಆಭಿರೂಪ್ಯದರ್ಪಂ) ಬಾಳೆಯದಿಂಡು, ಕರಭ, ಆನೆಯ ಸೊಂಡಿಲು ಇವುಗಳ ಸೌಂದರ್ಯದ ಗರ್ವವನ್ನು (ಪರಿ ಭೂಯ) ಅಡಗಿಸಿ (ಗರ್ವಗುರ್ವೋಃ) ಆ ರೀತಿಯಲ್ಲಿ ಅವುಗಳನ್ನು ಅಡಗಿಸಿದುದ

ರಿಂದಾದ ಗರ್ವದ ಕಾರಣ ಪುಷ್ಟವಾದ (ರಂಗ ಕುಂಜರೋರ್ವೋಃ) ಶ್ರೀ ರಂಗನಾಥನ ತೊಡೆಗಳಿಗೆ (ಕಿಂ) ಯಾವ ವಸ್ತುವನ್ನು (ಉಪಮಿಮೀ ಮಹಿ) ಉಪಮಾನವನ್ನಾಗಿ ಹೇಳಬಲ್ಲೆವು ?

ಕರಭವೆಂದರೆ ಮಣಿಕಟ್ಟಿನಿಂದ ಕಿರುಬೆರಳವರೆಗಿನ ಹಸ್ತದ ಹೊರಭಾಗ. ಇಲ್ಲಿ ಶ್ರೀ ರಂಗನಾಥನ ತೊಡೆಗಳ ಸೌಂದರ್ಯವನ್ನು ವರ್ಣಿಸಿದೆ. ವಿರೋಧಿಗಳಾದ ಮಧುಕೈಟಭರನ್ನು ನಿರಸನ ಮಾಡಿದ ತೊಡೆಗಳು ಅವು. ಬಾಳೆಯ ದಿಂಡು, ಕರಭ, ಆನೆಯ ಸೊಂಡಿಲು ಇವುಗಳ ಸೌಂದರ್ಯವನ್ನು ಹಿಂದಿಕ್ಕುವ ಸೌಂದರ್ಯ ಅವುಗಳದು.

**ಕಟೀಕಾಂತಿ-ಸಂವಾದಿ ಚಾತುರ್ಯ ನೀವೀ**
**ಲಸದ್ರತ್ನಕಾಂಚೀ ಕಲಾಪಾನುಲೇಪಂ ।**
**ಮಹಾಭ್ರಂ ಲಿಹನ್ಮೇರುಮಾಣಿಕ್ಯಸಾನೂಃ**
**ಇವಾಭಾತಿ ಪೀತಾಂಬರಂ ರಂಗಬಂಧೋಃ ॥** ॥೧೧೯॥

(ರಂಗ ಬಂಧೋಃ) ಶ್ರೀ ರಂಗನಾಥನ (ಕಟೀ ಕಾಂತಿಸಂವಾದಿ) ಸೊಂಟದ ಕಾಂತಿಯೊಡನೆ ಸೇರಿ ಸಮಾನವಾಗಿರುವ (ಚಾತುರ್ಯ) ಚಾತುರ್ಯವನ್ನುಳ್ಳ (ನೀವೀ) ನೀವೀಬಂಧನದಲ್ಲಿ (ಲಸತ್) ಪ್ರಕಾಶಿಸುವ (ರತ್ನ ಕಾಂಚೀಕಲಾಪ ಅನುಲೇಪಂ) ರತ್ನಮಯವಾದ ಮೇಖಲಾಭರಣದೊಡನೆ ಸೇರಿರುವ (ಪೀತಾಂಬರಂ) ಪೀತಾಂಬರವು (ಮಹಾಭ್ರಂ ಲಿಹನ್ ಮೇರು ಮಾಣಿಕ್ಯಸಾನೂಃ ಇವ) ದೊಡ್ಡಮೇಘವನ್ನು ತಾಗಿಕೊಂಡಿರುವ ಮೇರು ಪರ್ವತದ ಮಾಣಿಕ್ಯಮಯವಾದ ತಪ್ಪಲುಗಳಂತೆ (ಆಭಾತಿ) ಪ್ರಕಾಶಿಸುತ್ತದೆ.

ನಮ್ಮಾಳ್ವಾರ್—'ಪಡಿಚ್ಚೋದಿ ಆಡೆಯೊಡುಂ ಪಲ್‌ಹಲನಾಯ್, ನಿನ್‌ಪೈಂಪೊನ್ ಕಡಿಚ್ಚೋದಿ ಕಲಂದದುವೋ ತಿರುಮಾಲೇ ಕಟ್ಟುರೈಯೇ' (3-1.1) ಎಂದು ಹೇಳಿರುವುದಕ್ಕೆ ಈ ಶ್ಲೋಕದ ಪೂರ್ವಾರ್ಧ ಅನುಗುಣ

ವಾಗಿದೆ. ನೀವೀ ಎಂಬುದು ಮೇಲಿನ ಉತ್ತರೀಯದ ಕಟ್ಟು. ಶ್ರೀ ರಂಗನಾಥನೇ ಕಾಳಮೇಘ. ಆ ಭಗವಂತನನ್ನು ಸುತ್ತುವರಿದಿರುವ ಪೀತಾಂಬರ ತಪ್ಪಲು ಪ್ರದೇಶ. ಕಟಿ ಪ್ರದೇಶದ ಕಾಂತಿಯೇ ನೀವೀಬಂಧನದಂತೆ ಪ್ರಕಾಶಿಸುತ್ತದೆ. ಶ್ರೀ ರಂಗನಾಥನ ಪೀತಾಂಬರದ ಚೆಲುವನ್ನು ಇಲ್ಲಿ ನಿರೂಪಿಸಿದೆ.

**ಭರ್ಮಸ್ಥಲಾಂಶು–ಪರಿವೇಷ ಇವಾಂಬುರಾಶೇಃ**
**ಸಂಧ್ಯಾಂಬುವಾಹ ನಿಕುರಂಬಮಿವಾಂಬರಸ್ಯ ।**
**ಶಂಪಾ-ಕದಂಬಕಮಿವಾಂಬುಮುಚೋ ಮನೋ ನಃ**
**ಪೀತಾಂಬರಂ ಪಿಬತಿ ರಂಗಧುರಂಧರಸ್ಯ ॥ ॥೧೨೦॥**

(ರಂಗಧುರಂಧರಸ್ಯ) ಶ್ರೀ ರಂಗನಾಥನ (ಪೀತಾಂಬರಂ) ಪೀತಾಂಬರವು (ಅಂಬುರಾಶೇಃ) ಸಮುದ್ರಕ್ಕೆ (ಭರ್ಮಸ್ಥಲಾಂಶು ಪರಿವೇಷ ಇವ) ಸುವರ್ಣಮಯವಾದ ಭೂಮಿಯ ಕಾಂತಿಯ ಪರಿವೇಷದಂತೆ—ವರ್ತುಲಾಕಾರದ ಪ್ರಭೆಯಂತೆ (ಅಂಬರಸ್ಯ) ಆಕಾಶಕ್ಕೆ (ಸಂಧ್ಯಾಂಬುವಾಹನಿಕುರಂಬಂ ಇವ) ಸಂಧ್ಯಾಕಾಲದ ಮೇಘಗಳ ಸಮೂಹದಂತೆಯೂ (ಅಂಬುಮುಚಃ) ಮೇಘಕ್ಕೆ (ಶಂಪಾಕದಂಬಕಂ ಇವ ಮಿಂಚುಗಳ ಗೊಂಚಲಿನಂತೆಯೂ ಇದ್ದುಕೊಂಡು (ನಃ) ನಮ್ಮ (ಮನಃ) ಮನಸ್ಸನ್ನು (ಪಿಬತಿ) ಹೀರಿಕೊಳ್ಳುತ್ತದೆ—ಅನುಭವಿಸುತ್ತಿದೆ.

ಇಲ್ಲಿಯೂ ಪೀತಾಂಬರದ ಅನುಭವವೇ ಇದೆ. ಏಳು ಬಗೆಯಾದ ಸಮುದ್ರಗಳಿವೆಯೆಂದೂ ಆ ಏಳನೆಯ ಕಡಲಿನ ಆಚೆಗೆ ಸ್ವರ್ಣಮಯವಾದ ಭೂಮಿ ಇದೆ ಎಂದೂ ಹೇಳುತ್ತಾರೆ. ಆ ಸ್ವರ್ಣಮಯವಾದ ಭೂಮಿಯ ಕಾಂತಿಯ ಪರಿವೇಷ ನೀಲ ಸಾಗರವನ್ನು ಸುತ್ತಿರುವಂತೆ ಈ ಪೀತಾಂಬರ ಶ್ರೀ ರಂಗನಾಥನಿಗೆ ಶೋಭಿಸಿದೆ. ಸಂಧ್ಯಾಕಾಲದ ಹೊಂಬಣ್ಣದ ಮೇಘಗಳ ಸಮೂಹ ನೀಲಾಕಾಶವನ್ನು ಸುತ್ತುವರಿದಿರುವಂತೆ, ಕಾಲಮೇಘವನ್ನು ಮಿಂಚುಗಳ ಗೊಂಚಲು ಅಲಂಕರಿಸಿರುವಂತೆ, ಉಜ್ವಲವಾದ ಪೀತಾಂಬರ ನೀಲಮೇಘಶ್ಯಾಮನಾದ ಶ್ರೀ ರಂಗನಾಥನಿಗೆ ಅಲಂಕಾರವಾಗಿದೆ.

ವೈಭೂಷಣ್ಯಾಂ ಕಾಂತಿರಾಂಗೀ ನಿಮಗ್ನಾ
ವಿಷ್ವದ್ರೀಚೀ ಕ್ವಾಪಿ ಸೋನ್ಮಾದವೃತ್ತಿಃ ।
ಜಾನೇ ಜಾನು ದ್ವಂದ್ವವಾರ್ತಾವಿವರ್ತೋ
ಜಾತಃ ಶ್ರೀಮದ್ರಂಗತುಂಗಾಲಯಸ್ಯ ॥ ॥೧೨೧॥

(ಶ್ರೀಮದ್ರಂಗತುಂಗ ಆಲಯಸ್ಯ) ತಿರುವರಂಗವೆಂಬ ಶ್ರೇಷ್ಠವಾದ ಆಲಯದಲ್ಲಿ ನೆಲೆಸಿರುವ ಶ್ರೀ ರಂಗನಾಥನ (ವೈಭೂಷಣ್ಯಾಂ) ಆಭರಣಗಳ ಕಾಂತಿಯಲ್ಲಿ (ನಿಮಗ್ನಾಂ) ಮುಳುಗಿದ (ಆಂಗೀ ಕಾಂತಿಃ) ದಿವ್ಯಮಂಗಳ ವಿಗ್ರಹದ ಕಾಂತಿಯು (ವಿಷ್ವದ್ರೀಚೀ) ಸುತ್ತಲೂ ವ್ಯಾಪಿಸಿದುದಾಗಿ (ಕ್ವಾಪಿ) ಎಲ್ಲಿಯೋ ಒಂದು ಎಡೆಯಲ್ಲಿ (ಸೋನ್ಮಾದವೃತ್ತಿಃ) ಉನ್ಮಾದವ್ಯಾಪಾರ ದೊಡನೆ ಕೂಡಿದುದಾಗಿ (ಜಾನುದ್ವಂದ್ವವಾರ್ತಾ ವಿವರ್ತಃ) ಎರಡು ಮೊಣ ಕಾಲುಗಳೆಂಬ ಶಬ್ದಗಳ ಪರಿಣಾಮವಾಗಿ (ಜಾತಃ ಜಾನೇ) ಆಯಿತೆಂದು ತಿಳಿಯುತ್ತೇನೆ.

ಮೊಣಕಾಲುಗಳ ಅನುಭವ ಇಲ್ಲಿದೆ. ಎರಡು ಶೋಭಾ ಪ್ರವಾಹಗಳು ಭಗವಂತನ ಶರೀರದಲ್ಲಿವೆ. ದೇಹಕಾಂತಿಯ ಪ್ರವಾಹ ಮತ್ತು ಆಭರಣ ಕಾಂತಿಯ ಪ್ರವಾಹ ಎಂಬುವು ಅವು. ಭಗವಂತನ ಆಭರಣ ಕಾಂತಿಯಲ್ಲಿ ಅಡಗಿ ಹೋದ ದಿವ್ಯಾವಯವದ ಕಾಂತಿಯು ಮೇಲೆ ಬರುವು ದಕ್ಕಾಗದ ಕಾರಣ ಹಾಗೆ ಒಳಗೇ ವ್ಯಾಪಿಸಿದ್ದು ಸುಳಿಗಳಾಗಿ ಪ್ರವಹಿಸಿ ಮೇಲೆ ಬಂದು ಎರಡು ಮೊಣಕಾಲುಗಳಾಗಿ ಕಾಣುತ್ತವೆ ಎಂದು ಅನುಭವಿಸಿದೆ.

ಶ್ರೀ ರಂಗೇಶಯಜಂಘೇ ಶ್ರೀಭೂವ್ಯಾಮರ್ಶ–ಹರ್ಷ–ಕಂಟಕಿತೇ ।
ತತ್ಕೇಳಿನಳಿನ–ಮಾಂಸಲ–ನಾಳದ್ವಯ–ಲಲಿತಂ ಆಚರತಃ ॥೧೨೨॥

(ಶ್ರೀ ಭೂಮಿ—ಆಮರ್ಶ ಹರ್ಷಕಂಟಕಿತೇ) ಶ್ರೀದೇವಿಯೂ ಭೂದೇ ವಿಯೂ ಭಗವಂತನ ಶ್ರೀಪಾದವನ್ನು ಒತ್ತುವಾಗ ಉಂಟಾದ ಸಂತೋಷದ

ಕಾರಣ ಉಂಟಾದ ರೋಮಾಂಚವುಳ್ಳ (ಶ್ರೀ ರಂಗೇಶಯ ಜಂಘೇ) ಶ್ರೀ ರಂಗನಾಥನ ಮೊಳಕಾಲುಗಳು (ತತ್) ಆ ದೇವಿಯರ (ಕೇಳಿನಳಿನ) ಎರಡು ಲೀಲಾಪದ್ಮಗಳ (ಮಾಂಸಲ) ಪುಷ್ಟವಾದ (ನಾಳದ್ವಯ) ಎರಡು ನಾಳಗಳ (ಲಲಿತಂ) ವಿಲಾಸವನ್ನು (ಆಚರತಃ) ಆಚರಿಸುತ್ತವೆ, ಹೊಂದುತ್ತವೆ.

'ವಡಿವಿಣೈ ಇಲ್ಲಾ ಮಲರ್ಮಹಳ್ ಮತ್ತೈ ನಿಲಮಹಳ್ ಪಿಡಿಕ್ಕುಂ ಮೆಲ್ಲಡಿ' ಎಂಬಂತೆ ಶ್ರೀದೇವಿಯೂ ಭೂದೇವಿಯೂ ರಂಗನಾಥನ ಪಾದಗಳನು ಒತ್ತುತ್ತಾರೆ. ಅವರ ಕೈಗಳೊಡನೆ ಸೇರಿದ ಆ ಪಾದಗಳು ಲೀಲಾರವಿಂದಗಳೆಂದೂ ಆ ಮೊಣಕಾಲುಗಳು ಆ ತಾವರೆಗಳ ನಾಳಗಳು ಎಂದೂ ಇಲ್ಲಿ ಅನುಭವಿಸಿದೆ. ನಾಳಗಳಲ್ಲಿ ಕಂಟಕವಿರಬೇಕಲ್ಲಾ ಎಂದರೆ ಇಲ್ಲಿಯೂ ಇವರ ಶ್ರೀ ಹಸ್ತಗಳ ಸ್ಪರ್ಶದಿಂದ ಆ ಮೊಣಕಾಲುಗಳಲ್ಲಿ ರೋಮಾಂಚವೆದ್ದು ಕಂಟಕಗಳಂತೆ ಇವೆ ಎಂದು ಹೇಳಿದೆ.

ವಂದಾರು–ಬೃಂದಾರಕ–ಮೌಲಿಮಾಲಾ
ಯುಂಜಾನ ಚೇತಃ ಕಮಲಾಕರೇಭ್ಯಃ ।
ಸಂಕ್ರಾಂತರಾಗಾವಿವ ಪಾದಪದ್ಮೌ
ಶ್ರೀರಂಗಭರ್ತುಃ ಮನವೈ ನವೈಚ ॥ ॥೧೨೪॥

(ವಂದಾರು) ನಮಿಸುವ (ಬೃಂದಾರಕ) ದೇವತೆಗಳ (ಮೌಲಿಮಾಲಾ) ಕಿರೀಟಸಮೂಹವೇನು, (ಯುಂಜಾನ ಚೇತಃ) ಯೋಗಿಗಳ ಮನಸ್ಸೇನು, (ಕಮಲಾಕರೇಭ್ಯಃ) ಶ್ರೀದೇವಿಯ ಕೈತಲಗಳೇನು ಇವುಗಳಿಂದ (ಸಂಕ್ರಾಂತ ರಾಗೌ ಇವಸ್ಥಿತಾ) ಬಂದು ಸೇರಿದ ಕೆಂಬಣ್ಣವನ್ನು ಹೊಂದಿರುವಂತೆ ಇರುವುವಾದ (ಶ್ರೀರಂಗ ಭರ್ತುಃ ಪಾದಪದ್ಮೌ) ಶ್ರೀ ರಂಗನಾಥನ ಪಾದ ಕಮಲಗಳನ್ನು (ಮನವೈ) ಧ್ಯಾನಿಸುತ್ತೇನೆ (ನವೈಚ) ಮತ್ತು ಸ್ತುತಿಸುತ್ತೇನೆ.

ಶ್ರೀ ರಂಗನಾಥನ ಪಾದಕಮಲಗಳನ್ನು ಇಲ್ಲಿ ಅನುಸಂಧಾನ ಮಾಡಿದೆ. ಸ್ವಾಮಿಯ ಶ್ರೀಪಾದಗಳು ಸಹಜವಾಗಿಯೇ ಕೆಂಪಾಗಿವೆ. ರಾಗ ಎಂಬ ಪದಕ್ಕೆ ಅನುರಾಗ ಮತ್ತು ಕೆಂಪು ಎಂಬ ಅರ್ಥವಿದೆ. ದೇವತೆಗಳ ರತ್ನಕಿರೀಟ ಗಳು ಆ ಶ್ರೀಪಾದಗಳಿಗೆ ನಮಿಸುವುದರಿಂದ ಆ ಕಿರೀಟಗಳ ರತ್ನಪ್ರಭೆಯು ಕಾರಣ ಆ ಪಾದಗಳು ಕೆಂಪಾದವೋ ಅಥವಾ ಯೋಗಿಗಳ ಅಂತಃಕರಣದಲ್ಲಿ ಆ ಪಾದಗಳು ಇರುವುದರಿಂದ ಅಲ್ಲಿರುವ ಅನುರಾಗವು ಸಂಕ್ರಾಂತವಾಯಿತೋ ಅಥವಾ ಶ್ರೀದೇವಿಯ ಕೈಗಳ ಕೆಂಪು ಈ ಪಾದಗಳಿಗೆ ಬಂದು ಸೇರಿತೋ ಎಂದು ಇಲ್ಲಿ ಹೇತೂತ್ಪ್ರೇಕ್ಷೆ ಮಾಡಿದೆ. ಅಂಥ ಪಾದಗಳನ್ನು ನಾನು ಧ್ಯಾನಿಸಿ ನಮಿಸುತ್ತೇನೆ ಎಂಬ ಭಾವ.

ಯದ್ವೃಂದಾವನ-ಪಂಡಿತಂ ದಧಿರವೈರ್ಯತ್ತಾಂಡವಂ ಶಿಕ್ಷಿತಂ
ಯಲ್ಲಕ್ಷ್ಮೀಕರ ಸೌಖ್ಯಸಾಕ್ಷಿ ಜಲಜ–ಪ್ರಸ್ಪರ್ಧಮಾನರ್ಧಿ ಯತ್।
ಯದ್ಭಕ್ತೇಷ್ವಜಲಸ್ಥಲಜ್ಞಂ ಅಪಿ ಯದ್ದೂತ್ಯಪ್ರಸಂಗೋತ್ಸುಕಂ
ತದ್ವಿಷ್ಣೋಃ ಪರಮಂ ಪದಂ ವಹತು ನಃ
ಶ್ರೀರಂಗಿಣೋ ಮಂಗಲಂ ॥ ॥೧೨೪॥

(ಶ್ರೀರಂಗಿಣಃ ವಿಷ್ಣೋಃ) ಶ್ರೀ ರಂಗನಾಥನ (ಯತ್ ಪದಂ) ಯಾವ ಶ್ರೀಪಾದವು (ಬೃಂದಾವನ ಪಂಡಿತಂ) ಬೃಂದಾವನದಲ್ಲಿ ಚರಿಸಿತೋ (ಯತ್ ತಾಂಡವಂ) ಯಾವ ಪಾದಗಳ ನರ್ತನದ ವಿಶೇಷವು (ದಧಿರವೈಃ) ಮೊಸರು ಗಳ ಧ್ವನಿಯಿಂದ (ಶಿಕ್ಷಿತಂ) ಕಲ್ಪಿಸಲ್ಪಟ್ಟಿತೋ (ಯತ್) ಯಾವ ಪಾದವು (ಲಕ್ಷ್ಮೀಕರ ಸೌಖ್ಯಸಾಕ್ಷಿ) ಲಕ್ಷ್ಮೀದೇವಿಯ ಶ್ರೀ ಹಸ್ತಗಳಿಗೆ ಉಂಟಾಗುವ ಸುಖಕ್ಕೆ ಸಾಕ್ಷಿಯಾಗಿದೆಯೋ (ಯತ್) ಯಾವ ಪಾದವು (ಜಲಜ ಪ್ರಸ್ಪರ್ಧ ಮಾನರ್ಧಿ) ತಾವರೆಯೊಡನೆ ಹೋರಾಡುವ ಸೌಂದರ್ಯವನ್ನುಳ್ಳುದೋ (ಯತ್) ಯಾವ ಪಾದವು (ಭಕ್ತೇಷು) ಭಕ್ತರ ವಿಷಯದಲ್ಲಿ (ಅಜಲ ಸ್ಥಲಜ್ಞಂ) ಮೇಲು ಕೀಳುಗಳೆಂಬುವ ವ್ಯತ್ಯಾಸವನ್ನು ಕಾಣುವುದಿಲ್ಲವೋ (ಯತ್) ಯಾವ ಪಾದವು (ದೂತ್ಯಪ್ರಸಂಗೋತ್ಸುಕಂ ಅಪಿ) ದೂತ್ಯ ಎಂಬ

ಮಾತನ್ನು ಹೇಳುವಾಗಲೇ ಅಧಿಕವಾದ ಆಶೆಯನ್ನು ಹೊಂದಿರುವುದೋ (ತತ್) ಅಂಥ (ಪರಮಂಪದಂ) ಸರ್ವೋತ್ಕೃಷ್ಟವಾದ ಪಾದವು (ನಃ) ನಮಗೆ (ಮಂಗಳಂ) ಕ್ಷೇಮವನ್ನು (ವಹತು) ಉಂಟು ಮಾಡಲಿ.

ಸರ್ವಜ್ಞನ ಪಾದವಾದುದರಿಂದ ಅದಕ್ಕೂ ಪಾಂಡಿತ್ಯವಿದೆ. ಬೃಂದಾವನದಲ್ಲಿ ಸಂಚರಿಸುವ ಬಗೆಗೆ ಅದಕ್ಕೆ ಪಾಂಡಿತ್ಯವಿದೆ. ಧಧಿರವೈಃ ಎಂಬ ಬಹುವಚನದಿಂದ 'ಬಹು ಶ್ರುತತ್ವ' ಸಿದ್ಧವಾಯಿತು. ಅವನ ಪಾದಗಳಿಗೂ ಶ್ರೀದೇವಿಯ ಕೈಗಳಿಗೂ ಸುಖವುಂಟಾಗುವುದು ಪಾದಸಂವಾಹನ ಮಾಡಿದಾಗ. ಶ್ರೀದೇವಿಯು ಹುಟ್ಟಿದ ಕಮಲದೊಡನೆ ಸ್ಪರ್ಧಿಸುತ್ತಿದೆಯಲ್ಲಾ ಇದು! ಭಕ್ತರು ತನ್ನನ್ನು ಆಶ್ರಯಿಸುವ ವಿಷಯದಲ್ಲಿ ಇವರು ಮೇಲು ಇವರು ಕೀಳು ಎಂದು ಯಾವ ವ್ಯತ್ಯಾಸವನ್ನೂ ಕಾಣದ ಶ್ರೀಪಾದಗಳು ಇವು. 'ಅವನೇ ಪಿನ್ನೋರ್ ತೂದು ಆದಿಮನ್ನರ್ಕ್ಕಾಹಿ ಪೆರುನಿಲತ್ತಾರ್ ಇನ್ನಾರ್ ತೂದನೆನ ನಿನ್ರಾನ್' ಎಂದು ತಿರುಮಂಗೈ ಆಳ್ವಾರ್ರವರು ಅನುಭವಿಸಿದಂತೆ ದೂತ್ಯ ಕಾರ್ಯದಲ್ಲಿ ಅತ್ಯಾಸಕ್ತಿ ಹೊಂದಿರುವ ಶ್ರೀಪಾದಗಳು ಇವು. 'ನಿನ್ ಪಾದಪಂಗಯಮೇ ತಲೈಕ್ಕಣಿಯಾಯ್' 'ಪಿಡಿತ್ತೇನ್ ಪಿರವಿ ಕೆಡುತ್ತೇನ್' ತಿಣ್ ಕಳ್ಳಲ್ ಶೇರೇ', ಎಂದು ನಮ್ಮಾಳ್ವಾರ್ರವರು ಹೇಳಿದಂತೆ ನಮಗೆ ಪರಮ ಪ್ರಾಪ್ಯವಾದ ಆ ಶ್ರೀಪಾದಗಳು ನಮಗೆ ಎಲ್ಲಾ ಕ್ಷೇಮವನ್ನೂ ಉಂಟು ಮಾಡಲಿ. ಸಂಸಾರವನ್ನು ಕಳೆದುಕೊಂಡು ಆ ಶ್ರೀಪಾದಗಳ ನಿತ್ಯ ಕೈಂಕರ್ಯವನ್ನು ನಾವು ಪಡೆಯುವಂತೆ ಕರುಣಿಸಲಿ.

**ಶಿಂಜಾನಶ್ರುತಿ-ಶಿಂಜನೀ-ಮಣಿರವೈಃ ವಜ್ರಾರವಿಂದ-ಧ್ವಜ**

**ಚ್ಛತ್ರೀಕಲ್ಪಕ ಶಂಖಚಕ್ರಮುಖರೈಃ ಶೈಸ್ತ್ರೈಶ್ಚ ರೇಖಾಮಯೈಃ ।**

**ಐಶ್ವರ್ಯೇಣ, ಜಯಂ ತ್ರಿವಿಕ್ರಮಮುಖಂ ಘುಷ್ಯದ್ಭಿರಾಮ್ರೇಡಿತಂ**

**ಶ್ರೀ ರಂಗೇಶಯಪಾದಪಂಕಜಯುಗಂ**

**ವಂದಾಮಹೇ ಸುಂದರಂ ॥ ॥೧೨೫॥**

(ಐಶ್ವರ್ಯೇಣ ಸಹ) ಸರ್ವೇಶ್ವರತ್ವದೊಡನೆ (ತ್ರಿವಿಕ್ರಮ ಮುಖಂ ಜಯಂ) ಮೂರು ಹೆಜ್ಜೆಗಳನಿಟ್ಟು ಅಳೆದುದೇ ಮೊದಲಾದ ವಿಜಯ ಚೇಷ್ಟಿತ

ಗಳನ್ನು (ಆವ್ರೇಡಿತಂ ಯಥಾತಥಂ) ಅನೇಕಕಾಲ (ಘುಷ್ಯದ್ಭಿಃ) ಪ್ರಸಿದ್ಧಿ ಪಡಿಸುವ (ಶಿಂಜಾನಶ್ರುತಿ ಶಿಂಜಿನೀ ಮಣಿರವೈಃ) ಶಬ್ದಮಾಡುವ ವೇದರೂಪ ಗಳಾದ ಕಾಲಂದುಗೆಗಳ ಶಬ್ದಗಳಿಂದಲೂ (ರೇಖಾಮಯೈಃ)ರೇಖಾರೂಪಗಳಾದ (ತ್ಯೈಃತ್ಯೈಃ) ಅಂಥ (ವಜ್ರ) ವಜ್ರಾಯುಧವೇನು (ಅರವಿಂದ) ತಾವರೆಯೇನು, (ಧ್ವಜ) ಧ್ವಜವೇನು (ಛತ್ರ) ಕೊಡೆಯೇನು, (ಕಲ್ಪಕ) ಕಲ್ಪವೃಕ್ಷವೇನು (ಶಂಖ) ಶಂಖವೇನು (ಚಕ್ರ) ಚಕ್ರವೇನು (ಮುಕುರೈಃ) ಕನ್ನಡಿಗಳೇನು ಎಂಬುವ ಇವುಗಳಿಂದ (ಸುಂದರಂ) ಸುಂದರವಾದ (ಶ್ರೀ ರಂಗೇಶಯು ಪಾದ ಪಂಕಜಯುಗಂ) ಶ್ರೀ ರಂಗನಾಥನ ಪಾದಪದ್ಮಗಳೆರಡನ್ನೂ (ವಂದಾಮಹೇ) ವಂದಿಸುತ್ತೇವೆ.

ಈ ಶ್ರೀ ಪಾದಗಳು ಲೋಕಗಳನ್ನು ಆಳೆದುಕೊಂಡು ವಿಜಯಶಾಲಿಗಳಾದವು. ಸರ್ವೇಶ್ವರತ್ವವನ್ನು ಹೊಂದಿರುವುವು ಇವು, ಪಾದಗಳಲ್ಲಿ ಸೊಗಯಿಸುವ ನೂಪುರಗಳ ಧ್ವನಿಯಿಂದ ಲೋಕವನ್ನೇ ತುಂಬಿದವು ಇವು. ವೇದಗಳ ಧ್ವನಿ ಯೇ ನೂಪುರಧ್ವನಿ. 'ಕದಾಪುನಃ ಶಂಖರಥಾಂಗ ಕಲ್ಪಕ ಧ್ವಜಾರವಿಂದಾಂಕುಶ ವಜ್ರಲಾಂಛನಂ । ತ್ರಿವಿಕ್ರಮ ತ್ವಚ್ಚರಣಾಂಬುಜದ್ವಯಂ ಮದೀಯ ಮೂ ರ್ಧಾನಂ ಅಲಂಕರಿಷ್ಯತಿ ॥' ಎಂದು ಭಗವದ್ಯಾಮುನರು ಅನುಭವಿಸಿರುವಂತೆ ಶಂಖ ಚಕ್ರಾದಿ ರೇಖೆಗಳಿಂದ ಸುಂದರವಾದವು ಆ ಶ್ರೀಪಾದಗಳು. ಹೀಗೆ ಭೋಗ್ಯ ತಮವಾದವು ಅವು. ಇಂಥ ಶ್ರೀಪಾದಗಳನ್ನು ವಂದಿಸಿ ಆಶ್ರಯಿಸಿ ದ್ದಾರೆ. 'ಒರುಕಾಲಿಲ್‌ಶಂಗು ಒರುಕಾಲಿಲ್‌ಶಕ್ಕರಂ ಉಳ್ಳಡಿ ಪೊರಿತ್ತವೈಂದ' ಎಂದು ಪೆರಿಯಾಳ್ವಾರ್ ಅವರು ಆ ಶ್ರೀಪಾದಗಳ ಸೌಂದರ್ಯವನ್ನನುಭವಿಸಿ ದ್ದಾರೆ. ಆ ಶ್ರೀಪಾದಗಳನ್ನು ಬಿಟ್ಟು ಬೇರೆ ನಮಗೆ ಗತಿಯಿಲ್ಲವೆಂಬುದನ್ನು ನಮ್ಮಾಳ್ವಾರ್ ಅವರು 'ಎಂಬೆರುಮಾನ್ ಅಡಿಯಲ್ಲಾಲ್‌ಶರಣ್ ನಿನೈಪ್ಪಿಲುಂ ಪಿರಿದಿಲ್ಲೈ ಎನಕ್ಕೇ' ಎಂದು ಅನುಸಂಧಾನ ಮಾಡಿದ್ದಾರೆ.

**ಪುನಾನಿ ಭುವನಾನ್ಯಹಂ ಬಹುಮುಖೀತಿ ಸರ್ವಾಂಗುಲೀ**

**ಝುಲಜ್ಝಲಿತ ಜಾಹ್ನವೀ-ಲಹರಿ - ಬೃಂದ - ಸಂದೇಹದಾಃ ।**

**ದಿವಾ ನಿಶಿ ಚ ರಂಗಿಣಃ ಚರಣ–ಚಾರು–ಕಲ್ಪದ್ರುಮ**
**ಪ್ರವಾಲ–ನವಮಂಜರೀ–ನಖರುಚೀಃ ವಿಗಾಹೇಮಹಿ || ||೧೨೬||**

"(ಅಹಂ) ಗಂಗೆಯಾಗಿರುವ ನಾನು (ಬಹುಮುಖೀ ಸತೀ) ಅನೇಕ ರೂಪವಾಗಿ ಪ್ರವಹಿಸುವವಳಾಗಿದ್ದುಕೊಂಡು (ಭುವನಾನಿ) ಲೋಕಗಳನ್ನು (ಪುನಾನಿ) ಪರಿಶುದ್ಧಿಗೊಳಿಸುವೆನು" (ಇತಿ) ಹೀಗೆಂದು (ಸರ್ವಾಂಗುಲೀ) ಎಲ್ಲಾ ಬೆರಳುಗಳಿಂದಲೂ (ಝುಲ ಜ್ಝುಲಿತ) ಝುಲ ಝುಲ ಎಂದು ಹರಿದ (ಜಾಹ್ನವೀ) ಗಂಗೆಯು (ಲಹರೀಬೃಂದ) ಅಲೆಗಳ ಸಮೂಹವೋ ಇವು ಎನ್ನುವ (ಸಂದೇಹ ದಾಃ) ಸಂದೇಹವನ್ನುಂಟುಮಾಡುವುವಾದ (ರಂಗಿಣಃ) ಶ್ರೀ ರಂಗನಾಥನ (ಚರಣ) ಪಾದಗಳೆಂಬ (ಚಾರು) ಸುಂದರವಾದ (ಕಲ್ಪದ್ರುಮ) ಕಲ್ಪವೃಕ್ಷದ (ಪ್ರವಾಲ) ಬೆರಳುಗಳಾಗಿರುವ ಚಿಗುರುಗಳ (ನವಮಂಜರೀ) ಹೊಸ ಹೂ ಗೊಂಚಲುಗಳಂತಿರುವ (ನಖರುಚೀಃ) ಉಗುರುಗಳ ಕಾಂತಿಗಳಲ್ಲಿ (ದಿವಾನಿಶಿಚ) ಹಗಲೂ ರಾತ್ರಿಯೂ (ವಿಗಾಹೇಮಹಿ) ಮುಳುಗಿ ಅನುಭವಿಸುತ್ತೇವೆ.

ಸ್ತೋತ್ರರಚನೆಯೇ ಯಜ್ಞ. ಇದರ ಕೊನೆಯಲ್ಲಿ ಅವಗಾಹ ಸ್ನಾನ ಆಗಬೇಕಲ್ಲ! ಈ ಭಗವದನುಭವವೆಂಬ ಯಜ್ಞಕ್ಕೆ ಅವಗಾಹ ಆ ಸ್ವಾಮಿಯ ಪಾದನಖಕಾಂತಿಯಲ್ಲಿ. ಶ್ರೀ ರಂಗನಾಥನೇ ಕಲ್ಪವೃಕ್ಷ. ಶ್ರೀಪಾದ ಪಲ್ಲವಗಳು; ನಖಕಾಂತಿಯು ನವಮಂಜರಿಗಳು, ಭಗವಂತನ ಉಗುರುಗಳಿಂದ ಪ್ರವಹಿಸುವ ಕಾಂತಿಯ ಸೌಂದರ್ಯವನ್ನು ಇಲ್ಲಿ ಅನುಭವಿಸಿದೆ. ಈ ನಖಕಾಂತಿ ಪ್ರವಾಹದಲ್ಲಿ ಮುಳುಗಿ ಸ್ನಾನಮಾಡಿ ಪರಿಶುದ್ಧರಾಗಿ ಧನ್ಯರಾಗುತ್ತೇವೆ.

**ಶ್ರೀ ರಂಗೇಂದೋಃ ಪದಕಿಸಲಯೇ ನೀಲಮಂಜೀರ ಮೈತ್ರ್ಯಾ**
**ವಂದೇ ವೃಂತಪ್ರಣಯಿ ಮಧುಪವ್ರಾತ ರಾಜೀವ ಜೈತ್ರೇ ।**
**ನಿತ್ಯಾಭ್ಯರ್ಚಾ–ನತವಿಧಿಮುಖಸ್ತೋಮ–ಸಂಶಯ್ಯಮಾನ್ಯೈಃ**
**ಹೇಮಾಂಭೋಜೈಃ ನಿಬಿಡನಿಕಟೇ ರಾಮಸೀತೋಪನೀತೈಃ ||೧೨೭||**

(ನೀಲಮಂಜೀರ ಮೈತ್ರ್ಯಾ) ನೀಲರತ್ನಮಯವಾದ ಕಾಲಂದುಗೆಗಳನ್ನು ಹೊಂದಿರುವುದರಿಂದ (ವೃಂತಪ್ರಣಯಿ-ಮಧುಪ-ವ್ರಾತ-ರಾಜೀವ-ಜೈತ್ರೇ) ಹೂಗಳೊಳಗೆ ಮಗ್ನವಾಗಿರುವ ದುಂಬಿಗಳ ಸಮೂಹವನ್ನುಳ್ಳ

ತಾವರೆ ಹೂಗಳನ್ನು ಹಿಂದಿಕ್ಕುವುವೂ, (ನಿತ್ಯಾಭ್ಯರ್ಚಾ) ನಿತ್ಯ ನಡೆಯುವ ಪೂಜೆಯಲ್ಲಿ (ನತ) ಬಾಗಿದ (ವಿಧಿಮುಖ ಸ್ತೋಮ ಸಂಶಯ್ಯಮಾನೇ) ಬ್ರಹ್ಮದೇವನ ಮುಖಗಳ ಸಮೂಹವೋ ಎಂದು ಸಂದೇಹ ಮಾಡಲ್ಪಡುವುವೂ. (ರಾಮಸೀತೋಪನೀತೈಃ) ಶ್ರೀರಾಮನಿಂದಲೂ ಸೀತೆಯಿಂದಲೂ ಸಮರ್ಪಿಸಲ್ಪಟ್ಟವಾದ (ಹೇಮಾಂಭೋಜೈಃ) ಚಿನ್ನದ ತಾವರೆ ಹೂಗಳಿಂದ (ನಿಬಿಡ ನಿಕಟೇ) ನಿಬಿಡವಾದ ಸಮೀಪ ಪ್ರದೇಶವುಳ್ಳುದೂ ಆದ (ಶ್ರೀ ರಂಗೇಂದೋಃ ಪದಕಿಸಲಯೇ) ಶ್ರೀ ರಂಗನಾಥನ ಪಲ್ಲವಗಳಂತಹ ಪಾದಗಳನ್ನು (ವಂದೇ) ನಮಿಸುತ್ತೇನೆ.

ದಿವ್ಯಾದ್ಭುತ ಸೌಂದರ್ಯವುಳ್ಳ ಶ್ರೀ ರಂಗನಾಥನ ಶ್ರೀ ಪಾದಗಳಿಗೆ ನಮಸ್ಕಾರವನ್ನಿಲ್ಲಿ ಅರ್ಪಿಸಿದೆ. ಭಗವಂತನ ಶ್ರೀಪಾದಗಳು ನೀಲರತ್ನಮಯವಾದ ಕಾಲಂದುಗೆಗಳಿಂದ ಸುಂದರವಾಗಿವೆ. ತಾವರೆ ಒಳಗೆ ಸೇರಿದ ನೀಲ ವರ್ಣದ ದುಂಬಿಗಳೊಡನೆ ಕೂಡಿದ ತಾವರೆ ಹೂಗಳ ಚೆಲುವನ್ನು ಆ ಪಾದಗಳು ಮೀರಿಸಿವೆ. ನೀಲರತ್ನಗಳನ್ನು ದುಂಬಿಗೆ ಇಲ್ಲಿ ಹೋಲಿಸಿದೆ. ಶ್ರೀ ರಂಗನಾಥನ ಪಾದಗಳನ್ನಲಂಕರಿಸಿರುವ ಆ ಸುಂದರವಾದ ರತ್ನಮಯವಾದ ಕಾಲಂದುಗೆಗಳು ಪಾದಗಳಿಗೆ ನಮಿಸಿದ ಬ್ರಹ್ಮದೇವನ. ಮುಖಗಳ ಸಮೂಹವೋ ಎಂಬಂತಿವೆ. ಶ್ರೀ ರಂಗನಾಥನು ಶ್ರೀ ರಾಮಚಂದ್ರನ ಕುಲಧನವಾದುದರಿಂದ ರಾಮ ಸೀತೆಯರು ಅವನ ಪಾದಕ್ಕೆ ಅರ್ಪಿಸಿದ ಚಿನ್ನದ ಕಮಲಗಳಿಂದ ಶೋಭಿಸಿವೆಯೋ ಎಂಬಂತೆ ಪ್ರಕಾಶಿಸುತ್ತಿವೆ. ಈ ಮೂರು ರೀತಿಯಲ್ಲಿ ಆ ಪಾದಗಳ ಸೌಂದರ್ಯವನ್ನು ಅನುಭವಿಸಿದ್ದಾರೆ. ಇಂಥ ಹಿರಿಮೆಯ ಶ್ರೀಪಾದಗಳಿಗೆ 'ತಾಳ್‌ಹಳ್ ತಲೆಯಿಲ್ ವಣಂಗಿ' 'ಕಮಲಪಾದಂ ಅಣುಹುವಾರ್ ಅಮರರಾವಾರ್' 'ವಾಟ್ಪಾತ್ತಾನ್ ಅಡಿವಣಂಗೇ' ಎಂದು ನಮ್ಮಾಳ್ವಾರ್ ಹೇಳಿದಂತೆ ವಂದನೆಯನ್ನು ಸಲ್ಲಿಸಿದೆ. ಇದು ಶರಣಾಗತಿಯನ್ನು ಸೂಚಿಸುತ್ತದೆ. ಶ್ರೀ ರಂಗನಾಥನ ಪದಕಮಲಗಳಲ್ಲಿ ಹೀಗೆ ಶರಣಾಗತಿಯನ್ನು ಮಾಡಿ ಪೂರ್ವಶತಕವನ್ನು ಉಪಸಂಹಾರ ಮಾಡಿದ್ದಾರೆ. 'ಎಂಬೆರುಮಾನ್ ಅಡಿಯಿಣೈ ಅಲ್ಲದೋರರಣೇ' 'ಉನ್ನಡಿಕೀಳ್ ಅಮರ್‌ನ್ದು ಪುಹುಂದೇನೇ' ಎಂದು ನಮ್ಮಾಳ್ವಾರ್ರವರು ಹೇಳಿರುವುದಕ್ಕೆ ಇದು ಸಂವಾದಿಯಾಗಿದೆ.

(ಪೂರ್ವ ಶತಕಂ ಸಂಪೂರ್ಣಂ)

॥ಶ್ರೀಃ॥

# ಶ್ರೀ ರಂಗರಾಜಸ್ತವ

## ಉತ್ತರ ಶತಕ

ಹರ್ತುಂ ತಮಸ್ಸದಸತೀ ಚ ವಿವೇಕ್ತುಮೀಶಃ
ಮಾನಂ ಪ್ರದೀಪಮಿವ ಕಾರುಣಿಕೋ ದದಾತಿ ।
ತೇನಾವಲೋಕ್ಯ ಕೃತಿನಃ ಪರಿಭುಂಜತೇ ತಂ
ತತ್ರೈವ ಕೇಪಿ ಚಪಲಾಃ ಶಲಭೀಭವಂತಿ ॥ ॥೧॥

(ಕಾರುಣಿಕಃ) ಕರುಣಾಪೂರ್ಣನಾದ (ಈಶಃ) ಭಗವಂತನು (ತಮಃ) ಅಜ್ಞಾನವಾಗುವ ಕತ್ತಲೆಯನ್ನು (ಹರ್ತುಂ) ಹೋಗಲಾಡಿಸಲೂ (ಸದಸತೀ ಚ) ಇರುವುದು ಇಲ್ಲದಿರುವುದು ಎಂಬ ಒಳ್ಳೆಯದು ಮತ್ತು ಕೆಟ್ಟದನ್ನು (ವಿವೇಕ್ತುಂ ಚ) ವಿವೇಚನೆ ಮಾಡಿ ತಿಳಿಯುವುದಕ್ಕೂ (ಪ್ರದೀಪಮಿವ) ದೀಪವನ್ನು ಹೋಲುವ (ಮಾನಂ) ಶಾಸ್ತ್ರ ಪ್ರಮಾಣವನ್ನು (ದದಾತಿ) ಕೊಟ್ಟು ಅನುಗ್ರಹಿಸುತ್ತಾನೆ. (ಕೃತಿನಃ) ಭಾಗ್ಯಶಾಲಿಗಳು (ತೇನ) ಆ ದೀಪವನ್ನು ಉಪಯೋಗಿಸಿಕೊಂಡು ಅದರಿಂದ (ತಂ) ಆ ಭಗವಂತನನ್ನು (ಅವಲೋಕ್ಯ) ಕಂಡು ತಿಳಿದವರಾಗಿ (ಪರಿಭುಂಜತೇ) ಅನುಭವಿಸುತ್ತಾರೆ. (ಕೇಪಿ ಚಪಲಾಃ) ಕೆಲವರು ಅವಿವೇಕಿಗಳಾದರೋ (ತತ್ರೈವ) ಆ ದೀಪದಲ್ಲಿಯೇ (ಶಲಭೀಭವಂತಿ) ದೀಪದ ಹುಳುಗಳಂತೆ ಬಿದ್ದು ನಷ್ಟವಾಗುತ್ತಾರೆ.

'ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋ ವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ' ಎಂದು ಹೇಳಿದಂತೆ, ಸರ್ವಲೋಕಕ್ಕೂ ಆಚಾರ್ಯನಾದ

ಭಗವಂತನು ಬ್ರಹ್ಮದೇವನಿಗೆ ವೇದವನ್ನುಪದೇಶಮಾಡಿದನು ಮತ್ತು ಅವನ ಮೂಲಕ ಶಾಸ್ತ್ರವನ್ನು ಪ್ರವರ್ತನಗೊಳಿಸಿದನು. ತತ್ವ ಹಿತಪುರುಷಾರ್ಥ ಗಳನ್ನು ಸರಿಯಾಗಿ ಅರಿಯಲು ಸಾಧಕವಾದ ಶಾಸ್ತ್ರವನ್ನು ಇಲ್ಲಿ ದೀಪಕ್ಕೆ ಹೋಲಿಸಿದೆ. ಭಗವಂತನೇ 'ಮಗ್ನಾನುದ್ಧರತೇ ಲೋಕಾನ್ ಕಾರುಣ್ಯಾತ್ ಶಾಸ್ತ್ರಪಾಣಿನಾ' ಎಂದು ಹೇಳಿದಂತೆ ಲೋಕದ ಜನ ಶಾಸ್ತ್ರದಿಂದ ಈಶ್ವರನ ಸ್ವರೂಪವನ್ನೂ ಈ ಶಿತವ್ಯದ ಸ್ವರೂಪವನ್ನು ತಿಳಿಯುವಂತೆ ಕರುಣಿಸಿದ್ದಾನೆ. ದೀಪವು ಬಾಹ್ಯವಾದ ಕತ್ತಲೆಯನ್ನು ಕಳೆದರೆ ಶಾಸ್ತ್ರ ಪ್ರದೀಪವು ಆಂತರವಾದ ಅಂಧಕಾರವನ್ನು ಹೋಗಲಾಡಿಸುತ್ತದೆ. 'ಮಾನಾಧೀನಾ ಮೇಯಸಿದ್ಧಿ:' ಎಂದು ಹೇಳಿದಂತೆ ಈ ಶಾಸ್ತ್ರಪ್ರಮಾಣದಿಂದಲೇ ಪ್ರಮೇಯವನ್ನು ತಿಳಿಯ ಬೇಕಾಗಿದೆ. ಈ ಶಾಸ್ತ್ರವನ್ನು ಉಪಯೋಗಿಸಿಕೊಂಡು ಅದರಿಂದ ಭಗವಂತ ನನ್ನು ತಿಳಿದು ಅವನನ್ನು ಸೇರುತ್ತಾರೆ ಭಾಗ್ಯಶಾಲಿಗಳಾದವರು. ವೇದ ಬಾಹ್ಯರು ಚಪಲರು. ವೇದವನ್ನು ನಂಬದವರು ಅಥವಾ ವೇದಕ್ಕೆ ಸರಿಯಾದ ಅರ್ಥವಿವರಣೆ ಮಾಡದವರು ಆ ಭಗವಂತನನ್ನು ಕಾಣಲಾರರು. ಅಂಥವರು ಬೆಂಕಿಯಲ್ಲಿ ಬಿದ್ದು ಸಾಯುವ ಬೆಂಕಿ ಹುಳುಗಳಂತೆ ನಷ್ಟರಾಗುತ್ತಾರೆ. ಭಗವಂತನು ಶಾಸ್ತ್ರ ಪ್ರಮಾಣವನ್ನು ಅನುಗ್ರಹಿಸಿದನೆಂಬುದನ್ನು ತಿರುಮಂಗೈ ಆಳ್ವಾರ್‌ರವರು

'ಕಲೈಹಳುಂ ವೇದಮುಂ ನೀದಿನೂಲುಮ್
ಕರ್ಪಮುಂ ಶೊರ್ಪೊರುಳ್ ತಾನುಂ ಮತ್ತೈ
ನಿಲೈಹಳುಂ ವಾನವರ್ಕ್ಕುಂ ಪಿರರ್ಕ್ಕುಂ
ನೀರ್ಮೈಯಿನಾಲ್ ಅರುಳ್‌ಶೆಯ್ದು' ಎಂದೂ

(ಪೆರಿಯತಿರು 2-8-5)

'ಮಿಕ್ಕಾನೈ ಮರೈಯಾಯ್‌ವಿರಿಂದ ವಿಳಕ್ಕೈ' ಎಂದೂ ಹೇಳಿದ್ದಾರೆ. ಒಳ್ಳೆಯದು ಯಾವುದು ಕೆಟ್ಟುದು ಯಾವುದು ಎಂಬುದನ್ನು ತಿಳಿಯಲು ಶಾಸ್ತ್ರಪ್ರದೀಪ ಸಹಾಯ ಮಾಡುತ್ತದೆ. 'ಪಣ್ಬುಡೈವೇದಂ ಪಯಂದ ಪರನುಕ್ಕು' ಎಂದೂ 'ವೇದಂ ಮುನ್‌ವಿರಿತ್ತಾನ್' ಎಂದೂ ತಿರುವಾಯ್ಮೊಳಿ ಯಲ್ಲಿಯೂ,

ಇವ್ವೈಯನ್ರೇನಲ್ಲ ಇವ್ವೈಯುನ್ರೇ ತೀಯು
ಇವ್ವೈ ಎನ್ರಿ ಇವ್ವೈ ಅರಿವನೇಲುಂ' ಎಂದು

ಪೆರಿಯ ತಿರುವಂದಾದಿಯಲ್ಲಿಯೂ ನಮ್ಮಾಳ್ವಾರ್ರವರು ಸೂಚಿಸಿರುವುದನ್ನು ಕಾಣಬಹುದು.

**ಯಾ ವೇದಬಾಹ್ಯಾಃ ಸ್ಮೃತಯೋಽರ್ಹದಾದೇಃ**
**ವೇದೇಷು ಯಾಃಕಾಶ್ಚ ಕುದೃಷ್ಟಯಸ್ತಾಃ ।**
**ಆಗಸ್ಕೃತಾಂ ರಂಗನಿಧೇ ತ್ವದಧ್ವನಿ**
**ಅಂಧಂಕರಣ್ಯಃ ಸ್ಮೃತವಾನ್ ಮನುಸ್ತತ್ ॥** ॥೨॥

(ಹೇ ರಂಗನಿಧೇ) ಎಲೈ ಶ್ರೀ ರಂಗನಾಥನೇ, (ಅರ್ಹದಾದೇಃ) ಜೈನರೇ ಮೊದಲಾದವರ (ವೇದಬಾಹ್ಯಾಃ) ವೇದಗಳಿಗಿಂತ ಬೇರೆಯಾದ (ಸ್ಮೃತಯಃ ಯಾಃ) ಯಾವ ಸ್ಮೃತಿಗಳಿವೆಯೋ (ವೇದೇಷು) ವೇದಗಳಲ್ಲಿ (ಯಾಃಕಾಶ್ಚ ಕುದೃಷ್ಟಯಃ) ಕುತ್ಸಿತವಾದ ದೃಷ್ಟಿಗಳನ್ನುಳ್ಳ ಯಾವ ಸ್ಮೃತಿಗಳಿವೆಯೋ (ಆಗಸ್ಕೃತಾಂ) ಪಾಪಿಗಳಾದ ಆ ವೇದಬಾಹ್ಯಾದಿಗಳ (ತಾಃ) ಅಂಥ ಸ್ಮೃತಿಗಳೆಲ್ಲ (ತ್ವದಧ್ವನಿ) ನಿನ್ನನ್ನು ಪಡೆಯುವ ಮಾರ್ಗವಾದ ವೈದಿಕಮಾರ್ಗದಲ್ಲಿ (ಅಂಧಂಕರಣ್ಯಃ) ಮೋಹವನ್ನುಂಟುಮಾಡುತ್ತವೆ ಎಂಬ (ತತ್) ಆ ವಿಷಯವನ್ನು (ಮನುಃ) ಮನುವು (ಸ್ಮೃತವಾನ್) ತನ್ನ ಸ್ಮೃತಿಯಲ್ಲಿ ಹೇಳಿದನು.

ವೇದಬಾಹ್ಯವಾದ ಸ್ಮೃತಿಗಳು ಪ್ರಮಾಣವಲ್ಲವೆಂಬುದನ್ನು ಇಲ್ಲಿ ನಿರೂಪಿಸಿದೆ. ಅವುಗಳೆಲ್ಲವೂ ನಮ್ಮನ್ನು ದಾರಿತಪ್ಪಿಸುವುವಾಗಿವೆ. ಭಗವಂತನನ್ನು ಅರಿಯಲೂ ಪಡೆಯಲೂ ಅವುಗಳಿಂದ ಪ್ರಯೋಜನವಾಗದು. ಮನುಧರ್ಮಶಾಸ್ತ್ರದಲ್ಲಿ ಮನು

'ಯಾ ವೇದಬಾಹ್ಯಾಃ ಸ್ಮೃತಯಃ ಯಾಶ್ಚ ಕಾಶ್ಚ ಕುದೃಷ್ಟಯಃ ।
ಸರ್ವಾಸ್ತಾಃ ನಿಷ್ಫಲಾಃಪ್ರೇತ್ಯ ತಮೋನಿಷ್ಠಾಃ ಹಿ ತಾಃ ಸ್ಮೃತಾಃ॥'

ಎಂದು ಹೇಳಿರುವುದನ್ನು ಇಲ್ಲಿ ಅನುಸಂಧಾನ ಮಾಡಿದೆ. 'ಯದ್ವೈ ಕಿಂಚನ ಮನುರವದತ್ ತದ್ಭೇಷಜಂ' ಎಂದು ಶ್ರುತಿಯು ಹೇಳಿ ತಮ್ಮ ಯೋಗ ಮಹಿಮೆಯಿಂದ ಪರಾವರತತ್ತ್ವವನ್ನು ಸಾಕ್ಷಾತ್ಕಾರ ಮಾಡಿಕೊಂಡ ಮನು

ಮೊದಲಾದವರ ಮಾತುಗಳು ಪರಮಪ್ರಮಾಣವೆಂದು ನಿರೂಪಿಸುತ್ತದೆ. 'ಸ್ಮೃತ್ಯನವಕಾಶದೋಷಪ್ರಸಂಗ ಇತಿ ಚೇತ್ ನ ಅನ್ಯಸ್ಮೃತ್ಯನವಕಾಶ ದೋಷಪ್ರಸಂಗಾತ್' ಎಂಬ ಸೂತ್ರದಲ್ಲಿ ಬಾದರಾಯಣರು ಮನ್ವಾದಿ ಸ್ಮೃತಿಗಳು ಶ್ರುತಿಗಳಿಗನುಸಾರವಾಗಿ ಅರ್ಥನಿರೂಪಣೆ ಮಾಡುವುದರಿಂದ ಪರಮ ಪ್ರಮಾಣವೆಂದೂ ಕಾಪಿಲಸ್ಮೃತಿಗಳೇ ಮೊದಲಾದವನ್ನು ಅನುಸರಿಸ ಬಾರದೆಂದೂ ನಿರೂಪಿಸಿದ್ದಾರೆ

ಪ್ರತ್ಯಕ್ಷ ಪ್ರಮಥನ-ಪಶ್ಯತೋ ಹರತ್ವಾತ್
ನಿರ್ದೋಷಶ್ರುತಿ ವಿಮತೇಶ್ಚ ಬಾಹ್ಯವರ್ತ್ಮ ।
ದುಸ್ತರ್ಕಪ್ರಭವತಯಾ ಚ ವಕ್ತೃದೋಷ-
ಸ್ಪೃಷ್ಟ್ಯಾ ಚ ಪ್ರಜಹತಿ ರಂಗವಿಂದ ವೃದ್ಧಾಃ ॥ ॥೩॥

(ಹೇ ರಂಗವಿಂದ) ಎಲೈ ರಂಗನಾಥನೇ, (ಪ್ರತ್ಯಕ್ಷ ಪ್ರಮಥನ) ಕಣ್ಣಿಂದ ಕಂಡ ವಿಷಯವನ್ನು ಇಲ್ಲವಾಗಿಸುವ (ಪಶ್ಯತೋಹರತ್ವಾತ್) ಪ್ರತ್ಯಕ್ಷವಾದ ಚೌರ್ಯದ ಕಾರಣದಿಂದಲೂ (ನಿರ್ದೋಷಶ್ರುತಿ ವಿಮತೇಶ್ಚ) ದೋಷರಹಿತ ವಾದ ವೇದಗಳಿಗೆ ವಿರುದ್ಧವಾಗಿರುವುದರಿಂದಲೂ (ದುಸ್ತರ್ಕಪ್ರಭವ ತಯಾಚ) ಕುತರ್ಕಗಳಿಂದ ಸಿದ್ಧವಾದುದರಿಂದಲೂ (ವಕ್ತೃದೋಷ ಸ್ಪೃಷ್ಟ್ಯಾಚ) ವಕ್ತೃವಿನ ಪ್ರಮಾದ ಮೊದಲಾದ ದೋಷಗಳ ಸಂಬಂಧದಿಂದಲೂ (ಬಾಹ್ಯ ವರ್ತ್ಮ) ವೇದಬಾಹ್ಯಗಳಾದ ಮಾರ್ಗಗಳನ್ನು (ವೃದ್ಧಾಃ) ವೈದಿಕವೃದ್ಧರು (ಪ್ರಜಹತಿ) ಬಿಟ್ಟು ದೂರ ಹೋಗುತ್ತಾರೆ.

ವೇದಮಾರ್ಗಾನುಯಾಯಿಗಳು ವೇದಗಳನ್ನು ಅಂಗೀಕರಿಸದವರ ಮಾರ್ಗಗಳನ್ನು ಪರಿತ್ಯಜಿಸುತ್ತಾರೆ. ಏಕೆಂದರೆ 1) ಅಂಥವರು ಕಣ್ಣಿಗೆ ಕಂಡ ವಿಷಯವನ್ನೂ ಅಲ್ಲಗಳೆಯುವವರಾಗಿದ್ದಾರೆ. ಕ್ಷಣಿಕವಾದ, ಶೂನ್ಯವಾದ ಮೊದಲಾದುವುಗಳನ್ನು ನಿರೂಪಿಸಿ ನಮ್ಮ ಪ್ರತ್ಯಕ್ಷ ಗೋಚರವಾಗಿರುವ ವಿಷಯಗಳನ್ನು ಅಪಲಾಪ ಮಾಡುತ್ತಾರೆ. (2) ಅಂಥವರ ಆವಾದಗಳು

ನಿರ್ದುಷ್ಟವಾದ ಶ್ರುತಿ ಪ್ರಮಾಣಕ್ಕೆ ವಿರುದ್ಧವಾಗಿವೆ. 3) ಮೂರನೆಯದಾಗಿ ಅಂಥವರ ವಾದಗಳು ದುಸ್ತರ್ಕಗಳಿಂದ ಸಿದ್ಧವಾಗಿವೆ. ಈ ಮೂರು ಕಾರಣ ಗಳಿಂದ ವೇದಬಾಹ್ಯರ ಸಿದ್ಧಾಂತಗಳು ಗ್ರಾಹ್ಯವಲ್ಲ. ಅನ್ಯಥಾ-ಜ್ಞಾನ ಮತ್ತು ವಿಪರೀತ ಜ್ಞಾನಗಳಿಂದ ಕೂಡಿದ ಅವುಗಳನ್ನು ವೈಧಿಕ ವೃದ್ಧರು ಒಪ್ಪುವುದಿಲ್ಲ.

'ಆರ್ಷಂ ಧರ್ಮೋಪದೇಶಂ ಚ ವೇದಶಾಸ್ತ್ರಾವಿರೋಧಿನಾ ।
ಯಸ್ತರ್ಕೇಣಾನುಸಂಧತ್ತೇ ಸ ಧರ್ಮಂ ವೇದ ನೇತರಃ ॥'

ಎಂದು ಹೇಳಿದಂತೆ ಶ್ರುತ್ಯನುಮತವಾದ ತರ್ಕಗಳಿಂದ ಧರ್ಮನಿರ್ಣಯ ಮಾಡುವುದು ಅವಶ್ಯಕವೆಂದು ಹೇಳಿದೆ.

ಅವಯವಿತಯೇದಂ ಕುರ್ವಾಣೈರ್ಬಹಿಷ್ಕರಣೈರ್ವಪುಃ
ನಿರವಯವಕೋಽಹಂಕಾರಾರ್ಹಃ ಪುಮಾನ್ ಕರಣಾತಿಗಃ ।
ಸ್ಫುರತಿ ಹಿ ಜನಾಃ ಪ್ರತ್ಯಾಸತ್ತೇರಿಮೌ ನ ವಿವಂಚತೇ
ತದಧಿಕುರುತಾಂ ಶಾಸ್ತ್ರಂ ರಂಗೇಶ ತೇ ಪರಲೋಕಿನಿ ॥ ॥೪॥

(ಹೇ ರಂಗೇಶ) ಶ್ರೀ ರಂಗನಾಥನೆ, (ವಪುಃ) ಶರೀರವಾದುದು (ಅವಯವಿತಯಾ) ಅವಯವಗಳೊಡನೆ ಕೂಡಿರುವುದರಿಂದ (ಇದಂಕುರ್ವಾಣೈಃ) ಇದು ಎಂದು ವಿಷಯೀಕರಿಸುವ (ಬಹಿಷ್ಕರಣೈಃ) ಬಾಹ್ಯೇಂದ್ರಿಯಗಳಿಂದ (ಸ್ಫುರತಿ) ತೋರುತ್ತದೆ. (ಜೀವಾತ್ಮನಿಗೆ ಆಧೇಯವಾಗಿಯೂ ಪ್ರಕಾರವಾಗಿಯೂ ತೋರುತ್ತದೆ) (ನಿರವಯವಕಃ) ಅವಯವಗಳಿಲ್ಲದವನಾದ (ಪುಮಾನ್) ಜೀವಾತ್ಮನು (ಕರಣಾತಿಗಃ) ಬಾಹೇಂದ್ರಿಯಗಳಿಗೆ ವಿಷಯವಲ್ಲದವನಾಗಿ (ಅಹಂಕಾರಾರ್ಹಃ) 'ಅಹಂ' ಎನ್ನುವ ಪ್ರತೀತಿಗೆ ಅರ್ಹನಾಗಿ (ಸ್ಫುರತಿ) ಪ್ರಕಾಶಿಸುತ್ತಾನೆ. (ಪ್ರತ್ಯಾಸತ್ತೇಃ) ಬೇರ್ಪಡಿಸಲಾಗದೆ ಒಟ್ಟಿಗೇ ಇರುವ ಸಂಬಂಧದ ಕಾರಣ (ಇಮೌ) ಈ ದೇಹ ಮತ್ತು ಆತ್ಮಾ ಇವೆರಡನ್ನೂ (ಜನಾಃ) ಅವಿವೇಕಿಗಳಾದ ಜನರು (ನ ವಿವಂಚತೇ)

ವಿವೇಚಿಸಿ ತಿಳಿಯಲಿಲ್ಲ. (ತತ್) ಆದುದರಿಂದ (ತೇ) ನಿನ್ನ ಆಜ್ಞಾರೂಪವಾದ (ಶಾಸ್ತ್ರಂ) ವೇದಶಾಸ್ತ್ರವು (ಪರಲೋಕಿನಿ) ಪರಲೋಕಪ್ರಾಪ್ತಿಯೋಗ್ಯನಾದ ಜೀವಾತ್ಮನ ಬಗೆಗೆ (ಅಧಿಕುರುತಾಂ) ಪ್ರಮಾಣವಾಗಲಿ.

ಚಾರ್ವಾಕರು 'ದೇಹವೇ ಆತ್ಮಾ' ಎಂದು ಹೇಳಿ ದೇಹಾತಿರಿಕ್ತನಾದ ಆತ್ಮನಿಲ್ಲವೆನ್ನುವರು. ಈ ದೇಹಾತ್ಮವಾದವು ಅಯುಕ್ತವಾದುದೆಂದು ಇಲ್ಲಿ ನಿರೂಪಿಸಿದೆ. ದೇಹವು ಬಾಹ್ಯೇಂದ್ರಿಯಗಳಿಗೆ ಗೋಚರಿಸುತ್ತದೆ. ಜೀವಾತ್ಮನು ಬಾಹ್ಯೇಂದ್ರಿಯಗಳಿಗೆ ವಿಷಯವಾಗಲಾರನು. ಅವನನ್ನು ಅಂತರವಾದ ಇಂದ್ರಿಯದಿಂದ ಅರಿಯಬಹುದು. ಆತ್ಮನು ನಿತ್ಯನೂ ನಿರವಯುವಿಯೂ ಆಗಿದ್ದಾನೆ. ಶರೀರವಾದರೋ ಅನಿತ್ಯವೂ ಸಾವಯವವೂ ಆಗಿದೆ. 'ಅಂತವಂತ ಇಮೇ ದೇಹಾಃ ನಿತ್ಯಸ್ಯೋಕ್ತಾಃ ಶರೀರಿಣಃ । ಅನಾಶಿನೋऽಪ್ರಮೇಯಸ್ಯ' 'ವೇದಾವಿನಾಶಿನಂ ನಿತ್ಯಂ ಯ ಏನಮಜಮವ್ಯಯಂ ।' ಎಂದೂ ಗೀತಾಚಾರ್ಯನು ಅರ್ಜುನನಿಗೆ ಉಪದೇಶಿಸಿ ದೇಹಕ್ಕಿಂತ ಬೇರೆಯಾದ ಆತ್ಮನ ಸ್ವರೂಪವನ್ನು ತಿಳಿಸಿದ್ದಾನೆ. ಆತ್ಮವು ದೇಹದೊಡನೆ ಸಂಸರ್ಗ ಹೊಂದಿರುವುದರಿಂದ ದೇಹವೇ ಆತ್ಮವೆಂಬ ಭ್ರಮೆ ಅವಿವೇಕಿಗಳಿಗೆ ಉಂಟಾಗಬಹುದು. ಶಾಸ್ತ್ರಗಳು ದೇಹಕ್ಕಿಂತ ಬೇರೆಯಾದ ಆತ್ಮನ ಸ್ವರೂಪವನ್ನು 'ನ ಜಾಯತೇ ಮ್ರಿಯತೇ ವಾ ವಿಪಶ್ಚಿತ್ ನಾಯಂ ಭೂತ್ವಾ ಭವಿತಾವಾನ ಭೂಯಃ' ಎಂದೆಂದು ಹೇಳುತ್ತವೆ. ಜ್ಯೋತಿಷ್ಟೋಮಾದಿ ಯಾಗಗಳನ್ನು ಮಾಡಿದವನು ಸ್ವರ್ಗಾದಿ ಸುಖಗಳನ್ನು ಅನುಭವಿಸುವನೆಂದೂ ಬ್ರಹ್ಮವನ್ನರಿತವನು ಬ್ರಹ್ಮವಸ್ತುವನ್ನು ಪಡೆಯುವನೆಂದೂ ಶ್ರುತಿಗಳು ಪ್ರತಿಪಾದಿಸುತ್ತವೆ. ನಿತ್ಯನಾದ ಆತ್ಮನಿಲ್ಲದೆ ಇದ್ದರೆ ಈ ಸುಖಗಳನ್ನು ಯಾರು ಅನುಭವಿಸಿಯಾರು ? 'ವಾಯುರನಿಲಮಮೃತಂ ಅಥೇದಂ ಭಸ್ಮಾಂತಂ ಶರೀರಂ' ಎಂದು ಈಶಾವ್ಯಾಸವು ಆತ್ಮನ ಮತ್ತು ದೇಹದ ಸ್ವರೂಪ ಸ್ವಭಾವವನ್ನು ತಿಳಿಸುತ್ತದೆ. 'ಉತ್ಕ್ರಾಮಂತಂ ಸ್ಥಿತಂ ವಾಪಿ ಭುಂಜಾನಂ ವಾ ಗುಣಾನ್ವಿತಂ। ವಿಮೂಢಾ ನಾನುಪಶ್ಯಂತಿ ಪಶ್ಯಂತಿ ಜ್ಞಾನಚಕ್ಷುಷಃ ॥' ಎಂದು ಗೀತಾಚಾರ್ಯನು ಉಪದೇಶಿಸಿದ್ದಾನೆ. ತ್ರಿಗುಣದ ಪರಿಣಾಮವಾದ ಶರೀರದೊಡನೆ ಆತ್ಮನು ಸಂಸರ್ಗ ಹೊಂದಿರುವ ಕಾರಣ ಮೂಢರು ಅವನು ಶರೀರವನ್ನು ಬಿಟ್ಟು ಹೋದಾಗ,

ಶರೀರದಲ್ಲಿರುವಾಗ ಅಥವಾ ವಿಷಯಗಳನ್ನನುಭವಿಸುವಾಗ ಆವನನ್ನು ಕಾಣರು. ಆದರೆ ಜ್ಞಾನದೃಷ್ಟಿಯುಳ್ಳವರು ಶರೀರಕ್ಕಿಂತಲೂ ಆತ್ಮನು ಬೇರೆ ಎಂಬ ವಿವೇಕವನ್ನು ಹೊಂದಿ ಆತ್ಮನು ಶರೀರಕ್ಕಿಂತ ವಿಲಕ್ಷಣನಾದವನೆಂದು ತಿಳಿಯುತ್ತಾರೆ. ಆತ್ಮವಸ್ತು 'ಅಹಂ' ಎಂದು ಗೋಚರಿಸುತ್ತದೆ. ದೇಹವು 'ಇದಂ' ಎಂದು ಗೋಚರಿಸುತ್ತದೆ. ಇವೆರಡೂ ಒಂದೇ ಆಗದೆ ಬೇರೆ ಬೇರೆಯಾದವು. ಶಾಸ್ತ್ರ ಪ್ರಮಾಣಕ್ಕನುಸಾರವಾಗಿ ಇವುಗಳನ್ನು ಅರಿಯಬೇಕೆಂದು ಇಲ್ಲಿ ತಿಳಿಸಿದೆ.

**ಪ್ರತ್ಯಕ್ಷಾ ಶ್ರುತಿರರ್ಥಧೀಶ್ಚ ನ ತಥಾ ದೋಷಾಸ್ತದರ್ಥಾಃಪುನಃ**
**ಧರ್ಮಾಧರ್ಮಪರಾವರೇಶ್ವರಮುಖಾಃ ಪ್ರತ್ಯಕ್ಷಬಾಧ್ಯೋ ನ ಚ ।**
**ತಚ್ಚಾರ್ವಾಕಮತೇಽಪಿ ರಂಗರಮಣ ಪ್ರತ್ಯಕ್ಷವತ್ಸಾ ಪ್ರಮಾ**
**ಯೋಗೋನ್ಮೀಲಿತಧೀಸ್ತದರ್ಥಂ ಅಥವಾ**
**ಪ್ರತ್ಯಕ್ಷಮೀಕ್ಷೇತ ಸಃ ॥ ॥೫॥**

(ಶ್ರುತಿಃ) ವೇದವು (ಪ್ರತ್ಯಕ್ಷಾ) ಕಿವಿಗೆ ಪ್ರತ್ಯಕ್ಷವಾಗಿದೆ (ಅರ್ಥಧೀಶ್ಚ) ಆ ವೇದದ ಅರ್ಥಜ್ಞಾನವೂ ಸಹ ಪ್ರತ್ಯಕ್ಷವಾಗಿದೆ ಮನಸ್ಸಿಗೆ. (ದೋಷಾಃ) ಪೌರುಷೇಯತ್ವದ ಕಾರಣ ಬರುವ ಭ್ರಮೆ, ವಿಪ್ರಲಂಭ, ಪ್ರಮಾದ ಮೊದಲಾದ ದೋಷಗಳು (ನತಥಾ) ಹಾಗೆ ಪ್ರತ್ಯಕ್ಷವಾಗಿಲ್ಲ. (ತದರ್ಥಾಃ) ಆ ವೇದದ ಅರ್ಥವಾದ (ಧರ್ಮಾಧರ್ಮ ಪರಾವರೇಶ್ವರಮುಖಾಃ) ಧರ್ಮ, ಅಧರ್ಮ, ಪರಮೇಶ್ವರ, ಅವನಿಗಿಂತ ಕೆಳಗಿನವರಾದ ಬ್ರಹ್ಮ ಮೊದಲಾದವರು (ನ ಚ ಪ್ರತ್ಯಕ್ಷ ಬಾಧ್ಯಃ) ಪ್ರತ್ಯಕ್ಷದಿಂದ ಬಾಧಿತವಾಗುವಂಥದಲ್ಲ. (ಹೇ ರಂಗರಮಣ) ಶ್ರೀ ರಂಗನಾಥನೇ, (ತತ್) ಆದ್ದುದರಿಂದ (ಚಾರ್ವಾಕ ಮತೇ ಅಪಿ) ಚಾರ್ವಾಕ ಮತದಲ್ಲಿಯೂ (ಸಾ) ಆ ಶ್ರುತಿಯು (ಪ್ರತ್ಯಕ್ಷವತ್) ಪ್ರತ್ಯಕ್ಷ ಪ್ರಮಾಣಕ್ಕೆ ಸಮನಾಗಿ (ಪ್ರಮಾ) ಪ್ರಮಾಣವೇ ಆಗಿದೆ. (ಅಥವಾ) ಅಥವಾ (ಸಃ) ಆ ಚಾರ್ವಾಕನು (ಯೋಗೋನ್ಮೀಲಿತಧೀಃಸನ್) ಯೋಗದಿಂದ ವಿಕಸಿತವಾದ ಬುದ್ಧಿಯುಳ್ಳವನಾಗಿ (ತದರ್ಥಂ) ಮೇಲೆ ಹೇಳಿದ ವೇದಾರ್ಥವನ್ನು (ಪ್ರತ್ಯಕ್ಷಂ) ಪ್ರತ್ಯಕ್ಷವಾಗಿಯೇ (ಈಕ್ಷೇತ) ಕಾಣಬಹುದು.

ಪ್ರತ್ಯಕ್ಷವೊಂದೇ ಪ್ರಮಾಣವೆನ್ನುವ ಚಾರ್ವಾಕನ ಮತದಲ್ಲಿಯೂ ವೇದವೂ ಪ್ರತ್ಯಕ್ಷವಾಗಬಹುದೆಂದು ಇಲ್ಲಿ ಹೇಳಿದೆ. ವೇದವು ಶ್ರಾವಣ ಪ್ರತ್ಯಕ್ಷವಾಗುವುದು. ಅದರ ಅರ್ಥ ಮನಸ್ಸಿಗೆ ಪ್ರತ್ಯಕ್ಷವಾಗುತ್ತದೆ ಅದು ಮಾನಸ ಪ್ರತ್ಯಕ್ಷ. ಆದುದರಿಂದ ವೇದಗಳೂ ಪ್ರಮಾಣಗಳೇ ಆಗುತ್ತವೆ. ಪೌರುಷೇಯವಾದ ದೋಷಗಳೂ ವೇದಕ್ಕೆ ಉಂಟಾಗವು. ಪುರುಷನು ಹೇಳುವ ಶಬ್ದಗಳಲ್ಲಿ ದೋಷ ಬರಬಹುದು. ಶ್ರುತಿವಾಕ್ಯವಾಗಲೀ, ಆ ವಾಕ್ಯದಿಂದ ಬೋಧಿತವಾದ ಅರ್ಥಗಳಾಗಲೀ ಬಾಧಿತವಾಗುವುದಿಲ್ಲ 'ಅಗ್ನಿನಾ ಸಿಂಚತ್' ಮೊದಲಾದ ಪೌರುಷೇಯ ವಾಕ್ಯದಂತೆ. ಆದುದರಿಂದ ಚಾರ್ವಾಕನ ಮತ ದಲ್ಲಿಯೂ ವೇದ ಪ್ರತ್ಯಕ್ಷವಾಗಲು ಕಡಿಮೆಯಿಲ್ಲ ಎಂದು ಹೇಳುತ್ತಾರೆ. ಚಾರ್ವಾಕನು ಯೋಗೋನ್ಮೀಲಿತ ಬುದ್ಧಿಯುವನಾಗಿ ಈ ಅರ್ಥಗಳನ್ನು ಕಾಣ ಬಹುದು ಎಂದು ಇಲ್ಲಿ ನಿರೂಪಿಸಿದೆ.

ನ ಸದಸದುಭಯಂ ವಾ ನೋಭಯಸ್ಮಾದ್ಬಹಿರ್ವಾ
ಜಗದಿತಿ ನ ಕಿಲೈಕಾಂ ಕೋಟಿಮಾಟೀಕತೇ ತತ್ ।
ಇತಿ ನಿರುಪಧಿ ಸರ್ವಂ ಸರ್ವಿಕಾತೋ ನಿಷೇಧನ್
ವರದ ಸುಗತಪಾಶಶ್ಚೋರಲಾವಂ ವಿಲಾವ್ಯಃ ॥ ॥೬॥

(ಹೇ ವರದ) ಎಲ್ಲ ವರಗಳನ್ನು ಕೊಡುವ ರಂಗನಾಥನೇ, (ಜಗತ್) ನಮಗೆಲ್ಲಾ ಕಾಣುತ್ತಿರುವ ಈ ಜಗತ್ತು (ನಸತ್ ಅಸತ್‌ನ) ಸತ್ತೂ ಅಲ್ಲ ಅಸತ್ತೂ ಅಲ್ಲ (ಉಭಯಂವಾನ) ಸದಸತ್ತೂ ಅಲ್ಲ. (ಉಭಯಸ್ಮಾತ್ ಬಹಿರ್ನ) ಎರಡಕ್ಕೂ ಬೇರೆಯಾದುದೂ ಅಲ್ಲ. (ಇತಿ) ಈ ರೀತಿಯಲ್ಲಿ (ಏಕಾಂಕೋಟಿಂ) ಮೇಲೆ ಹೇಳಿದ ನಾಲ್ಕು ಬಗೆಗಳಲ್ಲಿ ಒಂದರಲ್ಲಿಯೂ (ತತ್) ಆ ಜಗತ್ತು (ನ ಆ ಟೀಕತೇ) ಅಡಗುವುದಿಲ್ಲ (ಇತಿ) ಹೀಗೆಂದು (ನಿರುಪಧಿ ಯಥಾತಥಾ) ಅಧಿಷ್ಠಾನವೊಂದಿಲ್ಲದಂತೆಯೇ (ಸರ್ವಂಸರ್ವಿಕಾತಃ ನಿಷೇರ್ಧ) ಸರ್ವಂನಾಸ್ತಿ ಸರ್ವಂನಾಸ್ತಿ ಎಂದು ಹೇಳಿಕೊಂಡು ಸರ್ವಶೂನ್ಯವಾದವನ್ನು ಪ್ರತಿಪಾದಿಸುವ (ಸುಗತಪಾಶಃ) ಕುತ್ಸಿತನಾದ ಬೌದ್ಧನು (ಚೋರಲಾವಂ) ಕಳ್ಳನನ್ನು ವಧಿಸುವಂತೆ (ವಿಲಾವ್ಯಃ) ಕತ್ತರಿಸಿ ಹಾಕಲ್ಪಡಬೇಕು.

ಸರ್ವಶೂನ್ಯವಾದಿಯನ್ನು ಇಲ್ಲಿ ಖಂಡಿಸಲಾಗಿದೆ. ಜಗತ್ತು ಸತ್ತೂ ಅಲ್ಲ, ಅಸತ್ತೂ ಅಲ್ಲ, ಸದಸತ್ತೂ ಅಲ್ಲ, ಸದಸದ್ವಿಲಕ್ಷಣವೂ ಅಲ್ಲ ಎಂದು ಹೇಳಿ 'ಚತುಷ್ಕೋಟಿ ವಿನಿರ್ಮುಕ್ತಂತತ್ತ್ವಂ ಮಾಧ್ಯಮಿಕಾವಿದುಃ,' ಎಂದು ಹೇಳು ವಂತೆ ಮಾಧ್ಯಮಿಕರು ಶೂನ್ಯವಾದವನ್ನು ಪ್ರತಿಪಾದಿಸುವರು. ಅಂಥ ಬೌದ್ಧ ನನ್ನು ಖಂಡಿಸಬೇಕು ಎಂದು ಇಲ್ಲಿನಿರೂಪಿಸಿದ್ದಾರೆ.'ಸರ್ವಥಾ ಅನುಪಪತ್ತೇಶ್ಚ' ಎಂಬ ಸೂತ್ರದಲ್ಲಿ ಬಾದರಾಯಣರು ಈ ವಾದವನ್ನು ಖಂಡಿಸಿದ್ದಾರೆ. ಎಲ್ಲ ವನ್ನೂ 'ಸತ್' ಎನ್ನುವಿರೋ 'ಅಸತ್' ಎನ್ನುವಿರೋ ಅಥವಾ ಬೇರೆ ರೀತಿ ಹೇಳುವಿರೋ? ಹೇಗೆ ಹೇಳಿದರೂ ತುಚ್ಛತ್ವವು ಸಂಭವಿಸದು. ಭಾವಾಭಾವ ಶಬ್ದಗಳು ಲೋಕದಲ್ಲಿ ಇರುವ ವಸ್ತುಗಳ ಅವಸ್ಥಾವಿಶೇಷಗಳನ್ನು ತಿಳಿಸುವು ವಾಗಿವೆ. 'ಅತಃ ಸರ್ವಂ ಶೂನ್ಯಂ ಇತಿ ಪ್ರತಿಜಾನತಾ ಸರ್ವಂಸತ್ ಇತಿ ಪ್ರತಿಜಾನತೇವ ಸರ್ವಸ್ಯ ವಿದ್ಯಮಾನಸ್ಯ ಅವಸ್ಥಾವಿಶೇಷಯೋಗಿತ್ವೈವ ಪ್ರತಿಜ್ಞಾ ತಾ ಭವತಿ ಇತಿ ಭವದಭಿಮತಾ ತುಚ್ಛತಾ ನ ಕುತಶ್ಚಿದಪಿ ಸಿಧ್ಯತಿ' ಎಂದು ಶ್ರೀ ಭಾಷ್ಯಕಾರರು ಪ್ರತಿಪಾದಿಸಿರುವುದನ್ನು ಕಾಣಬಹುದು. ಯಾವ ಪ್ರಮಾಣ ದಿಂದ. ಶೂನ್ಯತ್ವವನ್ನು ಸಾಧಿಸುವಿರೋ ಆ ಪ್ರಮಾಣದ ಸತ್ಯತ್ವವನ್ನು ಒಪ್ಪಿ ಕೊಳ್ಳಲೇಬೇಕಲ್ಲ! ಆ ಪ್ರಮಾಣವೂ ಅಸತ್ಯವೆಂದರೆ ಸರ್ವವೂ ಸತ್ಯವೆಂದೇ ಸಿದ್ಧವಾಗುವುದು. ಹೇಗೂ ಸರ್ವಶೂನ್ಯತ್ವ ಅನುಪಪನ್ನವೇ ಆಗುತ್ತದೆ.

ಪ್ರತೀತಿಶ್ಚೇದಿಷ್ಟಾ ನ ನಿಖಿಲನಿಷೇಧೋ ಯದಿ ನ ಕೋ
ನಿಷೇದ್ಧಾಽತೋ ನೇಷ್ಟೋ ನಿರುಪಧಿ ನಿಷೇಧಃ ಸ್ಸದುಪಧಾ ।
ನಿಷೇಧೇಽನ್ಯತ್ಸಿಧ್ಯೇದ್ವರದ ಘಟಭಂಗೇ ಶಕಲವತ್
ಪ್ರಮಾಶೂನ್ಯೇ ಪಕ್ಷೇ ಶ್ರುತಿರಪಿ
ಮತೇಽಸ್ಮಿನ್ ವಿಜಯತಾಂ ॥ ॥೭॥೮

(ಹೇ ವರದ) ಎಲೈ ವರಪ್ರದನಾದ ರಂಗನಾಥನೇ, (ಪ್ರತೀತಿಃ) 'ಸರ್ವಂ ನಾಸ್ತಿ' ಎಂಬುವ ಪ್ರತೀತಿಯು (ಇಷ್ಟಾಚೇತ್) ಇಷ್ಟವೆಂದು ಅಭಿಪ್ರಾಯ ವಾದರೆ (ನಿಖಿಲ ನಿಷೇಧಃ) ಸಮಸ್ತ ವಸ್ತುಗಳೂ ನಿಷೇಧವಾದುದು (ನ)

ಪ್ರತ್ಯಕ್ಷವೊಂದೇ ಪ್ರಮಾಣವೆನ್ನುವ ಚಾರ್ವಾಕನ ಮತದಲ್ಲಿಯೂ ವೇದವೂ ಪ್ರತ್ಯಕ್ಷವಾಗಬಹುದೆಂದು ಇಲ್ಲಿ ಹೇಳಿದೆ. ವೇದವು ಶ್ರಾವಣ ಪ್ರತ್ಯಕ್ಷವಾಗುವುದು. ಅದರ ಅರ್ಥ ಮನಸ್ಸಿಗೆ ಪ್ರತ್ಯಕ್ಷವಾಗುತ್ತದೆ ಅದು ಮಾನಸ ಪ್ರತ್ಯಕ್ಷ. ಆದುದರಿಂದ ವೇದಗಳೂ ಪ್ರಮಾಣಗಳೇ ಆಗುತ್ತವೆ. ಪೌರುಷೇಯವಾದ ದೋಷಗಳೂ ವೇದಕ್ಕೆ ಉಂಟಾಗವು. ಪುರುಷನು ಹೇಳುವ ಶಬ್ದಗಳಲ್ಲಿ ದೋಷ ಬರಬಹುದು. ಶ್ರುತಿವಾಕ್ಯವಾಗಲೀ, ಆ ವಾಕ್ಯದಿಂದ ಬೋಧಿತವಾದ ಅರ್ಥಗಳಾಗಲೀ ಬಾಧಿತವಾಗುವುದಿಲ್ಲ 'ಅಗ್ನಿನಾ ಸಿಂಚೇತ್' ಮೊದಲಾದ ಪೌರುಷೇಯ ವಾಕ್ಯದಂತೆ. ಆದುದರಿಂದ ಚಾರ್ವಾಕನ ಮತ ದಲ್ಲಿಯೂ ವೇದ ಪ್ರತ್ಯಕ್ಷವಾಗಲು ಕಡಿಮೆಯಿಲ್ಲ ಎಂದು ಹೇಳುತ್ತಾರೆ. ಚಾರ್ವಾಕನು ಯೋಗೋನ್ಮೀಲಿತ ಬುದ್ಧಿಯುವನಾಗಿ ಈ ಅರ್ಥಗಳನ್ನು ಕಾಣ ಬಹುದು ಎಂದು ಇಲ್ಲಿ ನಿರೂಪಿಸಿದೆ.

ನ ಸದಸದುಭಯಂ ವಾ ನೋಭಯಸ್ಮಾದ್ಬಹಿರ್ವಾ
ಜಗದಿತಿ ನ ಕಿಲೈಕಾಂ ಕೋಟಿಮಾಟೀಕತೇ ತತ್ ।
ಇತಿ ನಿರುಪಧಿ ಸರ್ವಂ ಸರ್ವಿಕಾತೋ ನಿಷೇಧನ್
ವರದ ಸುಗತಪಾಶಶ್ಚೋರಲಾವಂ ವಿಲಾವ್ಯಃ ॥ ॥೬॥

(ಹೇ ವರದ) ಎಲ್ಲ ವರಗಳನ್ನು ಕೊಡುವ ರಂಗನಾಥನೇ, (ಜಗತ್) ನಮಗೆಲ್ಲಾ ಕಾಣುತ್ತಿರುವ ಈ ಜಗತ್ತು (ನಸತ್ ಅಸತ್‌ನ) ಸತ್ತೂ ಅಲ್ಲ ಅಸತ್ತೂ ಅಲ್ಲ (ಉಭಯಂವಾನ) ಸದಸತ್ತೂ ಅಲ್ಲ. (ಉಭಯಸ್ಮಾತ್ ಬಹಿರ್ನ) ಎರಡಕ್ಕೂ ಬೇರೆಯಾದುದೂ ಅಲ್ಲ. (ಇತಿ) ಈ ರೀತಿಯಲ್ಲಿ (ಏಕಾಂಕೋಟಿಂ) ಮೇಲೆ ಹೇಳಿದ ನಾಲ್ಕು ಬಗೆಗಳಲ್ಲಿ ಒಂದರಲ್ಲಿಯೂ (ತತ್) ಆ ಜಗತ್ತು (ನ ಆ ಟೀಕತೇ) ಅಡಗುವುದಿಲ್ಲ (ಇತಿ) ಹೀಗೆಂದು (ನಿರುಪಧಿ ಯಥಾತಥಾ) ಆಧಿಷ್ಠಾನವೊಂದಿಲ್ಲದಂತೆಯೇ (ಸರ್ವಂಸರ್ವಿಕಾತಃ ನಿಷೇಧ್ಯ) ಸರ್ವಂನಾಸ್ತಿ ಸರ್ವಂನಾಸ್ತಿ ಎಂದು ಹೇಳಿಕೊಂಡು ಸರ್ವಶೂನ್ಯವಾದವನ್ನು ಪ್ರತಿಪಾದಿಸುವ (ಸುಗತಪಾಶಃ) ಕುತ್ಸಿತನಾದ ಬೌದ್ಧನು (ಚೋರಲಾವಂ) ಕಳ್ಳನನ್ನು ವಧಿಸುವಂತೆ (ವಿಲಾವ್ಯಃ) ಕತ್ತರಿಸಿ ಹಾಕಲ್ಪಡಬೇಕು.

ಸರ್ವಶೂನ್ಯವಾದಿಯನ್ನು ಇಲ್ಲಿ ಖಂಡಿಸಲಾಗಿದೆ. ಜಗತ್ತು ಸತ್ತೂ ಅಲ್ಲ, ಅಸತ್ತೂ ಅಲ್ಲ, ಸದಸತ್ತೂ ಅಲ್ಲ, ಸದಸದ್ವಿಲಕ್ಷಣವೂ ಅಲ್ಲ ಎಂದು ಹೇಳಿ 'ಚತುಷ್ಕೋಟಿ ವಿನಿರ್ಮುಕ್ತಂತತ್ತ್ವಂ ಮಾಧ್ಯಮಿಕಾವಿದುಃ,' ಎಂದು ಹೇಳು ವಂತೆ ಮಾಧ್ಯಮಿಕರು ಶೂನ್ಯವಾದವನ್ನು ಪ್ರತಿಪಾದಿಸುವರು. ಅಂಥ ಬೌದ್ಧ ನನ್ನು ಖಂಡಿಸಬೇಕು ಎಂದು ಇಲ್ಲಿನಿರೂಪಿಸಿದ್ದಾರೆ.'ಸರ್ವಥಾ ಅನುಪಪತ್ತೇಶ್ಚ' ಎಂಬ ಸೂತ್ರದಲ್ಲಿ ಬಾದರಾಯಣರು ಈ ವಾದವನ್ನು ಖಂಡಿಸಿದ್ದಾರೆ. ಎಲ್ಲ ವನ್ನೂ 'ಸತ್' ಎನ್ನುವಿರೋ 'ಅಸತ್' ಎನ್ನುವಿರೋ ಅಥವಾ ಬೇರೆ ರೀತಿ ಹೇಳುವಿರೋ? ಹೇಗೆ ಹೇಳಿದರೂ ತುಚ್ಛತ್ವವು ಸಂಭವಿಸದು. ಭಾವಾಭಾವ ಶಬ್ದಗಳು ಲೋಕದಲ್ಲಿ ಇರುವ ವಸ್ತುಗಳ ಅವಸ್ಥಾವಿಶೇಷಗಳನ್ನು ತಿಳಿಸುವು ವಾಗಿವೆ. 'ಅತಃ ಸರ್ವಂ ಶೂನ್ಯಂ ಇತಿ ಪ್ರತಿಜಾನತಾ ಸರ್ವಂಸತ್ ಇತಿ ಪ್ರತಿಜಾನತೇವ ಸರ್ವಸ್ಯ ವಿದ್ಯಮಾನಸ್ಯ ಅವಸ್ಥಾವಿಶೇಷಯೋಗಿತ್ವೈವ ಪ್ರತಿ ಜ್ಞಾತಾ ಭವತಿ ಇತಿ ಭವದಭಿಮತಾ ತುಚ್ಛತಾ ನ ಕುತಶ್ಚಿದಪಿ ಸಿಧ್ಯತಿ' ಎಂದು ಶ್ರೀ ಭಾಷ್ಯಕಾರರು ಪ್ರತಿಪಾದಿಸಿರುವುದನ್ನು ಕಾಣಬಹುದು. ಯಾವ ಪ್ರಮಾಣ ದಿಂದ. ಶೂನ್ಯತ್ವವನ್ನು ಸಾಧಿಸುವಿರೋ ಆ ಪ್ರಮಾಣದ ಸತ್ಯತ್ವವನ್ನು ಒಪ್ಪಿ ಕೊಳ್ಳಲೇಬೇಕಲ್ಲ! ಆ ಪ್ರಮಾಣವೂ ಅಸತ್ಯವೆಂದರೆ ಸರ್ವವೂ ಸತ್ಯವೆಂದೇ ಸಿದ್ಧವಾಗುವುದು. ಹೇಗೂ ಸರ್ವಶೂನ್ಯತ್ವ ಅನುಪಪನ್ನವೇ ಆಗುತ್ತದೆ.

ಪ್ರತೀತಿಶ್ಚೇದಿಷ್ಟಾ ನ ನಿಖಿಲನಿಷೇಧೋ ಯದಿ ನ ಕೋ
ನಿಷೇದ್ಧಾಽತೋ ನೇಷ್ಟೋ ನಿರುಪಧಿ ನಿಷೇಧಃ ಸ್ವದುಪಧೌ ।
ನಿಷೇಧೇಽನ್ಯತ್ಸಿದ್ಧ್ಯೇದ್ವರದ ಘಟಭಂಗೇ ಶಕಲವತ್
ಪ್ರಮಾಶೂನ್ಯೇ ಪಕ್ಷೇ ಶ್ರುತಿರಪಿ
ಮತೇಽಸ್ಮಿನ್ ವಿಜಯತಾಂ ॥ ॥೭॥೮

(ಹೇ ವರದ) ಎಲೈ ವರಪ್ರದನಾದ ರಂಗನಾಥನೇ, (ಪ್ರತೀತಿಃ) 'ಸರ್ವಂ ನಾಸ್ತಿ' ಎಂಬುವ ಪ್ರತೀತಿಯು (ಇಷ್ಟಾಚೇತ್) ಇಷ್ಟವೆಂದು ಅಭಿಪ್ರಾಯ ವಾದರೆ (ನಿಖಿಲ ನಿಷೇಧಃ) ಸಮಸ್ತ ವಸ್ತುಗಳೂ ನಿಷೇಧವಾದುದು (ನ)

ಸಿದ್ಧಿಸುವುದಿಲ್ಲ. (ನ ಯದಿ) ಆ ಪ್ರತೀತಿಯು ನಿಜವೆಂದು ಅಂಗೀಕಾರ ಮಾಡದಿದ್ದರೆ (ನಿಷೇದ್ಧಾ ಕಃ) ನಿಷೇಧಿಸುವವರು ಯಾರು ? ಯಾರೂ ಇಲ್ಲ. (ಅತಃ) ಆದುದರಿಂದ (ನಿರುಪಧಿನಿಷೇಧಃ) ಸುಮ್ಮನೆ 'ನಾಸ್ತಿ' ಎಂಬುವ ನಿಷೇಧವಾದುದು (ನ ಇಷ್ಟಃ) ಅಂಗೀಕರಿಸತಕ್ಕದಲ್ಲ. (ಸದುಪಧೌ ನಿಷೇಧೇ) ಒಂದು ಉಪಾಧಿಯನ್ನು ಮುಂದಿಟ್ಟು ನಿಷೇಧಿಸಿದರೆ (ಅನ್ಯತ್) ಬೇರೆಯೊಂದು ವಸ್ತುವು (ಸಿಧ್ಯೇತ್) ಸಿದ್ಧಿಸಿಬಿಡುವುದು. ಹೇಗೆಂದರೆ (ಘಟ ಭಂಗೇ ಶಕಲವತ್) ಮಡಕೆ ಒಡೆದರೂ ಅದರ ಚೂರುಗಳು ಸಿದ್ಧಿಸುವಂತೆ. (ಅಸ್ಮಿನ್ ಮತೇಽಪಿ) ಈ ಬೌದ್ಧಮತದಲ್ಲಿಯೂ (ಪ್ರಮಾಶೂನ್ಯಪಕ್ಷೇ) ಸರ್ವಶೂನ್ಯತ್ವವೆಂಬ ಪ್ರಮೆಯನ್ನು ಅಂಗೀಕರಿಸದಿದ್ದರೆ (ಶ್ರುತಿಃ) ವೇದಪ್ರಮಾಣವು (ವಿಜಯತಾಂ) ಜಯಿಸಲಿ.

ಸರ್ವಶೂನ್ಯವಾದವನ್ನು ಇಲ್ಲಿ ನಿರಾಕರಿಸಿದೆ. 'ಸರ್ವಶೂನ್ಯ' ಎಂಬುವ ಈ ಮಾತು ನಿಜವೋ ಸುಳ್ಳೋ ? ನಿಜವೆಂದರೆ ಸರ್ವಶೂನ್ಯವಾದ ಭಂಗವಾಯಿತು. ಸುಳ್ಳೆಂದರೂ ಸರ್ವಶೂನ್ಯವಾದ ಬಿದ್ದು ಹೋಗುತ್ತದೆ. ನಿರಧಿಷ್ಠಾನ ನಿಷೇಧವನ್ನು ಮಾಡುವುದು ಅಸಂಭವ. ಸಾಧಿಷ್ಠಾನ ನಿಷೇಧ ಮಾಡಿದರೆ ಬೇರೆ ಕಾಲದಲ್ಲಿ, ದೇಶದಲ್ಲಿ ಬೇರೆ ಅವಸ್ಥೆಯಲ್ಲಿ ಅದು ಇದ್ದೇ ಇರುವುದು. ಆದುದರಿಂದ ಸರ್ವಶೂನ್ಯವಾದವು ಸಲ್ಲದೆಂದು ಇಲ್ಲಿ ಸ್ಥಾಪಿಸಿದೆ.

**ಯೋಗಾಚಾರೋ ಜಗದಪಲಪತ್ಯತ್ರ ಸೌತ್ರಾಂತಿಕಸ್ತತ್**
**ಧೀವೈಚಿತ್ರ್ಯಾದನುಮಿತಿಪದಂ ವಕ್ತಿ ವೈಭಾಷಿಕಸ್ತು ।**
**ಪ್ರತ್ಯಕ್ಷಂ ತತ್ ಕ್ಷಣಿಕಯತಿ ತೇ ರಂಗನಾಥ ತ್ರಯೋಽಪಿ**
**ಜ್ಞಾನಾತ್ಮತ್ವಕ್ಷಣಭಿದುಕತೇ ಚಕ್ಷತೇ**
**ತಾನ್ ಕ್ಷಿಪಾಮಃ ॥ ॥೮॥**

(ರಂಗನಾಥ) ಶ್ರೀ ರಂಗನಾಥನೇ (ಅತ್ರ) ಈ ಬೌದ್ಧರ ದರ್ಶನದಲ್ಲಿಯೂ (ಯೋಗಾಚಾರಃ) ಯೋಗಾಚಾರ ಪಂಥದವನು (ಜಗತ್) ಜಗತ್ತನ್ನು (ಅಪಲ

ಪತಿ) ಅಲ್ಲಗಳೆಯುತ್ತಾನೆ. (ಸೌತ್ರಾಂತಿಕಃ) ಸೌತ್ರಾಂತಿಕನು (ತತ್) ಆ ಜಗತ್ತನ್ನು (ಧೀ ವೈಚಿತ್ರ್ಯಾತ್) ಬಗೆಬಗೆಯ ಪ್ರತೀತಿಗಳುಂಟಾಗುವ ಕಾರಣ ಅನುಮಿತಿ ಪದಂ ವಕ್ತಿ) ಅನುಮಾನದಿಂದ ತಿಳಿಯಲ್ಪಡುವುದೆಂದು ಹೇಳುತ್ತಾನೆ. (ವೈಭಾಷಿಕಸ್ತು) ವೈಭಾಷಿಕನೋ ಎಂದರೆ (ಪ್ರತ್ಯಕ್ಷಂ) ಪ್ರತ್ಯಕ್ಷವಾದ (ತತ್) ಆ ಜಗತ್ತನ್ನು (ಕ್ಷಣಿಕಯತಿ) ಕ್ಷಣಿಕವೆನ್ನುತ್ತಾನೆ. (ತೇ ತ್ರಯಃ ಅಪಿ) ಅವರು ಮೂವರೂ (ಜ್ಞಾನಾತ್ಮತ್ವಕ್ಷಣಭಿದುರತೇ) ಜ್ಞಾನವೇ ಆತ್ಮವೆಂದೂ ಎಲ್ಲವೂ ಕ್ಷಣಭಂಗುರವೆಂದೂ (ಚಕ್ಷತೇ) ಹೇಳುತ್ತಾರೆ. (ತಾನ್) ಅವರುಗಳನ್ನು (ಕ್ಷಿಪಾಮಃ) ನಿರಸನ ಮಾಡುತ್ತೇವೆ.

ಭೌದ್ಧರು ನಾಲ್ಕು ಬಗೆ. ಯೋಗಾಚಾರನು ಜಗತ್ತು ಇಲ್ಲವೆನ್ನುತ್ತಾನೆ. ಸೌತ್ರಾಂತಿಕನು ಇದು ಅನುಮೇಯವಾದುದು ಎನ್ನುತ್ತಾನೆ- ವೈಭಾಷಿಕನಾದರೋ ಜಗತ್ತು ಕ್ಷಣಿಕವೆನ್ನುತ್ತಾನೆ. ಇವರು ಹೇಳುವ ಈ ಜ್ಞಾನಾತ್ಮತ್ವವಾದವನ್ನೂ ಕ್ಷಣಿಕವಾದವನ್ನೂ ನಾವು ನಿರಾಕರಿಸುತ್ತೇವೆ ಎಂದು ನಿರೂಪಿಸಿದ್ದಾರೆ. ವೈಭಾಷಿಕರೂ ಸೌತ್ರಾಂತಿಕರೂ ಬಾಹ್ಯಾರ್ಥಾಸ್ತಿತ್ವವಾದಿಗಳು. ವೈಭಾಷಿಕರಿಗೆ ಇವು ಪ್ರತ್ಯಕ್ಷ ಸಿದ್ಧವಾದರೆ ಸೌತ್ರಾಂತಿಕನಿಗೆ ಅನುಮಾನಸಿದ್ಧವಾದವು. ಯೋಗಾಚಾರರಾದರೋ ಅರ್ಥಶೂನ್ಯವಾದ ವಿಜ್ಞಾನವು ಸತ್ ಎನ್ನುವರು ಮತ್ತು ಬಾಹ್ಯಾರ್ಥಗಳು ಸ್ವಪ್ನಾರ್ಥ ಕಲ್ಪವಾದವು ಎನ್ನುತ್ತಾರೆ. ಇವರು ಮೂವರೂ ತಾವು ಒಪ್ಪಿಕೊಂಡಿರುವ ವಸ್ತು ಕ್ಷಣಿಕವೆನ್ನುತ್ತಾರೆ. ಭೂತಭೌತಿಕ ಚಿತ್ತಚೈತ್ತಗಳನ್ನು ಬಿಟ್ಟು ಬೇರೆ ಯಾವುದನ್ನೂ ಇವರು ಅಂಗೀಕರಿಸುವುದಿಲ್ಲ. ಇವರ ಅಭಿಪ್ರಾಯಗಳನ್ನೆಲ್ಲಾ ಬಾದರಾಯಣರು ಬ್ರಹ್ಮಸೂತ್ರಗಳಲ್ಲಿ ಎರಡನೆಯ ಅಧ್ಯಾಯದ ಎರಡನೆಯ ಪಾದದಲ್ಲಿ ತಳ್ಳಿಹಾಕಿರುವುದನ್ನು ಕಾಣಬಹುದು. (2-2-17ರಿಂದ-29)

ಜಗದ್ಭಂಗುರಂ ಭಂಗುರಾಬುದ್ಧಿರಾತ್ಮೇತ್ಯಸದ್ವೇತ್ರಭಾವೇ
ತಥಾ ವೇದ್ಯವಿತ್ತ್ಯೋಃ ।
ಕ್ಷಣಧ್ವಂಸತಶ್ಚ ಸ್ಮೃತಿಪ್ರತ್ಯಭಿಜ್ಞಾದರಿದ್ರಂ ಜಗತ್ ಸ್ಯಾತ್
ಇದಂ ರಂಗಚಂದ್ರ ॥ ॥೯॥

(ರಂಗಚಂದ್ರ) ಶ್ರೀ ರಂಗನಾಥನೇ, (ಜಗತ್) ಜಗತ್ತು (ಭಂಗುರಂ) ಕ್ಷಣಿಕವಾದುದು. (ಭಂಗುರಾ ಬುದ್ಧಿಃ ಆತ್ಮಾ) ಕ್ಷಣಿಕವಾದ ಜ್ಞಾನವೇ ಆತ್ಮಾ (ಇತಿ) ಹೀಗೆಂಬುವ ಇದು (ಅಸತ್) ಸಾಧುವಾದುದಲ್ಲ. ಏಕೆಂದರೆ (ವೇತ್ತೃಭಾವೇ) ಜ್ಞಾನಕಿಂತ ಬೇರೆಯಾದ ಜ್ಞಾತಾ ಇಲ್ಲದಿದ್ದರೆ (ತಥಾ) ಹಾಗೆಯೇ (ವೇದ್ಯವಿತ್ತ್ಯೋಃಕ್ಷಣಧ್ವಂಸತಶ್ಚ) ಅರಿಯಲ್ಪಡುವ ವಿಷಯವೂ ಅರಿವೂ ಕ್ಷಣಿಕವಾದುದಾದರೆ (ಇದಂ ಜಗತ್) ಈ ಪ್ರಪಂಚವು (ಸ್ಮೃತಿ-ಪ್ರತ್ಯಭಿಜ್ಞಾ ದರಿದ್ರಂ ಸ್ಯಾತ್) ಸ್ಮೃತಿ ಮತ್ತು ಪ್ರತ್ಯಭಿಜ್ಞೆ ಇವು ಇಲ್ಲದೆ ಇರುವಂಥದಾಗುವುದು.

ಕ್ಷಣಭಂಗವಾದವನ್ನು ಇಲ್ಲಿ ನಿರಾಕರಿಸಿದೆ. ಜಗತ್ತು ಕ್ಷಣಿಕವಾಗಿ ಆ ಜಗತ್ತನ್ನು ಕುರಿತ ಜ್ಞಾನವೂ ಕ್ಷಣಿಕವೇ ಆದರೆ ಜಗತ್ತಿನಲ್ಲಿ ಸ್ಮರಣೆ, ಪ್ರತ್ಯಭಿಜ್ಞಾನ ಮೊದಲಾದವು ಉಂಟಾಗವು. ಅನುಭವಿಸುವವನೂ, ಅನುಭವವೂ ಅನುಭವಿಸುವ ವಿಷಯವೂ ಇವೆಲ್ಲವೂ ಕ್ಷಣಿಕವೆಂದರೆ ಲೋಕದಲ್ಲಿ ಉಂಟಾಗುವ ಅನುಭವವೆಲ್ಲಾ ಸುಳ್ಳಾಗುತ್ತದೆ. ಪ್ರತ್ಯಕ್ಷವಾದ ಅನುಭವಕ್ಕೆ ಕ್ಷಣಿಕವಾದ ವಿರುದ್ಧವಾದುದು.

**ಅಹಮಿದಮಭಿವೇದ್ಮೀತ್ಯಾತ್ಮವಿತ್ತ್ಯೋರ್ವಿಭೇದೇ**
**ಸ್ಫುರತಿ ಯದಿ ತದೈಕ್ಯಂ ಬಾಹ್ಯಮಪ್ಯೇಕಮಸ್ತು ।**
**ಪ್ರಮಿತಿರಪಿ ವೃಷಾ ಸ್ಯಾತ್ ಮೇಯಮಿಥ್ಯಾತ್ವವಾದೇ**
**ಯದಿ ತದಪಿ ಸಹೇರನ್ ದೀರ್ಘಮಸ್ಮನ್ಮತಾಯುಃ ॥ ॥೧೦॥**

(ಅಹಂ ಇದಂ ಅಭಿವೇದ್ಮಿ ಇತಿ) ನಾನು ಇದನ್ನು ಅರಿಯುವ[redacted]ಎಂದು ಹೇಳುವಲ್ಲಿ (ಆತ್ಮ ವಿತ್ತ್ಯೋಃ) ಆತ್ಮಕ್ಕೂ ಜ್ಞಾನಕ್ಕೂ (ವಿಭೇದ[redacted]ಸ್ಫುರತಿ) ಭೇದವು ಚೆನ್ನಾಗಿ ಪ್ರಕಾಶಿಸುತ್ತಿರಲು (ತದೈಕ್ಯಂಯದಿ) ಅವುಗಳಿಗೆ ಏಕತ್ವವನ್ನು ಹೇಳುವುದಾದರೆ (ಬಾಹ್ಯಮಪಿ) ಅವುಗಳೆರಡಕ್ಕಿಂತ ಬೇರೆಯಾದ ಘಟಪಟಾದಿಗಳೂ ಸಹ (ಏಕಮಸ್ತು) ಜ್ಞಾನಕ್ಕಿಂತ ಬೇರೆಯಾಗದೆ ಒಂದೇ

ಆಗಲಿ. (ಮೇಯಮಿಥ್ಯಾತ್ವವಾದೇ) ಪ್ರಮೇಯವೆಲ್ಲಾ ಸುಳ್ಳೆಂದು ಹೇಳುವ ಪಕ್ಷಕ್ಕೆ (ಪ್ರಮಿತಿಃ ಅಪಿ) ಪ್ರಮೇಯ ಸುಳ್ಳೆನ್ನುವ ಆ ಪ್ರತೀತಿಯೂ ಸಹ (ಮೃಷಾಸ್ಯಾತ್) ಸುಳ್ಳೇ ಆದೀತು ! (ತದಪಿ) ಅದನ್ನೂ (ಸಹೇರನ್ ಯದಿ) ಸಹಿಸಿ ಅಂಗೀಕರಿಸುವುದಾದರೆ (ಅಸ್ಮನ್ಮತಾಯುಃ) ನಮ್ಮ ಸಿದ್ಧಾಂತದ ಆಯುಸ್ಸು (ದೀರ್ಘಂ) ದೀರ್ಘವಾಗಿ ಬೆಳೆದಂತೆಯೇ !

ಕೇವಲ ಜ್ಞಾನಾತ್ಮವಾದವನ್ನು ಇಲ್ಲಿ ನಿರಾಕರಿಸಿದೆ. ನಾನು ಅರಿಯು ತ್ತೇನೆ ಎಂದು ಹೇಳುವುದರಿಂದಲೇ 'ನಾನು ಅರಿವು' ಎಂಬ ಜ್ಞಾನ ಉದಿಸದು. ಜ್ಞಾನವೂ ಜ್ಞಾತೃವೂ ಬೇರೆ ಬೇರೆ. ಜ್ಞಾನವೂ ಜ್ಞಾತೃವೂ ಒಂದೇ ಆದರೆ ಹಾಗೆಯೇ ಜ್ಞೇಯವೂ ಸಹ ಅದರೊಡನೆ ಸೇರಿ ಹೋಗುವುದೇ ವಿನಾ ಬೇರೆ ಇರದು. ಸರ್ವಮಿಥ್ಯಾತ್ವವಾದವು ಸರಿಯಾಗದು. ಜ್ಞಾನ ಬೇರೆ. ಜ್ಞಾನ ಹೊಂದಿದವನು ಬೇರೆ. ಇವೆರಡೂ ಒಂದಾಗದು. ಎಲ್ಲವೂ ಸುಳ್ಳೇ ಆಗ ಲಾರದು. ಎಲ್ಲವೂ ಸುಳ್ಳು ಎಂಬ ಪ್ರತೀತಿ ಸತ್ಯವೋ ಅಸತ್ಯವೋ ? ಸತ್ಯ ವಾದರೆ ಎಲ್ಲವೂ ಅಸತ್ಯವೆಂದಾಗಲಿಲ್ಲ. ಆ ಪ್ರತೀತಿಯೂ ಅಸತ್ಯವೆಂದರೆ ಎಲ್ಲವೂ ಸತ್ಯವೇ ಆದಂತೆ ಆಯಿತು.

**ಏತದ್ಬ್ರಾಮಾಸ್ತ್ರಂ ದಲಯತು ಕಲಿಬ್ರಹ್ಮಮೀಮಾಂಸಕಾಂಶ್ಚ**
**ಜ್ಞಪ್ತಿಬ್ರಹ್ಮೈತತ್ ಜ್ವಲದಪಿ ನಿಜಾವಿದ್ಯಯಾ ಬಂಭ್ರಮೀತಿ ।**
**ತಸ್ಯ ಭ್ರಾಂತಿಂ ತಾಂ ಶ್ಲಥಯತಿ ಜಿತಾದ್ವೈತವಿದ್ಯಸ್ತು ಜೀವೋ**
**ಯದ್ಯದ್ದೃಶ್ಯಂ ತದ್ವಿತಥಮಿತಿ**
**ಯೋ ಜ್ಞಾಪಯಾಂಚಕ್ರುರಜ್ಞಾಃ॥ ॥೧೧॥**

(ಬ್ರಹ್ಮ) ಪರಬ್ರಹ್ಮವಸ್ತುವು (ಜ್ಞಪ್ತಿಃ) ನಿರ್ವಿಶೇಷ ಚಿನ್ಮಾತ್ರ ಸ್ವರೂಪವಾದುದು. (ಏತತ್) ಇಂಥ ಬ್ರಹ್ಮವಸ್ತು (ಜ್ವಲದಪಿ) ಸ್ವಯಂ ಪ್ರಕಾಶವಾಗಿದ್ದಾಗ್ಯೂ (ನಿಜಾವಿದ್ಯಯಾ) ತನ್ನ ಅವಿದ್ಯೆಯಿಂದ (ಬಂಭ್ರಮೀತಿ) ಭ್ರಮೆಗೊಳಗಾಗಿದೆ. (ಜೀವಸ್ತು) ಜೀವಾತ್ಮನೋ ಎಂದರೆ (ಜಿತಾದ್ವೈತ

ವಿದ್ಯಃಸನ್) ತತ್ತ್ವಮಸಿ ಮೊದಲಾದ ವಾಕ್ಯಗಳಿಂದ ಅದ್ವೈತವನ್ನು ಅಭ್ಯಾಸ ಮಾಡಿ ಮನಗಂಡವನಾಗಿ (ತಸ್ಯ) ಆ ಬ್ರಹ್ಮವಸ್ತುವಿನ (ತಾಂ ಭ್ರಾಂತಿಂ) ಆ ಭ್ರಮೆಯನ್ನು (ಶ್ಲಥಯತಿ) ಹೋಗಲಾಡಿಸುತ್ತಾನೆ. (ಯದ್ಯದ್ ದೃಶ್ಯಂ) ಯಾವುದು ಯಾವುದು ದೃಶ್ಯವೋ (ತತ್) ಅದೆಲ್ಲವೂ (ವಿತಥಂ) ಸುಳ್ಳಾದುದು. (ಇತಿ) ಹೀಗೆಂದು (ಯೇ ಅಜ್ಞಾಃ) ಯಾವ ಅಜ್ಞಾನಿಗಳು (ಜ್ಞಾಪಯಾಂಚಕ್ರುಃ) ಪ್ರಕಾಶಪಡಿಸಿದರೋ (ತಾನ್) ಅಂಥ (ಕಲಿಬ್ರಹ್ಮಮೀಮಾಂಸಕಾಂಶ್ಚ) ಕಲಿಪುರುಷಪ್ರಾಯರಾದ ಬ್ರಹ್ಮಮೀಮಾಂಸಕರಾದ ಶಾಂಕರಾದಿಗಳನ್ನು (ಏತದ್ರಾಮಾಸ್ತ್ರಂ) ರಾಮಾಸ್ತ್ರದಂತೆ ತಪ್ಪದೆ ಕಾರ್ಯಕರವಾಗುವ ಹಿಂದೆ ಹೇಳಿದ ವಾದವು (ದಲಯತು) ಖಂಡಿಸಲಿ.

ಮಾಯಾವಾದಿಗಳನ್ನು ಇಲ್ಲಿ ಖಂಡಿಸಿದೆ. ಹಿಂದಿನ ಶ್ಲೋಕದಲ್ಲಿ ಹೇಳಿರುವ ದೂಷಣವೇ ಇವರ ವಾದವನ್ನು ನಿರಾಕರಿಸುತ್ತದೆ. ಎಲ್ಲವೂ ಸುಳ್ಳು ಎಂದು ಹೇಳಿದುದನ್ನು ನಿರಾಕರಿಸಿದುದು ಇವರಿಗೂ ಅನ್ವಯಿಸುತ್ತದೆ. ಬ್ರಹ್ಮವು ಜ್ಞಾನ ಸ್ವರೂಪವೆಂದೂ ಅದು ಅವಿದ್ಯೆಯಿಂದ ಜ್ಞಾತೃಜ್ಞೇಯಾದಿ ಭೇದಗಳಿಂದ ಭ್ರಮಿಸುತ್ತದೆ ಎಂದೂ ಜೀವಾತ್ಮನು ಆತ್ಮೈಕ್ಯಜ್ಞಾನವನ್ನು ಸಾಕ್ಷಾತ್ಕರಿಸಿಕೊಂಡಾಗ ಭ್ರಮೆಯನ್ನು ಕಳೆದುಕೊಳ್ಳುವನೆಂದೂ ಅದ್ವೈತಿಗಳು ಹೇಳುವ ವಾದವು ಸಲ್ಲದೆಂದು ಇಲ್ಲಿ ನಿರೂಪಿಸಿದೆ. ಜ್ಞಾತೃಜ್ಞೇಯಗಳಿಗೆ ಭೇದವಿದೆಯೆಂಬ ಪ್ರತ್ಯಕ್ಷಾನುಭವವು ಹೇಗೆ ಬೌದ್ಧಮತವನ್ನು ನಿರಾಕರಿಸುವುದೋ ಹಾಗೆ ಇವರ ಮತವನ್ನೂ ನಿರಾಕರಿಸುತ್ತದೆ ಎಂಬ ಭಾವ.

**ಅಂಗೀಕೃತ್ಯ ತು ಸಪ್ತಭಂಗಿಕುಸೃತಿಂ ಸ್ಯಾದಸ್ತಿ ನಾಸ್ತ್ಯಾತ್ಮಿಕಾಂ**
**ವಿಶ್ವಂ ತ್ವದ್ವಿಭವಂ ಜಗಜ್ಜಿನಮುತೇ ನೈಕಾಂತಮಾಚಕ್ಷತೇ ।**
**ಭಿನ್ನಾಭಿನ್ನಮಿದಂ ತಥಾ ಜಗದುಷೇ ವಂಧ್ಯಾ ಮಮಾಂಬೇತಿವತ್**
**ನೂತ್ನಬ್ರಹ್ಮವಿದೇ ರಹಃಪರಮಿದಂ**
**ರಂಗೇಂದ್ರ ತೇ ಚಕ್ಷತಾಂ ॥ ॥೧೨॥**

(ರಂಗೇಂದ್ರ) ಶ್ರೀ ರಂಗನಾಥನೇ, (ಸ್ಯಾದಸ್ತಿನಾಸ್ತ್ಯಾತ್ಮಿಕಾಂ) ಸ್ಯಾದಸ್ತಿ, ಸ್ಯಾನ್ನಾಸ್ತಿ ಮೊದಲಾದ ರೂಪವಾದ (ಸಪ್ತಭಂಗಿ ಕುಸೃತಿಂ) ಸಪ್ತಭಂಗಿ ಎನ್ನುವ ಅಸನ್ಮಾರ್ಗವನ್ನು (ಅಂಗೀಕೃತ್ಯ) ಅಂಗೀಕರಿಸಿ (ತ್ವದ್ವಿಭವಂ) ನಿನ್ನ ವಿಭೂತಿಯಾದ (ವಿಶ್ವಂಜಗತ್) ಸಕಲ ಜಗತ್ತನ್ನೂ (ಜಿನಮತೇ) ಜೈನಮತದಲ್ಲಿ (ನೈಕಾಂತಂ) ಅನೇಕಾಂತವಾಗಿ (ಆಚಕ್ಷತೇ) ಹೇಳುತ್ತಾರೆ. (ತೇ) ಆ ಜೈನರು (ತಥಾ) ಹಾಗೆಯೇ (ಮಮ ಅಂಬಾವಂಧ್ಯಾ ಇತಿವತ್) ನನ್ನ ತಾಯಿ ಬಂಜೆ ಎಂಬ ಮಾತಿನಂತೆ (ಇದಂ) ಈ ಲೋಕವನ್ನು (ಭಿನ್ನಾಭಿನ್ನಂ ಜಗದುಷೇ) ಬ್ರಹ್ಮದೊಡನೆ ಭಿನ್ನವೆಂದೂ ಅಭಿನ್ನವೆಂದೂ ಹೇಳಿದ (ನೂತ್ನಬ್ರಹ್ಮವಿದೇ) ನೂತನ ಬ್ರಹ್ಮವಾದಿಯಾದ ಮೃಷಾವಾದಿಗಳಲ್ಲಿ ಒಂದು ಶಾಖೆಯವರಾಗಿ (ಇದಂ ಪರಂ ರಹಃ) ಈ ಹಿರಿಯ ರಹಸ್ಯವನ್ನು (ಚಕ್ಷತಾಂ) ಉಪದೇಶಿಸಲಿ.

ಜೈನರು ಭೇದಾಭೇದವಾದಿಗಳಿಗೂ ಭೇದಾಭೇದವಾದಿಗಳು ಜೈನರಿಗೂ ತಮ್ಮ ತಮ್ಮ ಉಪದೇಶ ಹೇಳಿಕೊಳ್ಳಲಿ, ನಮಗೆ ಅದು ಬೇಕಾಗಿಲ್ಲ ಎಂಬ ಭಾವ ಇಲ್ಲಿದೆ. ಭೇದಾಭೇದವಾದಿಗಳ ಹಾಗೆಯೇ ಇವರೂ ವಾದಿಸುತ್ತಾರೆ: ಇವರು ಸಪ್ತ ಭಂಗೀನಯವನ್ನು ಹೇಳಿ ಅನೇಕಾಂತವಾದವನ್ನು ಪುರಸ್ಕರಿಸುತ್ತಾರೆ. 'ಸ್ಯಾದಸ್ತಿ, ಸ್ಯಾನ್ನಾಸ್ತಿ, ಸ್ಯಾದಸ್ತಿನಾಸ್ತಿಚ, ಸ್ಯಾದವಕ್ತವ್ಯಂ, ಸ್ಯಾದಸ್ತಿ ಚ ಅವಕ್ತವ್ಯಂ, ಸ್ಯಾನ್ನಾಸ್ತಿಚಾವಕ್ತವ್ಯಂ, ಸ್ಯಾದಸ್ತಿನಾಸ್ತಿಚ ಅವಕ್ತವ್ಯಂ' ಎಂದು ಸಪ್ತಭಂಗೀನ್ಯಾಯವನ್ನು ಪ್ರತಿಯೊಂದರಲ್ಲಿಯೂ ಅನ್ವಯಿಸುತ್ತಾರೆ. ಒಂದೇ ವಸ್ತುವಿನಲ್ಲಿ ಪರಸ್ಪರ ವಿರುದ್ಧವಾದ ಅಸ್ತಿತ್ವನಾಸ್ತಿತ್ವಗಳು ಅನ್ವಯಿಸಲಾರವು. ಒಂದೇ ವಸ್ತುವಿನಲ್ಲಿ ಉತ್ಪತ್ತಿವಿನಾಶ ಮೊದಲಾದ ಪರಿಣಾಮರೂಪವಾದ ಅನಿತ್ಯತ್ವವೂ ಇದಕ್ಕೆ ನೇರವಾಗಿ ವಿರುದ್ಧವಾದ ನಿತ್ಯತ್ವವೂ ಹೇಗೆ ಏಕಕಾಲದಲ್ಲಿರಬಲ್ಲವು ? ಸಪ್ತಭಂಗೀನಯವನ್ನು ಈ ಸಪ್ತಭಂಗೀನಯಕ್ಕೂ ಅನ್ವಯಿಸಬೇಕಷ್ಟೇ ? ಆಗ ಇದೂ ಏಕಾಂತವಾದ ನಿಶ್ಚಯವಾಗಲಾರದು. ಈ ದರ್ಶನದ ಸ್ವರೂಪವನ್ನು ಬಾದರಾಯಣರು 'ನೈಕಸ್ಮಿನ್ನಸಂಭವಾತ್' ಎಂಬ ಸೂತ್ರದಿಂದ ನಿರಾಕರಿಸಿರುವುದನ್ನು ಕಾಣಬಹುದು.

**ಕಣಚರ-ಚರಣಾಕ್ಷೌ ಭಿಕ್ಷಮಾಣೌ ಕುತರ್ಕ್ಯೈಃ**
**ಶ್ರುತಿಶಿರಸಿ ಸುಭಿಕ್ಷಂ ತ್ವಜ್ಜಗತ್ಕಾರಣತ್ವಂ ।**
**ಅಣುಷು ವಿಪರಿಣಾಮ್ಯ ವ್ಯೋಮ ಪೂರ್ವಂ ಚ ಕಾರ್ಯಂ**
**ತವ ಭವದನಪೇಕ್ಷಂ ರಂಗಭರ್ತುಃ ಬ್ರುವಾತೇ ॥ ॥೧೩॥**

ಎಲೈ ರಂಗನಾಥನೇ, (ಕಣಚರ ಚರಣಾಕ್ಷೌ) ಕಣಾದರೂ ಮತ್ತು ಗೌತಮರೂ (ಶ್ರುತಿಶಿರಸಿ) ಉಪನಿಷತ್ತುಗಳಲ್ಲಿ (ಸುಭಿಕ್ಷಂ) ಕೊರೆ ಇಲ್ಲದೆ ಬೆಳಗುತ್ತಿರುವ (ತ್ವಜ್ಜಗತ್ಕಾರಣತ್ವಂ) ನೀನೇ ಎಲ್ಲದಕ್ಕೂ ಉಪಾದಾನಕಾರಣ ಎಂಬುವುದನ್ನು (ಕುತರ್ಕ್ಯೈಃ) ಕುತ್ಸಿತವಾದ ತರ್ಕಗಳಿಂದ (ಭಿಕ್ಷಮಾಣೌ) ಭಿಕ್ಷೆಬೇಡಿ ಪಡೆದುಕೊಂಡವರಾಗಿ (ಅಣುಷು) ಪರಮಾಣುಗಳಲ್ಲಿ (ವಿಪರಿ ಣಾಮ್ಯ) ವಿಪರೀತವಾಗಿ ಹೇಳಿದವರಾಗಿ (ತವಕಾರ್ಯಂ) ನಿನ್ನಿಂದ ಉಂಟಾ ಗುವುದಾದ (ವ್ಯೋಮ ಪೂರ್ವಂಚ) ಆಕಾಶ ಮೊದಲಾದವುಗಳನ್ನು (ಭವದ ನಪೇಕ್ಷಂ) ನಿನ್ನ ಅಪೇಕ್ಷೆಯೇ ಇಲ್ಲದೆ ಉಂಟಾಗುವುದೆಂದು (ಬ್ರುವಾತೇ) ಹೇಳುತ್ತಾರೆ.

ಈ ಶ್ಲೋಕದಲ್ಲಿ ನಯ್ಯಾಯಿಕರ ಮತ್ತು ವೈಶೇಷಿಕರ ತತ್ವವನ್ನು ನಿರಾಕರಣೆ ಮಾಡಿದೆ. ವೇದವನ್ನು ಅನುಸರಿಸುವವರಾದರೂ ಇವರು ಜಗತ್ತಿಗೆ ಪರಮಾಣುಗಳೇ ಉಪಾದಾನಕಾರಣವೆನ್ನುವರು. ಭಗವಂತನನ್ನು ನಿಮಿತ್ತಕಾರಣವೆಂದು ಮಾತ್ರ ಇವರು ಹೇಳುತ್ತಾರೆ. ವೇದದಲ್ಲಿ ಭಗವಂತನೇ ಉಪಾದಾನಕಾರಣವೆಂದು ಅನೇಕಶಃ ಹೇಳಿದರೂ ಇವರು ಭಗವಂತನನ್ನು ಉಪಾದಾನಕರಣವೆಂದು ಅಂಗೀಕರಿಸುವುದಿಲ್ಲ. 'ಪ್ರಕೃತಿಶ್ಚ ಪ್ರತಿಜ್ಞಾದೃ ಷ್ಟಾಂತಾನುಪರೋಧಾತ್' ಎಂಬ ಸೂತ್ರದಲ್ಲಿ ಬಾದರಾಯಣರು ಬ್ರಹ್ಮ ವಸ್ತುವೇ ಜಗತ್ತಿಗೆ ಉಪಾದಾನಕಾರಣವೆಂದು ಸ್ಥಾಪಿಸಿದ್ದಾರೆ. 'ಸ ಏವ ಸೃಜ್ಯಃ ಸಚ ಸರ್ವಕರ್ತಾ' ಎಂಬುದೂ ಈ ಅಭಿನ್ನನಿಮಿತ್ತೋಪಾದನಕಾರ ಣತ್ವವನ್ನು ಬ್ರಹ್ಮನಿಗೆ ಹೇಳುತ್ತದೆ. ಸೂಕ್ಷ್ಮಚಿದಚಿದ್ವಿಶಿಷ್ಟ ಬ್ರಹ್ಮ ವಸ್ತು ಕಾರಣವಾಗಿ ಸ್ಥೂಲಚಿದಚಿದ್ವಿಶಿಷ್ಟ ಬ್ರಹ್ಮವು ಕಾರ್ಯವಾಗಿಯೂ ಇದೆ.

ಚಿದಚಿದ್ವಸ್ತುಗಳ ಎರಡು ಅವಸ್ಥೆಗಳಲ್ಲಿಯೂ ಬ್ರಹ್ಮವಸ್ತು ಸಮಾನವಾಗಿ ವಿಶೇಷ್ಯವಾಗಿದೆ. ಬ್ರಹ್ಮವಸ್ತು ಯಾವಾಗಲೂ ನಿರ್ವಿಕಾರವಾಗಿಯೇ ಇರುತ್ತದೆ. ಆಗುವ ಬದಲಾವಣೆಗಳೆಲ್ಲ ಪ್ರಕೃತಿಗೂ ಜೀವನಿಗೂ ಅನ್ವಯಿಸುತ್ತವೆ. ಈ ಎಲ್ಲ ಕಾರಣಗಳಿಂದ ಪರಮಾಣು ಕಾರಣವಾದವನ್ನು ಇಲ್ಲಿ ತಳ್ಳಿ ಹಾಕಿದೆ. ಜಗತ್ತಿಗೆ ನಿಮಿತ್ತ ಕಾರಣನೂ ಉಪಾದಾನಕಾರಣನೂ ಭಗವಂತನೇ ಎಂದು ಶ್ರುತಿಯಲ್ಲಿ ಸಮೃದ್ಧಿಯಾಗಿ ಖಚಿತವಾಗಿ ಹೇಳಿದ್ದರೂ ಇವರು ಅದನ್ನು ಅನುಸರಿಸದೆ ಉಪಾದಾನಕಾರಣ ಪ್ರಕೃತಿ ಎಂದು ಹೇಳಿ ಬ್ರಹ್ಮವಸ್ತುವು ನಿಮಿತ್ತಕಾರಣ ಎಂದು ಹೇಳುವುದು ಅಯುಕ್ತವೆಂದು ಇಲ್ಲಿ ನಿರೂಪಿಸಿದೆ.

ವೇದೇ ಕರ್ತ್ರಾದ್ಯಭಾವಾತ್ ಬಲವತಿ
ಹಿ ನಯೈಃ ತ್ವನ್ಮುಖೇ ನೀಯಮಾನೇ
ತನ್ಮೂಲತ್ವೇನ ಮಾನಂ ತದಿತರದಖಿಲಂ ಜಾಯತೇ ರಂಗಧಾಮನ್ ।
ತಸ್ಮಾತ್ಸಾಂಖ್ಯಂ ಸಯೋಗಂ ಸಪಶುಪತಿಮತಂ ಕುತ್ರಚಿತ್ಪಂಚರಾತ್ರಂ
ಸರ್ವತ್ರೈವ ಪ್ರಮಾಣಂ ತದಿದಮವಗತಂ
ಪಂಚಮಾದೇವ ವೇದಾತ್ ॥ ॥೧೪॥

(ಹೇ ರಂಗಧಾಮನ್) ಎಲೈ ರಂಗನಾಥನೇ, (ಕರ್ತ್ರಾದ್ಯಭಾವಾತ್ ಬಲವತಿ) ತನಗೆ ಕರ್ತೃ ಮೊದಲಾದವರು ಇಲ್ಲದುದರಿಂದ ಪ್ರಬಲ ಪ್ರಮಾಣವಾದ (ವೇದೇ) ವೇದವು (ನಯೈಃ) ನ್ಯಾಯಗಳಿಂದ (ತ್ವನ್ಮುಖೇ) ನಿನ್ನ ಪರವಾಗಿ (ನೀಯಮಾನೇ ಸತಿ) ನಯನಮಾಡಲ್ಪಡಲು (ತದಿತರತ್ ಅಖಿಲಂ) ಆ ವೇದವನ್ನು ಬಿಟ್ಟು ಇತರ ಶಾಸ್ತ್ರಗಳೆಲ್ಲಾ (ತನ್ಮೂಲತ್ವೇನ) ಆ ವೇದವನ್ನೇ ಮೂಲವನ್ನಾಗಿ ಹೊಂದಿದೆ ಎಂಬ ಕಾರಣದಿಂದ (ಮಾನಂ ಜಾಯತೇ) ಪ್ರಮಾಣವಾಗುತ್ತದೆ. (ತಸ್ಮಾತ್) ಆದುದರಿಂದ (ಸಯೋಗಂ) ಯೋಗ ಶಾಸ್ತ್ರದೊಡನೆ ಕೂಡಿದುದೂ, (ಸಪಶುಪತಿಮತಂ) ಪಾಶುಪತಮತದೊಡನೆ ಕೂಡಿದುದೂ ಆದ (ಸಾಂಖ್ಯಂ) ಸಾಂಖ್ಯಾಗಮವಾದುದು (ಕುತ್ರಚಿತ್)

ಎಲ್ಲಿಯೋ ಒಮ್ಮೊಮ್ಮೆ (ಪ್ರಮಾಣಂ) ಪ್ರಮಾಣವಾಗುತ್ತದೆ. (ಪಂಚರಾತ್ರಂ) ಶ್ರೀ ಪಾಂಚರಾತ್ರವೋ ಎಂದರೆ (ಸರ್ವತ್ರೈವ) ಪೂರ್ತಿಯಾಗಿ ಪ್ರಮಾಣ ವಾಗುತ್ತದೆ. (ಪಂಚಮಾತ್ ವೇದಾತ್ ಏವ) ಪಂಚಮವೇದವಾದ ಮಹಾ ಭಾರತದಿಂದಲೇ ಇದು (ಅವಗತಂ) ತಿಳಿದುಬರುತ್ತದೆ.

ಪಂಚರಾತ್ರವು ಪೂರ್ಣವಾಗಿ ಪ್ರಮಾಣವೆಂದು ಇಲ್ಲಿ ಸ್ಥಾಪಿಸಿದೆ. ವೇದವು ಅಪೌರುಷೇಯ. ಅಪೌರುಷೇಯವಾದ ವೇದವು ಭಗವಂತನು ಲೋಕಕ್ಕೆ ಸರ್ವಕಾರಣನೆಂದು ಪ್ರತಿಪಾದಿಸುತ್ತದೆ. ಹಾಗೆಯೇ 'ಶಾಸ್ತ್ರ ಯೋನಿತ್ವಾತ್' ಎಂಬ ಸೂತ್ರದಲ್ಲಿ ಬ್ರಹ್ಮವಸ್ತು ಶಾಸ್ತ್ರೈಕ ಪ್ರತಿಪಾದ್ಯವೆಂದು ಸೂತ್ರಕಾರರು ಸ್ಥಾಪಿಸಿದ್ದಾರೆ. ವೇದವು ನಿರ್ದುಷ್ಟವಾದುದೂ ಭ್ರಮ, ವಿಪ್ರಲಂಭಾದಿ ದೋಷರಹಿತವಾದುದೂ ಆದುದು. ಸ್ವತಃ ಸಿದ್ಧವೂ ಸ್ವತಃ ಪ್ರಮಾಣವೂ, ಅವಿಚ್ಛಿನ್ನಪರಂಪರಾಗತವೂ ಆದ ವೇದವು ತನ್ನನ್ನುಳಿದ ಎಲ್ಲ ಶಾಸ್ತ್ರಗಳಿಗೆ ಮೂಲವಾದುದೂ ಆಗಿದೆ. ಈ ವೇದವು ಭಗವದೇಕಪರ ವಾದುದು ಎಂಬುದನ್ನು 'ವೇದೈಶ್ಚಸರ್ವೈರಹಮೇವ ವೇದ್ಯಃ' ಎಂಬನುಡಿ ತಿಳಿಸುತ್ತದೆ. ವೇದದ ಆಧಾರವನ್ನು ಹೊಂದಿದ ಸಾಂಖ್ಯಾದಿ ಮತಗಳು ಸ್ವಲ್ಪ ಪ್ರಾಮಾಣ್ಯವನ್ನು ಮಾತ್ರ ಹೊಂದಿವೆ. ಆದರೆ ಪಾಂಚರಾತ್ರಾಗಮ ಪೂರ್ಣ ವಾಗಿ ಪ್ರಮಾಣ. ವೇದಪ್ರಮಾಣವನ್ನು ಅಂಗೀಕರಿಸುವ ಸಾಂಖ್ಯ, ಯೋಗ, ನ್ಯಾಯ, ವೈಶೇಷಿಕ ಪಾಶುಪತ ದರ್ಶನಗಳು ಕೆಲವು ಅಂಶಗಳಲ್ಲಿ ಮಾತ್ರ ಪ್ರಮಾಣವಾಗುತ್ತವೆ. ಆದರೆ ಅವರು ನಿರೂಪಿಸುವ ಈಶ್ವರನು ಕೇವಲ ನಿಮಿತ್ತಕಾರಣ ಎಂಬುದೂ, ಪರಾವರ ತತ್ತ್ವ ಕಲ್ಪನೆಗಳೂ, ವೇದ ಬಹಿಷ್ಕೃತ ವಾದ ಆಚಾರಗಳೂ ಅಂಗೀಕಾರಾರ್ಹವಲ್ಲ. 'ಸರ್ವೇಷು ಚ ನೃಪಶ್ರೇಷ್ಠ ಜ್ಞಾನೇಷ್ವೇತೇಷು ದೃಶ್ಯತೇ । ಯಥಾಗಮಂ ಯಥಾನ್ಯಾಯಂ ನಿಷ್ಠಾ ನಾರಾಯಣಃ ಪ್ರಭುಃ ॥ ಎಂಬ ಸೂಕ್ತಿ ಇದನ್ನು ಸಮರ್ಥಿಸುತ್ತದೆ. ಎಲ್ಲ ವಸ್ತುಗಳಿಗೂ ನಾರಾಯಣನೇ ನಿಷ್ಠೆ ಎಂಬುದು ಇದರಿಂದ ತಿಳಿಯುತ್ತದೆ. ಆದರೆ ಪಂಚರಾತ್ರವನ್ನು ನಾರಾಯಣನೇ ಹೇಳಿರುವುದರಿಂದಲೂ ಅದು ಎಲ್ಲಿಯೂ ವೇದೋಪದೇಶಕ್ಕೆ ವಿರುದ್ಧವಾಗಿಲ್ಲದಿರುವುದರಿಂದಲೂ ಅದು ಸಂಪೂರ್ಣ

ವಾಗಿ ಪ್ರಮಾಣವೆಂದು ಮಹಾಭಾರತವು ತಿಳಿಸುತ್ತದೆ. 'ಇದಂ ಮಹೋಪನಿಷದಂ ಚತುರ್ವೇದ ಸಮನ್ವಿತಂ । ಸಾಂಖ್ಯಯೋಗ ಕೃತಾಂತೇನ ಪಂಚರಾತ್ರಾನುಶಬ್ದಿತಂ ॥ ಇದಂ ಶ್ರೇಯ ಇದಂ ಬ್ರಹ್ಮ ಇದಂ ಹಿತಮನುತ್ತಮಂ। ಋಗ್ಯಜುಸ್ಸಾಮಭಿರ್ಜುಷ್ಟಾಂ ಅಥರ್ವಾಂಗಿರಸೈಸ್ತಥಾ ॥ ಭವಿಷ್ಯತಿ ಪ್ರಮಾಣಂ ವಾ ಏತದೇವಾನುಶಾಸನಂ ॥' ಎಂಬುದು ಆ ಸೂಕ್ತಿ.

**ಸಂಚಷ್ಟೇ ನೇಶ್ವರಂ ತ್ವಾಂ ಪುರುಷಪರಿಷದಿ ನ್ಯಸ್ಯ**
**ಯದ್ವಾನ್ಯಪರ್ಯಾತ್**
**ಸಾಂಖ್ಯೋ ಯೋಗೀ ಚ ಕಾಕ್ವಾ**
**ಪ್ರತಿಫಲನಮಿವೈಶ್ವರ್ಯಮೂಚೇ ಕಯಾಚಿತ್ ।**
**ಭಿಕ್ಷುಃ ಶೈವಸ್ಸುರಾಜಂಭವಮಭಿಮನುತೇ ರಂಗರಾಜಾತಿರಾಗಾತ್**
**ತ್ವಾಂ ತ್ವಾಮೇವಾಭ್ಯಧಾಸ್ತ್ವಂ ನನು ಪರವಿಭವ**
**ವ್ಯೂಹನಾಢ್ಯಂ ಭವಿಷ್ಣುಂ ॥ ॥೧೫॥**

(ರಂಗರಾಜ) ಶ್ರೀ ರಂಗನಾಥನೇ, (ಸಾಂಖ್ಯಃ) ಸಾಂಖ್ಯದರ್ಶನಾನುಯಾಯಿಯು (ತ್ವಾಂ) ನಿನ್ನನ್ನು (ಪುರುಷ ಪರಿಷದಿ) ಜೀವಾತ್ಮರ ಗೋಷ್ಠಿಯಲ್ಲಿ (ನ್ಯಸ್ಯ) ಇಟ್ಟು (ಈಶ್ವರಂ) ನಿನ್ನನ್ನು ಈಶ್ವರನನ್ನಾಗಿ (ನ ಸಂಚಷ್ಟೇ) ಹೇಳುವುದಿಲ್ಲ. (ಯದ್ವಾ) ಅಥವಾ (ಅನ್ಯಪರ್ಯಾತ್) ಬೇರೆ ತಾತ್ಪರ್ಯ ವಿಶೇಷದಿಂದ (ನ ಸಂಚಷ್ಟೇ) ಹೇಳುವುದಿಲ್ಲ. (ಯೋಗೀಚ) ಯೋಗದರ್ಶನಾನುಯಾಯಿಯು (ಕಯಾಚಿತ್ ಕಾಕ್ವಾ) ಪರ್ಯಾಯ ವಿಶೇಷದಿಂದ (ಐಶ್ವರ್ಯಂ) ಈಶ್ವರತ್ವವನ್ನು (ಪ್ರತಿಫಲನಮಿವ) ಪ್ರತಿಬಿಂಬದಂತೆ (ಊಚೇ) ಹೇಳುತ್ತಾನೆ. (ಶೈವಃ) ಪಾಶುಪತಾನುಯಾಯಿಯು (ಭಿಕ್ಷುಃ) ರುದ್ರನಲ್ಲಿ (ಅತಿರಾಗಾತ್) ಹೆಚ್ಚಾದ ಪಕ್ಷಪಾತ ಇರುವ ಕಾರಣ (ಸುರಾಜಂಭವಂ) ಈಶ್ವರತ್ವವನ್ನು (ಅಭಿಮನುತೇ) ಅಭಿಪ್ರಾಯ ಪಡುತ್ತಾನೆ. (ತ್ವಂ) ಪಾಂಚರಾತ್ರವಕ್ತಾ ಆದ ನೀನು (ಪರವಿಭವವ್ಯೂಹನಾಢ್ಯಂ ಭವಿಷ್ಣುಂ) ಪರ, ವ್ಯೂಹ, ವಿಭವ ರೂಪಗಳಿಂದ ಸಂಪನ್ನನಾದ (ತ್ವಾಂ) ನಿನ್ನನ್ನು (ತ್ವಾಮೇವ)

ನೀನಾಗಿಯೇ [ಸ್ವರೂಪರೂಪಾದಿಗಳಲ್ಲಿ ಒಂದು ವಿಧವಾದ ಮಾರ್ಪಾಟು ಇಲ್ಲದೆ] (ಅಭ್ಯಧಾಃನಸು) ಹೇಳಿ ತಿಳಿಸಿದೆಯಷ್ಟೇ ?

ನಿರೀಶ್ವರಸಾಂಖ್ಯನು ಪ್ರಕೃತಿಪುರುಷಗಳೆರಡೇ ತತ್ವಗಳೆನ್ನುವನು. ಅಂಧ ಪಂಗುನ್ಯಾಯದಿಂದ ಇವರು ಪ್ರವೃತ್ತಿಯುಕ್ತರಾಗುವರು ಎನ್ನುತ್ತಾನೆ. ಈಶ್ವರ ವಿಷಯವಾದ ವೇದವಾಕ್ಯಕ್ಕೆ ಅನ್ಯಪರವಾದ ಅರ್ಥವನ್ನು ಇವರು ಹೇಳುತ್ತಾರೆ. ಅವನು ಈಶ್ವರನನ್ನು ವಿವೇಚಿಸಲೇ ಇಲ್ಲ. ಸೇಶ್ವರಸಾಂಖ್ಯರು ಈಶ್ವರನ ಐಶ್ವರ್ಯವು ಔಪಾಧಿಕವೆಂದು ಒಪ್ಪಿಕೊಂಡಿದ್ದಾರೆ: ಈಶ್ವರನಿಗೆ ಯೋಗಜನ್ಯವಾದುದು ಐಶ್ವರ್ಯ ಎಂದು ಹೇಳುತ್ತಾರೆ. ಈಶ್ವರನ ಐಶ್ವರ್ಯವು ಉಪಾಧಿವಿಶೇಷಪ್ರಯುಕ್ತವೆಂದು ಹೇಳುವುದರಿಂದಲೂ, ಈಶ್ವರನು ಕ್ರಿಯಾಶಕ್ತಿವಿಕ್ಷೇಪರಹಿತತೆಯ ಕಾರಣ ಸಾಂಖ್ಯಪುರುಷನಂತೆ ನಿರ್ವ್ಯಾಪಾರಕನಾಗಿ ಸನ್ನಿಧಿಮಾತ್ರೋಪಕಾರಕನಾಗಿರುವನೆಂದು ಹೇಳುವುದರಿಂದಲೂ ಈ ದರ್ಶನದ ಸಿದ್ಧಾಂತ ಸರಿಯಾದುದಲ್ಲ. ಪಾಶುಪತಮತಾನುಯಾಯಿಗಳು ರುದ್ರನೇ ಪರದೈವವೆನ್ನುವರು. ಈ ತಂತ್ರಗಳು ಸಾಧುವಲ್ಲ. 'ಪಾಂಚರಾತ್ರಸ್ಯ ವಕ್ತಾ ಯಃ' ಎಂದು ಹೇಳಿದಂತೆ ಭಗವಂತನೇ ತನ್ನ ಸ್ವರೂಪ ರೂಪ ಗುಣ ವಿಭೂತಿಗಳನ್ನು ಪಾಂಚರಾತ್ರದಲ್ಲಿ ಪ್ರತಿಪಾದಿಸಿರುವುದರಿಂದ ಪಾಂಚರಾತ್ರವು ಪೂರ್ಣವಾಗಿ ಪ್ರಮಾಣ. ವೇದೋಪದೇಶಕ್ಕೆ ಸ್ವಲ್ಪವೂ ವಿರೋಧವಿಲ್ಲದುದರಿಂದಲೂ ಭಗವಂತನಿಂದಲೇ ಪ್ರಣೀತವಾದುದರಿಂದಲೂ ಇದಕ್ಕೆ ಈ ಹೆಗ್ಗಳಿಕೆ ಇದೆ.

**ಇತಿ ಮೋಹನವರ್ತ್ಮನಾ ತ್ವಯಾಪಿ ಗ್ರಥಿತಂ ಬಾಹ್ಯಮತಂ**
**ತೃಣಾಯ ಮನ್ಯೇ ।**
**ಅಥ ವೈದಿಕವರ್ಮವರ್ತಿತಾನಾಂ ಮುನಿತಾ ಹೇ ಕುದೃಶಾಂ**
**ಕಿಮೀಶ ವರ್ತ್ಮ ॥ ॥೧೬॥**

(ಹೇ) ಈಶ ಎಲೈ ಸ್ವಾಮಿಯೇ, (ಇತಿ) ಈ ಪ್ರಕಾರವಾಗಿ (ಮೋಹನವರ್ತ್ಮನಾ) ಮತ್ತೊಬ್ಬರನ್ನು ಮೋಹಗೊಳಿಸುವ ಮಾರ್ಗದಿಂದ (ತ್ವಯಾ)

ನಿನ್ನಿಂದಲೇ (ಗ್ರಥಿತಂ ಅಪಿ) ಏರ್ಪಡಿಸಲ್ಪಟ್ಟಿದ್ದಾಗಿದ್ದರೂ (ಬಾಹ್ಯಮತಂ) ವೇದಬಾಹ್ಯವಾದ ಮತವನ್ನು (ತೃಣಾಯ ಮನ್ಯೇ) ಹುಲ್ಲಿಗೆ ಸಮನಾಗಿ ಕಡೆಗಾಣಿಸುತ್ತೇನೆ (ಅಥ) ಮತ್ತೂ (ವೈದಿಕ ವರ್ಮವರ್ಮಿತಾನಾಂ) ವೈದಿಕರೆಂದು ವೇಷವನ್ನು ಹಾಕಿಕೊಂಡು ತಮ್ಮ ರೂಪವನ್ನು ಮರೆಸಿಕೊಂಡಿರುವ (ಕುದೃಶಾಂ) ಕುತ್ಸಿತವಾದ ದೃಷ್ಟಿಯುಳ್ಳವರ (ವರ್ತ್ಮ) ದಾರಿಯನ್ನು (ಮನಿತಾ ಹೇಕಿಂ) ಮನಸ್ಸಿನಿಂದಲೂ ನೆನೆಯುವವನಾಗುತ್ತೇನೆಯೆ ?

ಬಾಹ್ಯ ಮತಗಳನ್ನೂ ಕುತ್ಸಿತವಾದ ಮಾರ್ಗಗಳನ್ನೂ ನಾನು ಪೂರ್ಣವಾಗಿ ಅನಾದರಿಸುತ್ತೇನೆ. ಈ ಕುತ್ಸಿತವಾದ ಮಾರ್ಗಗಳನ್ನು ಭಗವಂತನೇ ಮಾಡಿದನು ಮಾಡಿಸಿದನು ಎಂಬುವುದನ್ನು 'ತ್ವಂ ಹಿ ರುದ್ರ ಮಹಾಬಾಹೋ ಮೋಹಶಾಸ್ತ್ರಾಣಿ ಕಾರಯ । ಅಹಂ ಶುದ್ಧೋದನಸುತೋಭೂತ್ವಾ ಮೋಹಯಿಷ್ಯಾಮಿ ಮಾನವಾನ್' ಮೊದಲಾದುವುಗಳಿಂದ ತಿಳಿಯಬಹುದು. ನಮ್ಮಾಳ್ವಾರ್‌ರವರು ತಿರುವಿರತ್ತಂನಲ್ಲಿ 'ವ ಣಂಗುಂ ತುರೈಹಳ್ ಪಲಪಲವಾಕ್ಕಿ ಮತಿವಿಕರ್ಪಾಲ್ ಪಿಣಂಗುಂ ಶಮಯಂ ಪಲಪಲವಾಕ್ಕಿ, ಅವೈ ಅವೈ ತೋರು ಅಣಂಗುಂ ಪಲಪಲವಾಕ್ಕಿ, ನಿನ್ಮೂರ್ತಿ ಪರಪ್ಪಿವೈತ್ತಾಯ್, ಇಣಂಗುಂ ನಿನ್ನೋರೈ ಇಲ್ಲಾಯ್ ನಿನ್‌ಕಣ್‌ವೇಳೈೃ ಎಥ್ರುವಿಪ್ಪನೇ' ಎಂದು ಅನುಸಂಧಾನ ಮಾಡಿರುವುದನ್ನು ಕಾಣಬಹುದು.

**ಸಂಸ್ಕಾರಂ ಪ್ರತಿಸಂಚರೇಷು ನಿದಧತ್ಸರ್ಗೇಷು ತತ್ಸ್ಮಾರಿತಂ**
**ರೂಪಂ ನಾಮ ಚ ತತ್ತದರ್ಹನಿವಹೇ ವ್ಯಾಕೃತ್ಯ ರಂಗಾಸ್ಪದ ।**
**ಸುಪ್ತೋದ್ಬುದ್ಧ ವಿರಿಂಚ ಪೂರ್ವಜನತಾಮಧ್ಯಾಪ್ಯ ತತ್ತದ್ಧಿತಂ**
**ಶಾಸನ್ನಸ್ಮೃತಕರ್ತೃಕಾನ್ನಹಸಿ ಯದ್ವೇದಾಃ**
**ಪ್ರಮಾಣಂ ತತಃ ॥ ॥೧೭॥**

(ಹೇ ರಂಗಾಸ್ಪದ) ಹೇ ರಂಗನಾಥನೇ, (ಪ್ರತಿ ಸಂಚರೇಷು) ಪ್ರಳಯ ಕಾಲಗಳಲ್ಲಿ (ಸಂಸ್ಕಾರಂ) ಸಂಸ್ಕಾರರೂಪವಾಗಿ ವೇದವನ್ನು (ನಿದಧತ್) ತನ್ನ

ಹತ್ತಿರ ಇಟ್ಟುಕೊಂಡವನಾಗಿ (ಸರ್ಗೇಷು) ಸೃಷ್ಟಿಕಾಲಗಳಲ್ಲಿ ಆಯಾ ವಸ್ತುವಿನ (ತತ್ ಸ್ಮಾರಿತಂ) ಆ ಸಂಸ್ಕಾರದಿಂದ ನೆನಪು ಮಾಡಲ್ಪಟ್ಟ (ರೂಪಂ) ಆಯಾ ವಸ್ತುವಿನ ರೂಪವನ್ನೂ (ನಾಮಚ) ಹೆಸರನ್ನೂ (ತತ್ರಾಕ್ ಅರ್ಹನಿವಹೇ) ಆಯಾವಸ್ತುಗಳಿಗೆ ಉಚಿತವಾದ ವಸ್ತು ಸಮೂಹದಲ್ಲಿ (ವ್ಯಾಕೃತ್ಯ) ಏರ್ಪಡಿಸಿ (ಸುಪ್ತ-ಉದ್ಬುದ್ಧ-ವಿರಿಂಚ ಪೂರ್ವಜನತಾಂ) ನಿದ್ದೆ ಮಾಡಿ ಎದ್ದ ಬ್ರಹ್ಮನೇ ಮೊದಲಾದ ಜನ ಸಮೂಹಕ್ಕೆ (ಅಧ್ಯಾಪ್ಯ) ಕಲಿಸಿಕೊಟ್ಟು (ತತ್ತತ್ ಹಿತಂ ಶಾಸತ್) ಅವರವರ ಒಳ್ಳೆಯದನ್ನು ನಿಯಮಿಸುವವನಾಗಿ (ನಸ್ಮೃತಕರ್ತೃಕಾನ್) ಕರ್ತೃ ಇಂಥವನೆಂದು ತಿಳಿಯಲ್ಪಡದ ವೇದಗಳನ್ನು (ಯತ್ ವಹಸಿ ತತಃ) ನೀನೇ ವಹಿಸುವ ಕಾರಣದಿಂದ (ವೇದಾಃ) ಆ ವೇದಗಳು (ಪ್ರಮಾಣಂ) ಸ್ವಯಂ ಪ್ರಮಾಣವಾಗಿವೆ.

ವೇದ ಪ್ರಾಮಾಣ್ಯವನ್ನು ಇಲ್ಲಿ ಪ್ರತಿಪಾದಿಸಿದೆ. ಈಶ್ವರನು ವೇದವನ್ನು ಸೃಜಿಸಲಿಲ್ಲ. ಪ್ರಳಯ ಕಾಲದಲ್ಲಿ ಆ ವೇದದ ಆನುಪೂರ್ವಿಯನ್ನು ನೆನಪಿನಲ್ಲಿಟ್ಟುಕೊಂಡ ಭಗವಂತನು ಆ ಆನುಪೂರ್ವಿಗನುಸಾರವಾಗಿಯೇ ಬ್ರಹ್ಮಾದಿ ದೇವತೆಗಳಿಗೆ ಉಪದೇಶಿಸುತ್ತಾನೆ. ಆದುದರಿಂದ ವೇದ ಅನಾದಿ, ಸ್ವತಃ ಪ್ರಮಾಣ, ನಿತ್ಯ, ಎಂದು ತಿಳಿಯಬಹುದು. ಅದಕ್ಕನುಗುಣವಾಗಿ ನಾಮರೂಪ ವ್ಯಾಕರಣವನ್ನು ಮಾಡುತ್ತಾನೆ ಭಗವಂತ. ಸಕಲಲೋಕದ ಸರ್ವರಿಗೂ ಹಿತವನ್ನು ನಿಯಮಿಸುವವನಾಗಿದ್ದಾನೆ ಅವನು. ಆ ವೇದಗಳನ್ನು ಅವನೇ ನಿರ್ವಹಿಸುವವನಾದುದರಿಂದ ಆ ಅನಂತವಾದ ವೇದಗಳು ಪ್ರಮಾಣ.

ಶಿಕ್ಷಾಯಾಂ ವರ್ಣಶಿಕ್ಷಾಪದಸಮಧಿಗಮೋ ವ್ಯಾಕ್ರಿಯಾ
ನಿರ್ವಚೋಭ್ಯಾಂ
ಛಂದಶ್ಛಂದಶ್ಚಿತೌ ಸ್ಯಾದ್ಗಮಯತಿ ಸಮಯಂ
ಜ್ಯೋತಿಷಂ ರಂಗನಾಥ ।
ಕಲ್ಪೇಽನುಷ್ಠಾನಮುಕ್ತಂ ಹ್ಯುಚಿತಗಮಿತಯೋಃ
ನ್ಯಾಯ ಮೀಮಾಂಸಯೋಃ ಸ್ಯಾತ್
ಅರ್ಥವ್ಯಕ್ತಿಃ ಪುರಾಣಸ್ಮೃತಿಷು ತದನುಗಾಸ್ತ್ವಾಂ
ವಿಚಿನ್ವಂತಿ ವೇದಾಃ ॥ ॥೧೮॥

(ರಂಗನಾಥ) ಎಲೈ ರಂಗನಾಥನೇ, (ಶಿಕ್ಷಾಯಾಂ) ಶಿಕ್ಷಾ ಎಂಬ ವೇದಾಂಗದಲ್ಲಿ (ವರ್ಣಶಿಕ್ಷಾ) ಅಕ್ಷರಗಳ ಉಚ್ಚಾರಣೆಯ ಕ್ರಮಾದಿಗಳ ಶಿಕ್ಷಣ ಮಾಡಲಾಗಿದೆ. (ವ್ಯಾಕ್ರಿಯಾಸಿರ್ವಚೋಃಭ್ಯಾಂ) ವ್ಯಾಕರಣ ನಿರುಕ್ತ ಎಂಬ ವೇದಾಂಗಳಿಂದ (ಪದಸಮಧಿಗಮಃ) ಪದಗಳ ಪ್ರಕೃತಿಪ್ರತ್ಯಯ ವಿಭಾಗ ಮತ್ತು ಅರ್ಥ ಶಿಕ್ಷೆ ನಡೆಯುತ್ತದೆ. (ಛಂದಶ್ಚಿತೌ) ಛಂದಶ್ಶಾಸ್ತ್ರದಲ್ಲಿ (ಛಂಧಃ) ಗಾಯತ್ರೀ ಮೊದಲಾದ ಛಂದಸ್ಸುಗಳ ವಿಷಯವು (ಸ್ಯಾತ್) ಹೇಳಲ್ಪಟ್ಟಿರುತ್ತದೆ. (ಜ್ಯೋತಿಷಂ) ಜ್ಯೋತಿಷ ಶಾಸ್ತ್ರವು (ಸಮಯಂ) ವೈದಿಕ ಕರ್ಮಗಳನ್ನು ಮಾಡಬೇಕಾದ ಕಾಲವನ್ನು (ಗಮಯತಿ) ತಿಳಿಸುತ್ತದೆ. (ಕಲ್ಪೇ) ಕಲ್ಪ ಸೂತ್ರದಲ್ಲಿ (ಅನುಷ್ಠಾನಂ) ವೈದಿಕ ಕರ್ಮಗಳ ಅನುಷ್ಠಾನ ಕ್ರಮವು (ಉಕ್ತಂ) ಹೇಳಲ್ಪಟ್ಟಿದೆ. (ಉಚಿತಗಮಿತಯೋಃ) ವೈದಿಕ ಸಿದ್ಧಾಂತಕ್ಕೆ ಅನುಗುಣವಾಗಿ ನಡೆಸಲಾದ (ನ್ಯಾಯಮೀಮಾಂಸಯೋಃ) ನ್ಯಾಯಶಾಸ್ತ್ರ ಮತ್ತು ಮೀಮಾಂಸೆಗಳಿಂದಲೂ (ಪುರಾಣಸ್ಮೃತಿಷು) ಪುರಾಣಗಳಲ್ಲಿಯೂ ಸ್ಮೃತಿಗಳಲ್ಲಿಯೂ (ಅರ್ಥವ್ಯಕ್ತಿಃ ಸ್ಯಾತ್) ಅರ್ಥ ವಿವೇಚನೆ ಉಂಟಾಗುತ್ತದೆ. (ತದನುಗಾಃ) ಮೇಲೆ ಹೇಳಿದ ವೇದಾಂಗಗಳಿಂದ ಅನುಸರಿಸಲ್ಪಡುವ (ವೇದಾಃ) ವೇದಗಳು (ತ್ವಾಂ) ನಿನ್ನನ್ನು (ವಿಚಿನ್ವಂತಿ) ಅನ್ವೇಷಿಸುತ್ತವೆ. ವಿಚಾರಿಸುತ್ತವೆ.

ವೇದ ಪ್ರಾಮಾಣ್ಯವನ್ನು ಹಿಂದಿನ ಶ್ಲೋಕದಲ್ಲಿ ಹೇಳಲಾಯಿತು. ವೇದಾಂಗಗಳಿಂದ ಉಪಬೃಂಹಿತವಾದ ವೇದಗಳು ಭಗವಂತನನ್ನು ಪ್ರತಿಪಾದಿಸುತ್ತವೆ ಎಂದು ಇಲ್ಲಿ ಹೇಳಿದೆ. ವೇದಗಳ ಅರ್ಥಗಳ ಔಚಿತ್ಯವನ್ನು ಸಮರ್ಥಿಸುತ್ತದೆ ನ್ಯಾಯಶಾಸ್ತ್ರ ಪ್ರಮಾಣಗಳ ಮೂಲಕ. ಧರ್ಮಶಾಸ್ತ್ರ ವೇದಗಳ ಪೂರ್ವಭಾಗಕ್ಕೆ ಉಪಬೃಂಹಣ. ಉತ್ತರಭಾಗ ಎಂದರೆ ವೇದಾಂತಗಳು ಪ್ರತಿಪಾದಿಸುವ ಅರ್ಥಗಳನ್ನು ಪುರಾಣಸ್ಮೃತಿಗಳು ಪ್ರತಿಪಾದಿಸುತ್ತವೆ.

ಆದೌ ವೇದಾಃ ಪ್ರಮಾಣಂ ಸ್ಮೃತಿರುಪಕುರುತೇ
　　ಸೇತಿಹಾಸೈಃ ಪುರಾಣೈಃ
ನ್ಯಾಯೈಃ ಸಾರ್ಧಂ ತ್ವದರ್ಚಾವಿಧಿ ಮುಪರಿ
　　ಪರಿಕ್ಷೀಯತೇ ಪೂರ್ವಭಾಗಃ ।

ಊರ್ಧ್ವೋರ್ಭಾಗಸ್ತ್ವದೀಹಾ-ಗುಣವಿಭವ-
ಪರಿಜ್ಞಾಪನೈಸ್ತ್ವತ್ಪದಾಪ್ತೌ
ವೇದ್ಯೋ ವೇದ್ಯೈಶ್ಚ ಸರ್ವೈರಹಮಿತಿ ಭಗವನ್
ಸ್ವೇನ ಚ ವ್ಯಾಚಕರ್ಥ ॥ ॥೧೯॥

(ಹೇ ಭಗವನ್) ಎಲೈ ಸ್ವಾಮಿಯೇ, (ವೇದಾಃ) ವೇದಗಳು (ಆದೌ) ಮೊದಲು ಎಂದರೆ ಅನ್ಯಪ್ರಮಾಣ ನಿರಪೇಕ್ಷವಾಗಿ ಸ್ವಯಂ (ಪ್ರಮಾಣಂ) ಪ್ರಮಾಣವಾಗಿದೆ. (ಸ್ಮೃತಿಃ) ಮನ್ವಾದಿ ಸ್ಮೃತಿಗಳು (ಸೇತಿಹಾಸೈಃ ಪುರಾಣೈಃ) ಇತಿಹಾಸಗಳೊಡನೆಯೂ ಪುರಾಣಗಳೊಡನೆಯೂ, (ನ್ಯಾಯೈಃ ಸಾರ್ಧಂ) ಪೂರ್ವೋತ್ತರ ಮೀಮಾಂಸೆಗಳೊಡನೆಯೂ ಸಹ (ಉಪಕುರುತೇ) ಆ ವೇದಗಳಿಗೆ ಅರ್ಥ ನಿರೂಪಣೆ ಮಾಡುವ ಉಪಕಾರ ಮಾಡುತ್ತವೆ. ಆ ವೇದದಲ್ಲಿ (ಪೂರ್ವಭಾಗಃ) ಕರ್ಮಕಾಂಡವೆಂಬ ಪೂರ್ವಭಾಗವು (ತ್ವದರ್ಚಾ ವಿಧಿ ಮುಪರಿ) ನಿನ್ನ ಆರಾಧನೆಯ ಪ್ರಕಾರಗಳನ್ನು ಹೇಳುವ ರೀತಿಯಲ್ಲಿ (ಪರಿಕ್ಷೀಯತೇ) ಪೂರ್ಣವಾಗುತ್ತದೆ ಅಥವಾ .ನಿರೂಪಣೆಯನ್ನು ಮುಗಿಸುತ್ತದೆ. (ಊರ್ಧ್ವಭಾಗಃ) ಬ್ರಹ್ಮಕಾಂಡ ಎನ್ನುವ ಉಪನಿಷದ್ಭಾಗವು (ತ್ವದೀಹಾಗುಣವಿಭವ ಪರಿಜ್ಞಾಪನೈಃ) ನಿನ್ನ ಚೇಷ್ಟಿತಗಳು, ಗುಣಗಳು, ವಿಭೂತಿಗಳು, ಇವುಗಳನ್ನು ಚೆನ್ನಾಗಿ ತಿಳಿಸುವುದರಿಂದ (ತ್ವತ್ಪದಾಪ್ತೌ) ನಿನ್ನ ಪಾದಗಳನ್ನು ಸೇರುವುದರಲ್ಲಿ (ಪರಿಕ್ಷಿಯತೇ) ಕೊನೆಯಾಗುತ್ತದೆ. (ಸರ್ವೈಶ್ಚ ವೇದ್ಯೈಃ) ಕರ್ಮ ಬ್ರಹ್ಮಾತ್ಮಕವಾದ ಸಕಲವೇದಗಳಿಂದಲೂ (ಅಹಂ) ನಾನೇ (ವೇದ್ಯಃ ಇತಿ) ತಿಳಿಯಲ್ಪಡತಕ್ಕವನು ಎಂದು (ಸ್ವೇನ) ನಿನ್ನಿಂದಲೇ (ವ್ಯಾಚಕರ್ಥಚ) ಹೇಳಲ್ಪಟ್ಟದೆಯಷ್ಟೇ ?

ವೇದವು ಸಮಗ್ರವಾಗಿ ಭಗವಂತನನ್ನು ಪ್ರತಿಪಾದಿಸುವುದೆಂದು ಇಲ್ಲಿ ನಿರೂಪಿಸಿದೆ, ಉಪಬೃಂಹಣಗಳಾದ ಸ್ಮೃತೀತಿಹಾಸ ಪುರಾಣಗಳು ಆ ವೇದಾರ್ಥವನ್ನು ಚೆನ್ನಾಗಿ ತಿಳಿಸಿಕೊಡುತ್ತವೆ. ಈ ಉಪ ಬೃಂಹಣಗಳ ಸಹಾಯವನ್ನು ಹೊಂದಿಯೇ ವೇದಾರ್ಥವನ್ನರಿಯಬೇಕು. ನ್ಯಾಯಾನುಗೃಹೀತ

ಪಾದ ಅರ್ಥಗಳೇ ಗ್ರಾಹ್ಯವಾದುದರಿಂದ ಇದಕ್ಕೆ ಸಹಾಯಕವಾಗಿ ನ್ಯಾಯ ಶಾಸ್ತ್ರವನ್ನು ಅನ್ವಯಿಸಬೇಕು. ವೇದಗಳಲ್ಲಿ ಪೂರ್ವಭಾಗವು ಭಗವಂತನ ಆರಾಧನಪ್ರಕಾರಗಳನ್ನೂ ಉತ್ತರ ಭಾಗವು ಆ ಬಗೆ ಬಗೆಯ ಆರಾಧನ ಪ್ರಕಾರಗಳಿಂದ ಅರ್ಚಿಸಬೇಕಾದ ಪರಬ್ರಹ್ಮವಸ್ತುವಿನ ಸ್ವರೂಪಗುಣ ವಿಭೂತಿಗಳನ್ನೂ ನಿರೂಪಿಸುತ್ತದೆ. ಆದುದರಿಂದ ಎಲ್ಲ ವೇದಗಳೂ ಆ ಭಗವಂತ ನನ್ನೇ ಸಮಗ್ರವಾಗಿ ಪ್ರತಿಪಾದಿಸುತ್ತವೆ.

ಕ್ರಿಯಾ ತಚ್ಛಕ್ತಿರ್ವಾ ಕಿಮಪಿ ತದಪೂರ್ವಂ ಪಿತೃಸುರ
ಪ್ರಸಾದೋ ವಾ ಕರ್ತುಃ ಫಲದ ಇತಿ ರಂಗೇಶ ಕುದೃಶಃ ।
ತ್ವದರ್ಚೇಷ್ಟಾಪೂರ್ತೇ ಫಲಮಪಿ ಭವತ್ಪ್ರೀತಿ ಜಮಿತಿ
ತ್ರಯೀವೃದ್ಧಾಃ ತತ್ತದ್ವಿಧಿರಪಿ ಭವತ್ಪ್ರೇರಣಮಿತಿ ॥ ॥೨೦॥

(ಹೇ ರಂಗೇಶ) ಎಲೈ ರಂಗನಾಥನೇ, (ಕ್ರಿಯಾ) ಯಾಗ ಮೊದಲಾದ ಕರ್ಮ ಅಥವಾ (ತಚ್ಛಕ್ತಿ) ಆ ಕರ್ಮದ ಶಕ್ತಿಯೋ ಅಥವಾ (ಕಿಮಪಿ) ಅನಿರ್ವಚನೀಯವಾದ (ತದಪೂರ್ವಂ) ಆ ಕರ್ಮದಿಂದುಂಟಾಗುವ ಅಪೂರ್ವವೋ ಅಥವಾ (ಪಿತೃಸುರ ಪ್ರಸಾದೋವಾ) ಪಿತೃಗಳ ಅಥವಾ ದೇವತೆಗಳ ಅನುಗ್ರಹವೋ (ಕರ್ತುಃ ಫಲದ ಇತಿ) ಆಯಾ ಕರ್ಮಗಳನ್ನು ಮಾಡಿದವರಿಗೆ ಫಲ ಕೊಡುವುದು ಎಂದು (ಕುದೃಶಃ) ಕುತ್ಸಿತವಾದ ದೃಷ್ಟಿಯುಳ್ಳವರು ಹೇಳುತ್ತಾರೆ. (ತ್ರಯೀ ವೃದ್ಧಾಃ) ವೈದಿಕಜ್ಞಾನವುಳ್ಳ ಹಿರಿಯರು (ಇಷ್ಟಾಪೂರ್ತೇ) ಜಪ ಹೋಮ ದಾನಾದಿಗಳಾದ ಇಷ್ಟ ಮತ್ತು ಕೊಳ, ಗುಡಿ, ಕಾಲುವೆ ಇವುಗಳನ್ನು ಕಟ್ಟುವ ಪೂರ್ತವೇನು ಇವು (ತ್ವದರ್ಚೆ) ನಿನ್ನ ಆರಾಧನೆ ಎಂದೂ (ಫಲಮಪಿ) ಮೇಲೆ ಹೇಳಿದ ಆ ಇಷ್ಟಾಪೂರ್ತಗಳಿಂದ ಆದ ಫಲವೂ (ಭವತ್ಪ್ರೀತಿಜಮಿತಿ) ನಿನ್ನ ಅನುಗ್ರಹದಿಂದ ಉಂಟಾಗುವುವೆಂದೂ (ತತ್ತದ್ವಿಧಿರಪಿ) ಆಯಾ ಕರ್ಮಗಳ ವಿಧಿಯೂ (ಭವತ್ಪ್ರೇರಣಮಿತಿ) ನಿನ್ನ ಕಟ್ಟಳೆ ಎಂದೂ (ಆಹುಃ) ಹೇಳುತ್ತಾರೆ

ಯಾಗಾದಿ ಕರ್ಮವು ಆ ಕಾಲದಲ್ಲಿಯೇ ಮುಗಿಯುವುದರಿಂದ ಅದು ಫಲಪ್ರದವಾಗದು ಎನ್ನುವುದಾದರೆ ಅನುಷ್ಠಾನ ಮಾಡಿದ ಕ್ರಿಯೆಯ ಶಕ್ತಿ

ಫಲ ಪ್ರಾಪ್ತಿಗೆ ಕಾರಣವೆಂದೂ ಅಥವಾ ಆ ಕ್ರಿಯೆಯಿಂದ ಉಂಟಾಗುವ ಅಪೂರ್ವವು ಕಾರಣವೆಂದೂ ಹೇಳುತ್ತಾರೆ ಮೀಮಾಂಸಕರು. ಪಿತೃಗಳ ಅನುಗ್ರಹ ಫಲವನ್ನು ಕೊಡುತ್ತದೆ ಎಂದು ಕೆಲವರು ಹೇಳಿದರು. ಆಯಾ ಕ್ರಿಯೆಗಳಿಂದ ಆರಾಧಿಸಲ್ಪಡುವ ಭಗವಂತನಿಂದಲೇ ಫಲಪ್ರಾಪ್ತಿ ಆಗುವು ದೆಂದು ವೇದಾಂತ ಸಿದ್ಧಾಂತವೆಂದು ತಿಳಿಯಬೇಕು. 'ಫಲಂ ಅತಃ ಉಪ ಪತ್ತೇಃ' ಎಂಬ ಸೂತ್ರದಲ್ಲಿ ಇದನ್ನು ಸಮರ್ಥಿಸಿರುವುದನ್ನು ಕಾಣ ಬಹುದು.

ಆಜ್ಞಾ ತೇ ಸನಿಮಿತ್ತನಿತ್ಯವಿಧಯಃ ಸ್ವರ್ಗಾದಿಕಾಮ್ಯದ್ವಿಧಿಃ
ಸೋನುಜ್ಞಾ ಶಠಚಿತ್ತಶಾಸ್ತ್ರವಶತೋಪಾಯೋಽಭಿಚಾರಶ್ರುತಿಃ ।
ಸರ್ವೀಯಸ್ಯ ಸಮಸ್ತಶಾಸಿತುರಹೋ ಶ್ರೀರಂಗ ಸರ್ವಸ್ವ ತೇ
ರಕ್ಷಾಕೂತ ನಿವೇದಿನೀ ಶ್ರುತಿರಸೌ ತ್ವನ್ನಿತ್ಯಶಾಸ್ತಿಸ್ತತಃ ॥ ॥೨೧॥

(ಅಹೋ ಶ್ರೀರಂಗ ಸರ್ವಸ್ವ) ಶ್ರೀ ರಂಗನಾಥನೇ, (ಸನಿಮಿತ್ತ ನಿತ್ಯ ವಿಧಯಃ) ನೈಮಿತ್ತಿಕ ಮತ್ತು ನಿತ್ಯಕರ್ಮಗಳಿಗೆ ಅನ್ವಯಿಸಿದ ವಿಧಿಗಳು (ತೇ) ನಿನ್ನ (ಆಜ್ಞಾ) ಅತಿಕ್ರಮಿಸಲಾಗದ ಕಟ್ಟಳೆ. (ಸಃ) ಅಂಥ (ಸ್ವರ್ಗಾದಿ ಕಾಮ್ಯದ್ವಿಧಿಃ) ಸ್ವರ್ಗ ಮೊದಲಾದ ಫಲಗಳನ್ನು ಬಯಸುವವರಿಗೆ ಅನ್ವ ಯಿಸುವ ವಿಧಿಯಾದುದು (ಅನುಜ್ಞಾ) ಅಪೇಕ್ಷೆ ಉಂಟಾದರೆ ಅನುಷ್ಠಿಸ ಬಹುದು ಎಂಬ ಅನುಜ್ಞೆ ಆಗುತ್ತದೆ. (ಅಭಿಚಾರ ಶ್ರುತಿಃ) ಶತ್ರುಗಳನ್ನು ಕೊಲ್ಲುವುದಕ್ಕೆ ಸಾಧನವಾದ ಕಾರ್ಯವನ್ನು ವಿಧಿಸುವ ವೇದಭಾಗವು (ಶಠ ಚಿತ್ತಶಾಸ್ತ್ರವಶತೋಪಾಯಃ) ಕ ಠಿ ಣ ಮ ನ ಸ್ಕ ರ ನ್ನೂ ಆಸ್ತಿಕರನ್ನಾಗಿ ಮಾಡುವ ಉಪಾಯಗಳಾಗುತ್ತವೆ. (ತತಃ) ಆದುದರಿಂದ (ಸರ್ವೀಯಸ್ಯ) ಸರ್ವಲೋಕ ಹಿತೈಷಿಯೂ (ಸಮಸ್ತಶಾಸಿತುಃ) ಸರ್ವನಿಯಾಮಕನೂ ಆಗಿರುವ (ತೇ) ನಿನ್ನ (ರಕ್ಷಾಕೂತನಿವೇದಿನೀ) ರಕ್ಷಣಮಾಡಬೇಕೆಂಬ ಕುತೂ ಹಲವನ್ನು ತೋರುವ (ಅಸೌಶ್ರುತಿಃ) ಈ ವೇದವು (ತ್ವನ್ನಿತ್ಯಶಾಸ್ತಿಃ) ನಿನ್ನ ಶಾಶ್ವತವಾದ ಕಟ್ಟಳೆಯಾಗಿದೆ.

ಶಾಸ್ತ್ರವೆಲ್ಲ ಭಗವಂತನ ಕಟ್ಟಳೆ ಎಂದು ಹೇಳಿದರೆ ಶಾಸ್ತ್ರದಲ್ಲಿ ಹೇಳು ವುದನ್ನೆಲ್ಲಾ ನಡೆಸಬೇಡವೇ? ಕಾಮ್ಯಾಭಿಚಾರಗಳನ್ನೂ ಅನುಷ್ಠಿಸಬೇಡವೇ? ಈ ಪ್ರಶ್ನೆಗೆ ಉತ್ತರ ಇಲ್ಲಿದೆ. ಕರ್ಮಗಳು ಮೂರು ಬಗೆ. ನಿತ್ಯ ನೈಮಿತ್ತಿಕ ಮತ್ತು ಕಾಮ್ಯ ಎಂದು.'ಆಜ್ಞಾನುಜ್ಞಾವಿಭಾಗೇನ ದ್ವಿಧಾ ಶಾಸ್ತ್ರೀಯಪದ್ಧತಿಃ| ನಿಗ್ರಹಾನುದಯಾಯಾದ್ಯಾ ಪರಾ ತತ್ತತ್ಫಲಾಪ್ತಯೇ । ಅನುಜ್ಞಯಾ ಪ್ರವೃತ್ತೇಽಪಿ ಕ್ರಮಕೋಪಾದಿಸಂಭವೇ ! ಆಜ್ಞಾತಿಕ್ರಮ ದೋಷಃ ಸ್ಯಾತ್ ನಿಯಮೋತೋ ದುರತ್ಯಯಃ॥ ಎಂದು ಹೇಳಿದಂತೆ ನಿತ್ಯನೈಮಿತ್ತಿಕಕರ್ಮಗಳು ಆಜ್ಞಾರೂಪವಾದವು. ಇವುಗಳನ್ನು ಶಾಸ್ತ್ರೋಕ್ತವಾದ ರೀತಿಯಲ್ಲಿ ಮಾಡಲೇ ಬೇಕು. ಭಗವಂತನ ನಿಗ್ರಹ ನಮ್ಮ ಮೇಲೆ ಉಂಟಾಗದೇ ಇರುವುದಕ್ಕೆ ಇವುಗಳನ್ನು ಅನುಷ್ಠಿಸಬೇಕು. ಕಾಮ್ಯಕರ್ಮಗಳು ಆಯಾ ಫಲಗಳನ್ನು ಬಯಸಿ ಮಾಡುವ ಕರ್ಮ. ಇವುಗಳನ್ನು ಮಾಡಲು ಭಗವಂತನ ಅನುಜ್ಞೆ ಉಂಟು. ಆದರೆ ಮಾಡಲೇ ಬೇಕೆಂಬ ಆಜ್ಞೆ ಇಲ್ಲ. ಕಾಮ್ಯಕರ್ಮಗಳ ನಿರೂಪಣೆ ಇರುವಂತೆ ವೇದದಲ್ಲಿ ಅಭಿಚಾರಗಳ ವಿಷಯವೂ ಇದೆ. ವೇದದಲ್ಲಿ ನಂಬಿಕೆಯನ್ನುಂಟುಮಾಡುವುದಕ್ಕಾಗಿ ಇರುತ್ತವೆ ಇವು. ಆದರೆ ಇವುಗಳನ್ನು ಎಲ್ಲರೂ ಮಾಡಬೇಕೆಂಬುದಿಲ್ಲ. ಅಭಿಚಾರ ಮತ್ತು ಕಾಮ್ಯ ಕರ್ಮಗಳು ಹೇಗೆ ಆಯಾಫಲಪ್ರದಗಳೋ ಹಾಗೆ ಭಗವಂತನನ್ನು ತಿಳಿಯಬೇಕೆಂದು ಹೇಳುವ ಶ್ರುತಿಗಳು ಪ್ರಮಾಣವೆಂದು ತಿಳಿದು ಕ್ರಮೇಣ ಉಳಿದವನ್ನು ಬಿಟ್ಟು ಭಗವ ತ್ಪ್ರಾಪ್ತಿಗೆ ಆಶಿಸುವಂತೆ ಮಾಡುವುದು ಇದರ ಉದ್ದೇಶ. ಕಾಮ್ಯ ಕರ್ಮಗಳನ್ನು ಕೇವಲ ಭಗವತ್ಪ್ರೀತಿಗಾಗಿಯೇ ಮಾಡುವುದಾದರೆ ಅವು ಬಂಧಕವಾಗುವುದಿಲ್ಲ.

**ಅತ್ರಾಸ್ತೇ ನಿಧಿರಿತಿವತ್ಸ್ವಮರ್ಥಭೂತೇ**
**ಸಿದ್ಧಾರ್ಥಾ ಅಪಿ ಗುಣರೂಪವೃತ್ತವಾದಾಃ ।**
**ರಂಗೇಶ ತ್ವಯಿ ಸಕಲಾ ಸಮನ್ವಯಂತೇ**
**ನೋಪಾಸಾಫಲವಿಧಿಭಿರ್ವಿಶೇಷ ಏಷಾಂ ॥** ॥೨೨॥

(ರಂಗೇಶ) ರಂಗನಾಥನೇ (ಸಕಲಾಃ) ಸಮಸ್ತವಾದ (ಗುಣರೂಪವೃತ್ತ ವಾದಾಃ) ನಿನ್ನ ಕಲ್ಯಾಣಗುಣ, ರೂಪ, ಚರಿತ್ರೆ ಇವುಗಳನ್ನು ಹೇಳುವ

ಉಪನಿಷದ್ಭಾಗಗಳಿಗು (ಸಿದ್ಧಾರ್ಥಾಃ ಅಪಿ) ಕಾರ್ಯಪರವಾಗದೆ ಸಿದ್ಧವಾದ ವಸ್ತುವನ್ನು ಹೇಳಿದರೂ ಸಹ (ಪುಮರ್ಥ ಭೂತೇ ತ್ವಯಿ) ಪುರುಷಾರ್ಥ ಭೂತನಾದ ನಿನ್ನಲ್ಲಿ (ಅತ್ರ ಆಸ್ತೇನಿಧಿಃ ಇತಿವತ್) ಇಲ್ಲಿ ನಿಧಿ ಇದೆ ಎನ್ನುವ ಸಿದ್ಧಪರವಾದ ವಾಕ್ಯದಂತೆ (ಸಮನ್ವಯಂತೇ) ಚೆನ್ನಾಗಿ ಅನ್ವಯಿಸುವುವು. (ಏಷಾಂ) ಈ ಗುಣರೂಪವೃತ್ತವಾದಗಳಿಗೆ (ಉಪಾಸಾಫಲವಿಧಿಭಿಃ) ಉಪಾಸನೆ ಯನ್ನೂ ಫಲವನ್ನೂ ಪ್ರತಿಪಾದಿಸುವ ವಾಕ್ಯಗಳಿಗಿಂತ ಬೇರೆಯಾದ (ವಿಶೇಷಃ ನ) ವಿಶೇಷವಿಲ್ಲ.

ವೇದವಾಕ್ಯಗಳಿಗೆಲ್ಲಾ ಪ್ರಾಮಾಣ್ಯವುಂಟೆಂದು ಇಲ್ಲಿ ಸಾಧಿಸಿದ್ದಾರೆ. ಧ್ಯಾಯೀತ, ಯುಂಜೀತ, ಯಜೇತ ಮೊದಲಾದವು ಕಾರ್ಯಪರವಾಗಿ ಹೇಗೆ ಪ್ರಮಾಣಗಳೋ ಹಾಗೆಯೇ ಸಿದ್ಧವಸ್ತುವಾದ ಬ್ರಹ್ಮವನ್ನು ನಿರೂಪಿಸುವ ವಾಕ್ಯಗಳೂ ಪ್ರಮಾಣ. ಸಿದ್ಧವಸ್ತುವನ್ನು ಬೋಧಿಸಲು ವೇದಕ್ಕೆ ಸಾಮರ್ಥ್ಯ ವಿಲ್ಲವೆಂದೂ ಕೇವಲ ಕಾರ್ಯಪರವಾದ ವಾಕ್ಯಗಳೇ ಪ್ರಮಾಣವೆಂದೂ ಹೇಳುವ ಪೂರ್ವಮೀಮಾಂಸಕರ ಅಭಿಪ್ರಾಯವನ್ನು ಇಲ್ಲಿ ನಿರಾಕರಿಸಿ ಸಿದ್ಧವಸ್ತುವಾದ ಬ್ರಹ್ಮವನ್ನು ವೇದವು ಬೋಧಿಸಬಲ್ಲದು ಎಂದು ಸಾಧಿಸಿದೆ. 'ಅಪವರಕೇ ನಿಧಿರಸ್ತಿ' ಎಂಬ ವಾಕ್ಯವೂ ಹಾಗೆಯೇ 'ಇವನು ನಿನ್ನ ತಂದೆ, ಇದು ಚಂದ್ರ, ಇದು ಮರ, ಇದು ಪಶು' ಎಂದು ಹೇಳುವ ವಾಕ್ಯವೂ ಆಯಾ ಪದಾರ್ಥಗಳನ್ನು ತಿಳಿಸುತ್ತವೆ. ಕಾರ್ಯದಲ್ಲಿ ಅನ್ವಯವಿಲ್ಲದೆಯೇ ಇವು ಬೋಧ್ಯ ಬೋಧಕ ಭಾವ ಹೊಂದಿವೆ. ಹಾಗೆಯೇ ಭಗವಂತನ ಕಲ್ಯಾಣ ಗುಣಗಳು, ರೂಪ, ಸ್ವರೂಪ, ಸ್ವಭಾವಗಳನ್ನು ಹೇಳುವ ಉಪನಿಷದ್ಭಾಗ ಗಳೂ ಪರಮ ಪ್ರಮಾಣವಾಗಿವೆ.

**ದೇಹೋ ದೇಹಿನಿ ಕಾರಣೇವಿಕೃತಯೋ ಜಾತಿರ್ಗುಣಾಃಕರ್ಮಚ**
**ದ್ರವ್ಯೇ ನಿಷ್ಠಿತರೂಪ ಬುದ್ಧಿವಚನಾಃ ತಾಸ್ಥ್ಯಾತ್ ತಥೇದಂ ಜಗತ್।**
**ವಿಶ್ವಂ ತ್ವಯ್ಯಭಿಮನ್ಯಸೇ ಜಗದಿಷೇ ತೇನಾದ್ವಿತೀಯಸ್ತತೋ**
**ಮಾಯೋಪಾಧಿವಿಕಾರಸಂಕರಕಥಾ ಕಾ**
**ನಾಮ ರಂಗೇಶ್ವರ ॥** **॥೨೩॥**

(ರಂಗೇಶ್ವರ) ರಂಗನಾಥನೇ, (ದೇಹಃ) ಶರೀರವು (ದೇಹಿನಿ) ಆತ್ಮನಲ್ಲಿಯೂ (ವಿಕೃತಯಃ) ಕಾರ್ಯರೂಪವಾದ ವಿಕಾರಗಳಾದವು (ಕಾರಣೇ) ತಮ್ಮ ಕಾರಣ ವಸ್ತುವಿನಲ್ಲಿಯೂ, (ಜಾತಿಃ ಗುಣಾಃ ಕರ್ಮಚ) ಜಾತಿ, ಗುಣ, ಕರ್ಮ ಎಂಬವು (ದ್ರವ್ಯೇ) ದ್ರವ್ಯದಲ್ಲಿಯೂ (ತಾಸ್ಥಾಕ್ಯಾತ್) ಯಾವಾಗಲೂ ಬಿಟ್ಟು ಅಗಲದ ವಿಶೇಷಣವಾಗಿ ಅಲ್ಲಿರುವ ಕಾರಣದಿಂದ (ನಿಷ್ಕೃತರೂಪ ಬುದ್ಧಿವಚನಾಃ) ರೂಪದ ಅನುಭವ, ವ್ಯವಹಾರ ಎಂಬುವು ಸದಾ ನಿಷ್ಕೃತವಾಗಿ ಒಂದೆಂಬ ವ್ಯವಹಾರಕ್ಕೆ ಆಸ್ಪದವಾಗಿವೆ. (ತಥಾ) ಹಾಗೆಯೇ (ಇದಂ) ಈ (ವಿಶ್ವಂ ಜಗತ್) ಎಲಾ ಜಗತ್ತೂ (ತ್ವಯಿ) ನಿನ್ನಲ್ಲಿ (ಅಭಿಮನ್ಯಸೇ) ನಿಷ್ಕೃತ ರೂಪ ಬುದ್ಧಿವಚನವಾದಂತೆ ಸಂಕಲ್ಪಿಸಿದ್ದೀಯೆ. (ತೇನ) ಆದುದರಿಂದ (ಅದ್ವಿತೀಯಃ) ಅದ್ವಿತೀಯನಾಗಿ (ಜಗದಿಷೇ) ಹೇಳಲ್ಪಟ್ಟೆ. (ತತಃ) ಆದುದರಿಂದ (ಮಾಯೋಪಾಧಿ ವಿಕಾರ ಸಂಕರಕಥಾ) ಮಾಯೆ, ಉಪಾಧಿ, ವಿಕಾರ ಮೊದಲಾದುವುಗಳ ಸಂಬಂಧವುಳ್ಳ ಮಾತು (ಕಾನಾಮ) ಎಲ್ಲಿಯದು? ಅದು ಅಸಾರವೆಂದೇ ಅರ್ಥ.

ಅದ್ವಿತೀಯ ಶಬ್ದಕ್ಕೆ ಅರ್ಥವನ್ನು ಇಲ್ಲಿ ನಿರೂಪಿಸಿದೆ. ಬ್ರಹ್ಮಶಬ್ದಕ್ಕೆ ಸಮನಾದುದು ಮತ್ತೊಂದು ಇಲ್ಲವೆಂಬುದು ಇದರ ಅರ್ಥ. ಅಪೃಥಕ್ ಸಿದ್ಧವಿಶೇಷಣಗಳಾದ ದೇಹ–ಆತ್ಮಕ್ಕೂ, ದ್ರವ್ಯಗುಣಾದಿಗಳಿಗೂ, ಕಾರಣ ಕಾರ್ಯಗಳಿಗೂ ಆ ಕಾರಣ ಏಕತ್ವವ್ಯವಹಾರ ಬರುತ್ತದೆ. ಹಾಗೆಯೇ ಜಗತ್ತಿಗೂ ಪರಮಾತ್ಮನಿಗೂ ಏಕತ್ವ ವ್ಯವಹಾರ ಸಂಭವಿಸುತ್ತದೆ. 'ತೇನಾದ್ವಿತೀಯಂ ಬ್ರಹ್ಮೇತಿ ಶ್ರುತೇರರ್ಥೋಽಯಮುಚ್ಯತೆ॥ ದ್ವಿತೀಯಗಣನಾಯೋಗ್ಯೋ ನಾಸೀದಸ್ತಿ ಭವಿಷ್ಯತಿ॥ ಸಮೋ ವಾಭ್ಯಧಿಕೋ ವಾಸ್ಯ ಯೋ ದ್ವಿತೀಯಸ್ತು ಗಣ್ಯತೇ। ಯತೋಽಸ್ಯ ವಿಭವವ್ಯೂಹ ಕಲಾಮಾತ್ರಮಿದಂ ಜಗತ್॥' ಎಂದು ಭಗವದ್ಯಾಮುನರು ಹೇಳಿದಂತೆ ಭಗವಂತನಿಗೆ ಸಮರಾಗಲೀ ಅಧಿಕರಾಗಲೀ ಯಾರೂ ಇಲ್ಲವೆಂಬ ಅರ್ಥವನ್ನು ಅದ್ವಿತೀಯ ಶಬ್ದ ತಿಳಿಸುತ್ತದೆ. ಈ ಲೋಕವಿಲ್ಲವೆಂದಾಗಲಿ, ಇದು ಮಾಯೆ ಎಂದಾಗಲೀ ಅದರ ಅರ್ಥವಲ್ಲ. ಈ ಜಗತ್ತೆಲ್ಲವೂ ಅವನ ವಿಭೂತಿಯಾಗಿದೆ. ಅವನೊಡನೆ ಎಡೆ ಬಿಡದೆ ಇದೆ.

ಆ ಕಾರಣ ವಿಭೂತಿಯೊಡನೆ ಸೇರಿರುವ ಪರಮಾತ್ಮನನ್ನು 'ಅದ್ವಿತೀಯ' ಎಂದು ವರ್ಣಿಸಿರುವುದು ಯುಕ್ತವೇ ಆಗಿದೆ.

**ಸ್ಥಿತ್ಯುತ್ಪತ್ತಿ-ಪ್ರವೃತ್ತಿ-ಗ್ರಸನ-ನಿಯಮನ-ವ್ಯಾಪನೈರಾತ್ಮನಸ್ತೇ**
**ಶೇಷೋಽಶೇಷಪ್ರಪಂಚೋ ವಪುರಿತಿ ಭವತಸ್ತಸ್ಯ ಚಾಭೇದವಾದಾಃ।**
**ಸರ್ವಂ ಖಲ್ವೈತದಾತ್ಮ್ಯಂ ಸಕಲಮಿದಮಹಂ**
**ತತ್ತ್ವಮಸ್ಯೇವಮಾದ್ಯಾಃ**
**ವ್ಯಾಖ್ಯಾತಾ ರಂಗಧಾಮಪ್ರವಣ ವಿಜಯಿಭಿರ್ವೈದಿಕೈಃ**
**ಸಾರ್ವಭೌಮ್ಯೈಃ॥ ॥೨೪॥**

(ರಂಗಧಾಮ ಪ್ರವಣ) ಎಲೈ ರಂಗನಾಥಸ್ವಾಮಿಯೇ, (ಸ್ಥಿತಿ) ರಕ್ಷಣೆಮಾಡುವುದು (ಉತ್ಪತ್ತಿ) ಸೃಷ್ಟಿ ಮಾಡುವುದು(ಪ್ರವೃತ್ತಿ) ಪ್ರವರ್ತನಗೊಳಿಸುವುದು (ಗ್ರಸನ) ತಕ್ಕ ಸಮಯದಲ್ಲಿ ಎಲ್ಲವನ್ನೂ ತನ್ನಲ್ಲೇ ಉಪಸಂಹಾರಮಾಡಿಕೊಳ್ಳುವುದು, (ನಿಯಮನ) ಒಂದೊಂದು ವಸ್ತುವಿನಲ್ಲಿಯೂ ಪ್ರವೇಶಿಸಿ ನಿಯಮಿಸುವುದು (ವ್ಯಾಪನೈಃ) ಎಲ್ಲೆಲ್ಲೂ ವ್ಯಾಪಿಸುವುದು ಮೊದಲಾದವುಗಳಿಂದ (ಆತ್ಮನಃ) ಸರ್ವಾತ್ಮನಾದ (ತೇ) ನಿನಗೆ (ಶೇಷಃ) ಶೇಷಭೂತವಾದ (ಅಶೇಷ ಪ್ರಪಂಚಃ) ಪ್ರಪಂಚವೆಲ್ಲವೂ (ವಪುಃ ಇತಿ) ನಿನಗೆ ಶರೀರವಾಗಿದೆ ಎಂಬ ಕಾರಣದಿಂದ (ಭವತಃ) ನಿನಗೂ (ತಸ್ಯಚ) ಆ ಪ್ರಪಂಚಕ್ಕೂ (ಅಭೇದವಾದಾಃ) ಅಭೇದವನ್ನೂ ಹೇಳುವಂತಹ ('ಸರ್ವಂ ಖಲ್ವೈತದಾತ್ಮ್ಯಂ', 'ಸಕಲಮಿದಮಹಂ' 'ತತ್ತ್ವಮಸಿ' ಏವಮಾದ್ಯಾಃ) ಸರ್ವಂ ಖಲ್ವಿದಂಬ್ರಹ್ಮ, ಸಕಲಮಿದಮಹಂ ಚ ವಾಸುದೇವಃ, ತತ್ತ್ವಮಸಿ ಶ್ವೇತಕೇತೋ ಮೊದಲಾದ ಪ್ರಮಾಣಗಳು (ವಿಜಯಿಭಿಃ) ಜಯಶಾಲಿಗಳಾದ (ವೈದಿಕೈಃ ಸಾರ್ವಭೌಮ್ಯೈಃ) ವೈದಿಕ ಮುಖಂಡರಿಂದ (ವ್ಯಾಖ್ಯಾತಾಃ) ಸಮಂಜಸವಾಗಿವೆಯೆಂದು ವಿವರಿಸಲ್ಪಟ್ಟವು.

ಅಭೇಧವಾಕ್ಯಗಳ ಅರ್ಥವನ್ನು ಇಲ್ಲಿ ನಿರೂಪಿಸಿದ್ದಾರೆ. ಪ್ರಪಂಚಕ್ಕೂ ಬ್ರಹ್ಮವಸ್ತುವಿಗೂ ಇರುವ ಸಾಮಾನಾಧಿಕರಣ್ಯದ ಅರ್ಥವು ಸಮಂಜಸವಾಗಿದೆ ಎಂದು ನಿರೂಪಿಸಿದ್ದಾರೆ. ಈ ಜಗತ್ತಿನ ಸ್ಥಿತಿ, ಉತ್ಪತ್ತಿ ಪ್ರವೃತ್ತಿ ಮತ್ತು ವಿನಾಶಗಳು ಭಗವದಧೀನವಾಗಿವೆ. ಈ ಪ್ರಪಂಚ ಅವನಿಗೆ ಶೇಷಭೂತವಾಗಿದೆ. ಆದುದರಿಂದ ಈ ಪ್ರಪಂಚಕ್ಕೂ ಅವನಿಗೂ ಅಭೇದವನ್ನು ಶ್ರುತಿಗಳು ಸಾಮಾನಾಧಿಕರಣ್ಯದ ಮೂಲಕ ತಿಳಿಸುತ್ತವೆ. 'ಐತದಾತ್ಮ್ಯಂ ಇದಂ ಸರ್ವಂ' ಎಂದರೆ 'ಏಷಃ ಆತ್ಮಾ ಯಸ್ಯತತ್ ಐತದಾತ್ಮ್ಯಂ' ಎಂದು ತಿಳಿಸಿರುವಂತೆ ಚೇತನಾಚೇತನಾತ್ಮಕವಾದ ಈ ಜಗತ್ತಿಗೆ ಬ್ರಹ್ಮವಸ್ತು ಆತ್ಮವಾಗಿದೆ ಎಂದು ಹೇಳಿ 'ತತ್ಸತ್ಯಂ' ಎಂದರೆ 'ಏತದಾತ್ಮಕತ್ವಮೇವ ಸತ್ಯಂ' ಎಂದು ಸಮರ್ಥಿಸಿ 'ಸರ್ವಸ್ಯಾಪಿ ಬ್ರಹ್ಮವ್ಯಾಪ್ತತ್ವಮುಸ್ತಿ' ಎಂದು ಸಾಧಿಸಿ,'ಸಃಆತ್ಮಾ',ಆ ಪರಮಾತ್ಮನು ಎಲ್ಲಕ್ಕೂನಿಯಂತೃವಾಗಿದ್ದಾನೆ ಎಂದು ಉಪದೇಶಿಸಿ, ಆ ಸರ್ವಾತ್ಮತ್ವವನ್ನು ಶ್ವೇತಕೇತುವಿಗೂ ಅನ್ವಯಿಸಿ 'ತತ್ ತ್ವಂ ಅಸಿ' 'ಆ ಪ್ರಸಿದ್ಧ ಜಗತ್ಕಾರಣವೇ ನಿನಗೂ ಅಂತರಾತ್ಮನಾಗಿದೆ' ಎಂದು ಉಪಸಂಹಾರ ಮಾಡಿದೆ ಶ್ರುತಿ. 'ಸರ್ವಂಖಲ್ವಿದಂಬ್ರಹ್ಮ', 'ಅಯಮಾತ್ಮಾ ಬ್ರಹ್ಮ' 'ಜ್ಯೋತೀಂಷಿ ವಿಷ್ಣುಃ' ಮೊದಲಾದ ವಾಕ್ಯಗಳೆಲ್ಲಾ ಹೀಗೆ ಸಾಮಾನಾಧಿಕರಣ್ಯದ ಮೂಲಕ ಶರೀರಾತ್ಮಭಾವವನ್ನು ಪುರಸ್ಕರಿಸಿ ಅಭೇಧವನ್ನು ತಿಳಿಸುತ್ತವೆ. ಬ್ರಹ್ಮವಸ್ತುವಿನ ಏಕತ್ವವನ್ನೂ ಅದು ಸರ್ವಶರೀರಿ ಎಂಬುದನ್ನೂ ಅದಕ್ಕೂ ಇತರ ಚೇತನಾಚೇತನಾವಸ್ತುಗಳಿಗೂ ಅಪೃಥಕ್ಸಿದ್ಧವಾದ 'ಶರೀರ–ಶರೀರಿ' ಸಂಬಂಧವಿರುವುದೆಂಬುದನ್ನೂ ಇಂಥ ಅಭೇದ ಶ್ರುತಿಗಳು ತಿಳಿಸುತ್ತವೆ.

**ಸರಾಜಕಮರಾಜಕಂ ಪುನರನೇಕರಾಜಂ ತಥಾ**
**ಯಥಾಭಿಮತರಾಜಕಂ ಜಗದಿದಂ ಜಜಲ್ಪುರ್ಜಡಾಃ !**
**ಜಗಾವನಶಚಿತ್ರತಾ ತರತಮತ್ವ ತರ್ಕಾಂಗಿಕಾ**
**ಶ್ರುತಿಶ್ಚಿದಚಿತೀ ತ್ವಯಾ ವರದ ನಿತ್ಯರಾಜನ್ವತೀ॥** ॥೨೫॥

(ವರದ) ವರಪ್ರದನಾದ ಶ್ರೀ ರಂಗನಾಥನೇ, (ಜಡಾಃ) ಮೂಢರು (ಇದಂ ಜಗತ್) ಈ ಲೋಕವನ್ನು (ಸರಾಜಕಂ) ಅನುಮಾನದಿಂದ ಸಿದ್ಧಿಸುವ

ಈಶ್ವರನೊಡನೆಕೂಡಿದುದೆಂತಲೂ (ಅರಾಜಕಂ) ಈಶ್ವರನಿಲ್ಲದುದೆಂದೂ(ಅನೇಕ ರಾಜಂ) ಹಲವಾರು ಈಶ್ವರಗಳನ್ನು ಹೊಂದಿರುವುದೆಂದೂ (ಯಥಾಭಿಮತ ರಾಜಕಂ) ತನುತನುಗೆ ಇಷ್ಟವಾದಂತೆ ಕಲ್ಪಿಸಲ್ಪಟ್ಟ ಈಶ್ವರನನ್ನು ಹೊಂದಿದುದೆಂದೂ (ಜಜಲ್ಪುಃ) ಬಾಯಿಗೆ ಬಂದಂತೆ ಹೇಳಿದರು. (ಅವಶ ಚಿತ್ರತಾ ತರತಮತ್ವತರ್ಕಾಂಗಿಕಾ) ಪರತಂತ್ರರಿಗೇ ಉಂಟಾಗುವ ವಿಚಿತ್ರವಾದ ಸ್ವಭಾವವೇನು ಹಾಗೂ ಮೇಲು ಕೀಳು ಎಂಬ ಭಾವವನ್ನೂ ಹೊಂದಿರುವ ಅನುಕೂಲತರ್ಕವನ್ನು ಹೊಂದಿದ (ಶ್ರುತಿಃ) ವೇದವು (ಚಿದಚಿತೀ) ಚೇತನಾ ಚೇತನಗಳನ್ನು (ತ್ವಯಾ ನಿತ್ಯರಾಜನ್ವತೀ) ಒಳ್ಳೆಯ ಈಶ್ವರನಾದ ನಿನ್ನನ್ನು ಯಾವಾಗಲೂ ಹೊಂದಿರುವುದಾಗಿ (ಜಗೌ) ಉದ್ಘೋಷಿಸಿತು.

ಚೇತನಾಚೇತನಗಳಿಗೆ ನಾರಾಯಣನೇ ಈಶ್ವರನೆಂದು ಇಲ್ಲಿ ಸ್ಥಾಪಿಸಿದ್ದಾರೆ. ಸರಾಜಕಂ' ಎಂಬುದು ನಯ್ಯಾಯಿಕರ ಮತವನ್ನು ಸೂಚಿಸುತ್ತದೆ. ಅವರು ಅನುಮಾನದಿಂದ ಈಶ್ವರನನ್ನು ಸಾಧಿಸುತ್ತಾರೆ. ಈಶ್ವರನು ಜಗತ್ತಿಗೆ ಕೇವಲ ನಿಮಿತ್ತ ಕಾರಣನೆನ್ನುವರು. 'ಅರಾಜಕಂ' ಎಂಬುದು ಪೂರ್ವಮೀಮಾಂಸಕರ ಅಭಿಪ್ರಾಯವನ್ನು ತಿಳಿಸುತ್ತದೆ. 'ಅನೇಕರಾಜಂ' ಎಂಬುದು ತ್ರಿಮೂರ್ತಿವಾದವನ್ನು ಸೂಚಿಸುತ್ತದೆ. ಹೀಗೆ ಇವರೆಲ್ಲರೂ ಈ ಸಿದ್ಧಾಂತವನ್ನು ವ್ಯಾಕುಲ ಗೊಳಿಸಿದರು. ಉತ್ತರಾರ್ಧದಲ್ಲಿ ಸಿದ್ಧಾಂತವನ್ನು ಹೇಳಿದೆ. 'ಏಕೋ ಹ ವೈ ನಾರಾಯಣ ಆಸೀತ್' ಮುಂತಾದ ಶ್ರುತಿಗಳು ಬ್ರಹ್ಮರುದ್ರಾದಿಗಳ ಪಾರಮ್ಯವನ್ನು ನಿರಾಕರಿಸಿ ಶ್ರೀಮನ್ನಾರಾಯಣನೇ ಪರ ತತ್ತ್ವವೆಂದು ಸಾರುತ್ತದೆ. ಕರ್ಮಪರವಶರಾದವರು 'ಅವಶರು'. ಅವರಲ್ಲಿ ಚಿತ್ರತ್ವವೆಂದರೆ 'ದೇವ ನರ ತಿರ್ಯಕ್ ಸ್ಥಾವರಾದಿಗಳು ಆಗಿ ಇರುವುದು 'ತರ ತಮತ್ವ'ವು ಜ್ಞಾನ ಶಕ್ತ್ಯಾದಿ ತಾರತಮ್ಯಗಳು. ಈ ಬಗೆಯ ತಾರತಮ್ಯಕ್ಕೆ ಮೂಲವಾಗಿ ಅವರವರ ಕರ್ಮ ಕಾರಣವೆಂಬುದನ್ನು ಅನುಮಾನದಿಂದ ಸಾಧಿಸಬಹುದು.

**ಬ್ರಹ್ಮಾದ್ಯಾಃ ಸೃಜ್ಯವರ್ಗೇ ಭ್ರುಕುಟಭಟಿತಯೋರ್ದ್ಘಾಟಿತಾ ನಾವತಾರ ಪ್ರಸ್ತಾವೇ ತೇನ ನ ತ್ವಂ ನ ಚ ತವ ಸದೃಶಾ ವಿಶ್ವಮೇಕಾತಪತ್ರಂ।**

**ಲಕ್ಷ್ಮೀನೇತ್ರಾ ತ್ವಯೇತಿ ಶ್ರುತಿಮುನಿವಚನೈಃ ತ್ವತ್ಪರೈರರ್ಪಯಾಮಃ**
**ಶ್ರೀರಂಗಾಂಬೋಧಿ ಚಂದ್ರೋದಯ ಜಲಮುಚಿತಂ**
**ವಾದಿಕೌತಸ್ಕುತೇಭ್ಯಃ॥ ॥೨೬॥**

(ಹೇ ಶ್ರೀ ರಂಗಾಂಭೋಧಿ ಚಂದ್ರೋದಯ) ಎಲೈ ಶ್ರೀ ರಂಗವೆನ್ನುವ ಸಮುದ್ರಕ್ಕೆ ಚಂದ್ರ ಉದಯಿಸುವಂತೆ ಸಮೃದ್ಧಿಯನ್ನುಂಟುಮಾಡುವ ಸ್ವಾಮಿಯೇ (ಬ್ರಹ್ಮಾದ್ಯಾಃ) ಬ್ರಹ್ಮದೇವ ಮೊದಲಾದ ದೇವತೆಗಳು (ಭ್ರುಕುಟಿ ಭಟಿತಯಾ) ನಿನ್ನ ಹುಬ್ಬಿನಚಲನೆಗೆ ಅನುಸಾರವಾಗಿ ಕೈಕಟ್ಟಿಕೊಂಡು ಸೇವಕರಂತೆ ನಿಲ್ಲುವುದರಿಂದ (ಸೃಜ್ಯ ವರ್ಗೇ) ಸೃಷ್ಟಿಸಲ್ಪಡುವ ವರ್ಗದಲ್ಲಿ (ಉದ್ಘಾಟಿತಾಃ) ಸ್ಪಷ್ಟವಾಗಿ ಹೇಳಲ್ಪಟ್ಟಿದ್ದಾರೆ. (ಅವತಾರ ಪ್ರಸ್ತಾವೇ) ರಾಮಕೃಷಾದಿ ಅವತಾರಗಳನ್ನು ಹೇಳುವೆಡೆಯಲ್ಲಿ (ನ) ಅವರು ಹೇಳಲ್ಪಟ್ಟಿಲ್ಲ. (ತೇನ) ಆದುದರಿಂದ (ತ್ವಂನ) ಅವರು ನೀನಲ್ಲ. (ತವಸದೃಶಾಃ ಚನ) ನಿನಗೆ ಅವರು ಸದೃಶರೂ ಅಲ್ಲ. (ಲಕ್ಷ್ಮೀನೇತ್ರಾ) ಶ್ರೀದೇವಿಯ ಪತಿಯಾದ (ತ್ವಯಾ) ನಿನ್ನಿಂದ (ವಿಶ್ವಂ) ಈ ಲೋಕವೆಲ್ಲಾ (ಏಕಾತಪತ್ರಂ) ಅದ್ವಿತೀಯನಾಥನನ್ನು ಉಳ್ಳದ್ದು (ಇತಿ) ಎಂದು (ತ್ವತ್ಪರೈಃ) ನಿನ್ನನ್ನೇ ವಿಷಯವನ್ನಾಗಿ ಉಳ್ಳ (ಶ್ರುತಿ ಮುನಿವಚನೈಃ) ವೇದಗಳ ಮತ್ತು ಮಹರ್ಷಿಗಳ ವಚನಗಳಿಂದ (ವಾದಿ ಕೌತಸ್ಕುತೇಭ್ಯಃ) ಕುತರ್ಕವಾದಿಗಳಿಗೆ (ಉಚಿತಂಜಲಂ) ಅವರಿಗೆ ತಕ್ಕ ತರ್ಪಣಜಲವನ್ನು (ಅರ್ಪಯಾಮಃ) ಅರ್ಪಿಸುತ್ತೇವೆ.

ಹಿಂದಿನ ಶ್ಲೋಕದಲ್ಲಿ ಹೇಳಿದ ನಾರಾಯಣ ಪರತ್ವವನ್ನು ಈ ಶ್ಲೋಕವು ಸಮರ್ಥಿಸುತ್ತದೆ. ಅವರು ಸೃಜ್ಯರು.ಅವರು ನಿನ್ನ ಅವತಾರಗಳಲ್ಲ. ಆದುದರಿಂದ ಬ್ರಹ್ಮ ರುದ್ರಾದಿಗಳು ಪರದೈವವಲ್ಲ. 'ಆಭೂತಸಂಪ್ಲವೇ ಪ್ರಾಪ್ತೇ ಪ್ರಲೀನೇ ಪ್ರಕೃತೌ ಮಹಾನ್। ಏಕಸ್ತಿಷ್ಠತಿ ವಿಶ್ವಾತ್ಮಾ ಸ ತು ನಾರಾಯಣಃ ಪ್ರಭುಃ ॥' ನಿತ್ಯಂ ಹಿ ನಾಸ್ತಿ ಜಗತಿ ಭೂತಂ ಸ್ಥಾವರ ಜಂಗಮಂ। ಋತೇ ತಮೇಕಂ ಪುರುಷಂ ವಾಸುದೇವಂ ಸನಾತನಂ॥', 'ಸಬ್ರಹ್ಮಕಾಸ್ಸರುದ್ರಾಶ್ಚ ಸೇಂದ್ರಾದೇವಾ ಮಹರ್ಷಯಃ । ಅರ್ಚಯಂತಿ ಸುರಶ್ರೇಷ್ಠಂ ದೇವಂ ನಾರಾ

ಯಣಂ ಹರಿಂ॥ ಎಂದೂ 'ನಾರಾಯಣಪರಂ ಬ್ರಹ್ಮ ತತ್ವಂ ನಾರಾಯಣಃ ಪರಃ। ನಾರಾಯಣ ಪರೋ ಧ್ಯಾತಾ ಧ್ಯಾನಂ ನಾರಾಯಣಃಪರಃ , ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ', 'ಅಥಪುರುಷೋ ಹ ವೈ ನಾರಾಯಣೋಽಕಾಮಯತ ಪ್ರಜಾಸ್ಸೃಜೇಯೇತಿ........ನಾರಾಯಣಾದ್ಬ್ರಹ್ಮಾಜಾಯತೇ, ನಾರಾಯಣಾದ್ರುದ್ರೋಜಾಯತೇ, ನಾರಾಯಣಾತ್ ಪ್ರಜಾಪತಯಃ ಪ್ರಜಾಯಂತೇ, ನಾರಾಯಣಾದೇವ ಸಮುತ್ಪದ್ಯಂತೇ ನಾರಾಯಣೇ ಪ್ರವರ್ತಂತೇ ನಾರಾಯಣೇ ಪ್ರಲೀಯಂತೇ' ಎಂದೂ 'ಓರಾಯಿರಮಾಯ್ ಉಲಹೇ ಏಳಕ್ಕುಂ ಪೇರಾಯಿರಂ ಕೊಂಡು ಓರ್ ಪೀಡುಡ್ಶೈಯರ್ಗ ಕಾರಾಯಿನ ಕಾಳನನ್ನೇನಿಯಿನನ್ ನಾರಾಯಣನ್ ನಂಗಳ್ ಪಿರಾನವನೇ,' 'ಒನ್ರುಂ ತೇವುಂ ಉಲಹುಂ ಉಯಿರುಂ ಮತ್ತುಂ ಯಾದುಮಿಲ್ಲಾವನ್ರು', 'ಪಿರೈಯೇರುಶಡೈಯಾನುಂ ನಾನ್ಮುಹನುಂ ಇಂದಿರನುಂ ಇರೈಯಾದಲ್ ಅರಿಂದು ಏತ್ತ ವೀತ್ತಿರುತ್ತಲ್ ಇದು ವಿಯಪ್ಪೇ' ಎಂದೂ ಬಹುಮುಖವಾಗಿರುವ ಪ್ರಮಾಣಗಳು ಶ್ರೀಮನ್ನಾರಾಯಣನ ಪರತ್ವವನ್ನು ಸ್ಥಾಪಿಸುತ್ತವೆ.

**ದೋಷೋಪಧಾವಧಿ–ಸಮಾತಿಶಯಾನಸಂಖ್ಯಾ**
**ನಿರ್ಲೇಪಮಂಗಲಗುಣೌಘದುಘಾಃ ಷಡೇತಾಃ ।**
**ಜ್ಞಾನೈಶ್ವರೀಶಕನವೀರ್ಯ ಬಲಾರ್ಚಿಷಃ ತ್ವಾಂ**
**ರಂಗೇಶ ಭಾಸ ಇವರತ್ನಮನರ್ಘಯಂತಿ॥** ॥೨೭॥

(ರಂಗೇಶ) ಶ್ರೀ ರಂಗನಾಥನೇ, (ದೋಷ) ದೋಷವೇನು (ಉಪಧಾ) ಉಪಾಧಿಯೇನು (ಅವಧಿ) ಎಲ್ಲೆ ಏನು (ಸಮ) ಸದೃಶವಸ್ತುವೇನು (ಅತಿಶಯಾನ) ಮೇಲ್ಪಟ್ಟ ವಸ್ತುವೇನು (ಸಂಖ್ಯಾ) ಎಣಿಕೆಯೇನು, (ನಿರ್ಲೇಪ) ಇವುಗಳ ಸಂಬಂಧವಿಲ್ಲದ (ಮಂಗಲಗುಣ) ಕಲ್ಯಾಣಗುಣಗಳ (ಓಘ) ಸಮೂಹವನ್ನು (ದುಘಾಃ) ಕರೆಯುವ (ಏತಾಃ) ಈ (ಜ್ಞಾನೈಶ್ವರೀ ಶಕನವೀರ್ಯ ಬಲಾರ್ಚಿಷಃ) ಜ್ಞಾನ, ಐಶ್ವರ್ಯ, ಶಕ್ತಿ,

ವೀರ್ಯ, ಬಲ, ತೇಜಸ್ಸು ಎನ್ನುವ (ಷಟ್) ಆರು ಗುಣಗಳು (ತ್ವಾಂ) ನಿನ್ನನ್ನು (ರತ್ನಂ ಭಾಸಃ ಇವ ಅನರ್ಘಯಂತಿ) ರತ್ನವನ್ನು ಪ್ರಕಾಶವು ಹೇಗೋ ಹಾಗೆ ಪ್ರಕಾಶಪಡಿಸುತ್ತವೆ.

ಶ್ರೀ ರಂಗನಾಥನೇ ಪರನೈಪವೆಂದು ಹೇಳಿದ ಮೇಲೆ ಶ್ರೀ ರಂಗನಾಥನ ಕಲ್ಯಾಣ ಗುಣಗಳನ್ನು ಅನುಭವಿಸಿದ್ದಾರೆ. ಇಲ್ಲಿ ಷಡ್ಗುಣಗಳನ್ನು ಒಟ್ಟಿಗೆ ಅನುಭವಿಸಿದ್ದಾರೆ. ಜ್ಞಾನ. ಶಕ್ತಿ, ಬಲ, ಐಶ್ವರ್ಯ, ವೀರ್ಯ ಮತ್ತು ತೇಜಸ್ಸು ಎಂಬುವು ಷಡ್ಗುಣಗಳು. ಈ ಕಲ್ಯಾಣಗುಣಗಳು ದೋಷದೂರ ವಾಗಿವೆ. ಪ್ರದೇಶ ಭೇದದಿಂದಾಗಲೀ ಕಾಲಭೇದದಿಂದಾಗಲೀ ಅವುಗಳು ವ್ಯತ್ಯಾಸ ಹೊಂದದೆ ಏಕರೂಪವಾಗಿ ನಿರವಧಿಕವಾಗಿರುತ್ತವೆ. 'ತವಾನಂತ ಗುಣ ಸ್ಯಾಪಿ ಷಡೇವ ಪ್ರಥಮೇ ಗುಣಾಃ । ಯೈಸ್ತ್ವಯೈವ ಜಗತ್ಕುಕ್ಷಾ ಅನ್ಯೇಪ್ಯಂತರ್ನಿವೇಶಿತಾಃ ॥ ಎಂದು ಹೇಳಿದಂತೆ ಭಗವಂತನ ಅನಂತ ಕಲ್ಯಾಣ ಗುಣ ಪ್ರವಾಹಕ್ಕೆ ಈ ಷಡ್ಗುಣಗಳು ಮೂಲವಾದವು. ಇವುಗಳ ವಿಸ್ತಾರ ಇತರ ಗುಣಗಳು. 'ಯಥಾರತ್ನಾನಿ ಜಲಧೇರಸಂಖ್ಯೇಯಾನಿ ಪುತ್ರಕ । ತಥಾ ಗುಣಾ ಹ್ಯನಂತಸ್ಯಾಪ್ಯಸಂಖ್ಯೇಯಾ ಮಹಾತ್ಮನಃ ॥ ಎಂದು ಹೇಳಿ ಭಗವಂತನ ಗುಣಗಳು ಅಸಂಖ್ಯೇಯವೆಂದು ತಿಳಿಸಿದೆ. ಒಂದೊಂದು ಗುಣ ದಲ್ಲಿಯೂ ಅವಾಂತರ ಗುಣಗಳು ಅನೇಕವಿವೆ. 'ಮಂಗಲಗುಣೌಘದುಘಾಃ' ಎಂದು ಇಲ್ಲಿ ಹೇಳಿರುವುದು 'ಅಸಂಖ್ಯೇಯ ಕಲ್ಯಾಣಗುಣಗಣೌಘ ಮಹಾ ರ್ಣವ' ಎಂದು ಭಗವದ್ರಾಮಾನುಜರು ಸ್ತುತಿಸಿರುವುದಕ್ಕೆ ಸಂವಾದಿಯಾಗಿದೆ.

ಯುಗಪದನಿಶಮಕ್ಷೈಃ ಸ್ವೈಃ ಸ್ವತೋ ವಾಕ್ಷಕಾರ್ಯೇ
ನಿಯಮಮನಿಯಮಂ ವಾ ಪ್ರಾಪ್ಯ ರಂಗಾಧಿರಾಜ ।
ಕರತಲವದಶೇಷಂ ಪಶ್ಯಸಿ ಸ್ವಪ್ರಕಾಶಂ
ತದವರಣಮಮೋಘಂ ಜ್ಞಾನಮಾಮ್ನಾಸಿಷುಸ್ತೇ ॥ ॥೨೮॥

(ಹೇ ರಂಗಾಧಿರಾಜ) ಶ್ರೀರಂಗನಾಥನೇ, ನೀನು (ಸ್ವೈಃ ಅಕ್ಷೈಃ) ನಿನ್ನ ಇಂದ್ರಿಯಗಳಿಂದಾಗಲೀ, (ಸ್ವತಃವಾ) ಇಂದ್ರಿಯಗಳ ಅಪೇಕ್ಷೆ ಇಲ್ಲದೇ

ಸ್ವಯಂ ಆಗ ಅ[illegible]ಃ (ಅಕ್ಷಕಾರ್ಯೈಃ) ಇಂದ್ರಿಯಗಳ ವ್ಯಾಪಾರಗಳಾದ ನೋಡುವುದು ಮೊದಲಾದ ಕೆಲಸಗಳಲ್ಲಿ (ನಿಯಮಂ) ಒಂದು ವ್ಯವಸ್ಥೆ ಯಿಂದಲೋ(ಅನಿಯಮಂ ವಾ) ಹಾಗೆ ವ್ಯವಸ್ಥೆ ಇಲ್ಲದೆ[illegible]ೋ (ಪ್ರಾಪ್ಯ)ಹೊಂದಿ (ಅನಿತ್ಯೈಃ) ಯಾವಾಗಲೂ (ಅಶೇಷಂ) ಉಭಯವಿಭೂತಿಯಲ್ಲಿರುವ ಸಮಸ್ತ ವನ್ನೂ (ಯುಗಪತ್) ಏಕಕಾಲದಲ್ಲಿ (ಕರತಲವತ್) ಅಂಗೈಯನ್ನು ನೋಡುವಂತೆ (ಪಶ್ಯಸಿ) ಸಾಕ್ಷಾತ್ಕರಿಸುತ್ತೀಯೆ. (ಸ್ವಪ್ರಕಾಶಂ) ಸ್ವಯಂ ಪ್ರಕಾಶಿಸುವುದೂ (ಅ ವ ರ ಣಂ) ಆವರಣವಿಲ್ಲದುದೂ (ಅ ಮೋ ಘಂ) ಯಥಾರ್ಥವೂ ಆದ (ತತ್) ಆ ಸಾಕ್ಷಾತ್ಕಾರವನ್ನು (ತೇ) ನಿನ್ನ (ಜ್ಞಾನಂ) ಜ್ಞಾನವೆಂದು (ಆಮ್ನಾಸಿಷುಃ) ಉಪನಿಷತ್ತುಗಳು ನಿರೂಪಿಸಿದವು.

ಜ್ಞಾನಗುಣದ ಸ್ವರೂಪವನ್ನು ಈ ಶ್ಲೋಕದಲ್ಲಿ ವಿವರಿಸಿದ್ದಾರೆ. ಇಂದ್ರಿಯಾನಪೇಕ್ಷವಾಗಿಯೋ ಇಂದ್ರಿಯಾಪೇಕ್ಷವಾಗಿಯೋ ಸ್ವತಃ ಅಥವಾ ಧರ್ಮಭೂತಜ್ಞಾನದ ಮೂಲಕವಾಗಿಯೂ ಆಗಲಿ ಒಂದೇ ಇಂದ್ರಿಯ ಇತರ ಇಂದ್ರಿಯಗಳನ್ನು ಮಾಡುವಂತೆ ಆಗಲಿ, ಆಯಾ ಇಂದ್ರಿಯಗಳು ಆಯಾ ವ್ಯಾಪಾರಗಳನ್ನು ಮಾಡುವಂತೆ ಮಾಡಿ ಆಗಲಿ ಭಗವಂತನು ಸ್ವತಃ ಏಕ ಕಾಲದಲ್ಲಿ ಎಲ್ಲವನ್ನೂ ತಿಳಿಯುತ್ತಾನೆ. 'ಯೋ ವೇತ್ತಿ ಯುಗಪತ್ ಸರ್ವಂ ಪ್ರತ್ಯಕ್ಷೇಣ ಸದಾ ಸ್ವತಃ ।' ಎಂದು ಇದನ್ನು ಹೇಳಿದೆ. 'ಯಃ ಸರ್ವಜ್ಞಃ ಸರ್ವವಿತ್' 'ಸರ್ವೇಶ್ವರಃ ಸರ್ವದೃಕ್' ಎಂದೂ ಈ ಗು ಣ ವ ನ್ನು ಕೊಂಡಾಡಿದ್ದಾರೆ. 'ಅಪಾಣಿಪಾದೋ ಜವನೋ ಗೃಹೀತಾ ಪಶ್ಯತ್ಯಚಕ್ಷುಃ ಸಶೃಣೋತ್ಯಕರ್ಣಃ' 'ಸವೇತ್ತಿವೇದ್ಯಂ ನ ಚ ತಸ್ಯಾಸ್ತಿವೇತ್ತಾ ತಮಾ ಹುರಗ್ರ್ಯಂಪುರುಷಂ ಮಹಾಂತಂ ॥' ಎಂದು ಶ್ವೇತಾಶ್ವತರೋಪನಿಷತ್ತಿನಲ್ಲಿ ಹೇಳಿರುವುದನ್ನು ಕಾಣಬಹುದು.

ನಯನಶ್ರವಣೋ ದೃಶಾ ಶೃಣೋಷಿ ಹ್ಯಥ ತೇ
ರಂಗಪತೇ ಮಹೇಶಿತುಃ ।
ಕರಣೈರಪಿ ಕಾಮಕಾರಿಣಸ್ತೇ ಘಟತೇ
ಸರ್ವಪಥೀನಮೀಕ್ಷಣಮ್ ॥ ॥೨೯॥

(ಹೇ ರಂಗಪತೇ) ಎಲೈ ರಂಗನಾಥನೇ, (ನಯನ ಶ್ರವಣಃ) ಕಣ್ಣು ಗಳೆಂಬ ಕಿವಿಗಳನ್ನುಳ್ಳವನಾಗಿ (ದೃಶಾ) ಕಣ್ಣಿನಿಂದ (ಶೃಣೋಷಿ) ಕೇಳು ತ್ತೀಯೆ. (ಅಥ) ಮತ್ತೂ (ಕರಣೈಃ ಅಪಿ) ಇತರ ಇಂದ್ರಿಯಗಳಿಂದ (ಕಾಮ ಕಾರಿಣಃ) ಇಷ್ಟಕ್ಕನುಸಾರವಾಗಿ ಪ್ರವರ್ತಿಸುವ (ಮಹೇಶಿತುಃ) ವಿಲಕ್ಷಣ ನಾದ ಈಶ್ವರನಾದ (ತೇ) ನಿನಗೆ (ಸರ್ವಪಥೀನಂ) ಸರ್ವತೋಮುಖವಾದ (ಈಕ್ಷಣಂ) ಸಾಕ್ಷಾತ್ಕಾರವಾದುದು (ಘಟತೇ) ಉಂಟಾಗುತ್ತದೆ.

'ಅನಿಯಮಂ' ಎಂದು ಹಿಂದಿನ ಶ್ಲೋಕದಲ್ಲಿ ಹೇಳಿದುದನ್ನು ಇಲ್ಲಿ ವಿವರಿಸಿದೆ. ಕಣ್ಣಿನಿಂದ ಕೇಳಬಲ್ಲನು ಅವನು. ಒಂದೊಂದು ಇಂದ್ರಿಯವೂ ಆಯಾ ವಿಷಯವನ್ನೇ ಗ್ರಹಿಸಬೇಕೆಂಬ ನಿಯಮ ಅವನಿಗಿಲ್ಲ. 'ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾಚ' 'ಪಶ್ಯತ್ಯಚಕ್ಷುಃ ಸಶೃಣೋತ್ಯಕರ್ಣಃ' ಮೊದಲಾದ ಶ್ರುತಿವಾಕ್ಯಗಳು ಅವನ ಸ್ವರೂಪವನ್ನು ತಿಳಿಸುತ್ತವೆ.

ಸಾರ್ವಜ್ಞೇನಾಜ್ಞಮೂಲಂ ಜಗದಭಿದಧತೋ ವಾರಿತಾಃ
ಸಾಕ್ಷಿಮಾತ್ರಾತ್
ಸಾಂಖ್ಯೋಕ್ತಾತ್ಕಾರಣಂ ತ್ವಾಂ ಪರಯತಿ ಭಗವನ್ ಐಶ್ವರೀ
ರಂಗಶಾಯಿನ್ ।
ಅಪ್ರೇರ್ಯೋಽನ್ಯೈಃ ಸ್ವತಂತ್ರೋಽಪ್ರತಿಹತಿ ಸದಸತ್ಕರ್ಮ
ಚೈತ್ರ್ಯಾ ವಿಚಿತ್ರಂ
ಯತ್ರೇಚ್ಛಾಲೇಶತಸ್ತ್ವಂ ಯುಗಪದಗಣಯನ್ವಿಶ್ವಮಾವಿ
ಶ್ಚಕರ್ಥ॥ ॥೩೦॥

(ಹೇ ಭಗವನ್ ರಂಗಶಾಯಿನ್) ಎಲೈ ಭಗವಂತನಾದ ರಂಗನಾಥನೇ, (ಜಗತ್) ಈ ಲೋಕ (ಅಜ್ಞಮೂಲಂ) ಅಚೇತನದಿಂದ ಪಡೆಯಲ್ಪಟ್ಟುದು

ಎಂದು (ಅಭಿದಧತಃ) ಹೇಳುವವರು (ಸಾರ್ವಜ್ಞೇನ) ನಿನ್ನ ಸರ್ವಜ್ಞತ್ವ ದಿಂದ (ವಾರಿತಾಃ) ನಿರಸನ ಮಾಡಲ್ಪಟ್ಟಿದ್ದಾರೆ. (ಯತ್ರಸತಿ) ಯಾವ ಐಶ್ವರ್ಯ ಗುಣವಿರುವಲ್ಲಿ (ಅನ್ಯೈಃ) ಇತರರಿಂದ (ಅಪ್ರೇರ್ಯಃ) ಪ್ರೇರಿಸಲ್ಪ ಡದವನಾಗಿ (ಸ್ವತಂತ್ರಃ) ಸ್ವಾಧೀನನಾದ (ತ್ವಂ) ನೀನು (ಸತ್ ಅಸತ್ ಕರ್ಮ ಚೈತ್ರ್ಯಾತ್) ಪುಣ್ಯ ಪಾಪರೂಪ ಕರ್ಮಗಳ ವಿಚಿತ್ರವಾದ ಬಗೆಗಳಿಂದ (ವಿಚಿತ್ರಂ) ಬಗೆ ಬಗೆಯಾದ (ವಿಶ್ವಂ) ಎಲ್ಲವನ್ನೂ (ಇಚ್ಛಾಲೇಶತಃ) ಸಂಕಲ್ಪ ಲೇಶದಿಂದ (ಅಗಣಯನ್) ಯಾರನ್ನೂ ಗಣಿಸದವನಾಗಿ (ಯುಗಪತ್) ಏಕಕಾಲದಲ್ಲಿ (ಅಪ್ರತಿಹತಿ) ತಡೆಯಿಲ್ಲದೆ (ಆವಿಷ್ಕರ್ಥ) ಪಡೆದೆಯೋ (ಸಾ ಐಶ್ವರೀ) ಅಂಥ ಐಶ್ವರ್ಯವೆಂಬ ಗುಣವಾದುದು (ಕಾರಣಂ) ಜಗತ್ತಿಗೆ ಉಪಾದಾನಕಾರಣವಾಗಿರುವ (ತ್ವಾಂ) ನಿನ್ನನ್ನು (ಸಾಂಖ್ಯೋಕ್ತಾತ್) (ಸಾಂಖ್ಯರು) ಹೇಳಿದಂಥ (ಸಾಕ್ಷಿ ಮಾತ್ರಾತ್) ಕೇವಲ ಸಾಕ್ಷಿಯಾದ ಪುರುಷ ನಿಗಿಂತ (ಪರಯತಿ) ಬೇರ್ಪಡಿಸುತ್ತದೆ.

ಈ ಶ್ಲೋಕದಲ್ಲಿ ಐಶ್ವರ್ಯಗುಣದ ಸ್ವರೂಪ ನಿರೂಪಣೆ ಇದೆ. ಅಚೇತನ ವಾದ ಪ್ರಕೃತಿಯೇ ಜಗತ್ತಿಗೆ ಕಾರಣವೆಂದು ಹೇಳುವ ಸಾಂಖ್ಯರು ಇಲ್ಲಿ ನಿರ ಸ್ತರಾಗಿದ್ದಾನೆ. ಐಶ್ವರ್ಯಗುಣದಿಂದಲೂ ಸಾಂಖ್ಯರು ನಿರಸ್ತರಾದರು. ನಿರಂಕುಶ ಸ್ವತಂತ್ರನಾಗಿ ಭಗವಂತನು ವಿಚಿತ್ರವಾದ ಈ ಜಗತ್ತನ್ನು ಸೃಜಿಸ ಬಲ್ಲವನಾಗಿದ್ದಾನೆ. ಯಾವ ಅಡೆ ತಡೆಯೂ ಅವನ ವ್ಯಾಪಾರಕ್ಕೆ ಉಂಟಾ ಗದು. ಸಾಂಖ್ಯರು ಹೇಳಿದ ವಾದವು ಅಯುಕ್ತವಾದುದೆಂಬುದನ್ನು ಭಗ ವಂತನ ಈ ಐಶ್ವರ್ಯಗುಣ ಪ್ರಕಾಶಪಡಿಸುತ್ತದೆ. ಐಶ್ವರ್ಯವೆಂಬುದಕ್ಕೆ ವಿವರಣೆಯನ್ನು 'ಸಮಸ್ತ ಪದಾರ್ಥ ನಿಯಮನ ಸಾಮರ್ಥ್ಯಂ' ಎಂದು ಕೊಡಲಾಗಿದೆ. 'ಏಷ ಸರ್ವೇಶ್ವರಃ', 'ಸರ್ವೇಶ್ವರೇಶ್ವರಃ ಕೃಷ್ಣಃ' ಎಂಬುವು ಅವನ ಇಚ್ಛೆ ಅವ್ಯಾಹತವಾದುದೆಂದೂ ಅವನು ಸರ್ವ ನಿಯಂತೃವಾಗಿದ್ದಾ ನೆಂದೂ ತಿಳಿಸುತ್ತವೆ. ಶ್ರೀ ವಿಷ್ಣು ಸಹಸ್ರನಾಮದಲ್ಲಿ 'ಅಜಸ್ಸರ್ವೇಶ್ವರಃ' ಎಂದು ಪಠಿತವಾಗಿರುವುದನ್ನು ಕಾಣಬಹುದು.

**ಕಾರ್ಯೇಽನಂತೇ ಸ್ವತನುಮುಖತಸ್ತ್ವಾಂ ಉಪಾದಾನಮಾಹುಃ**
**ಸಾ ತೇ ಶಕ್ತಿಸ್ಸುಕರಮಿತರಚ್ಚೇತಿ ವೇಲಾಂ ವಿಲಂಘ್ಯ ।**
**ಇಚ್ಛಾ ಯಾವದ್ವಿಹರತಿ ಸದಾ ರಂಗರಾಜಾನಪೇಕ್ಷಾ**
**ಸ್ವೈವೈಶಾನಾದತಿಶಯಕರೀ ಸೋರ್ಣನಾಭೌ ವಿಭಾವ್ಯಾ ॥ ॥೩೧॥**

(ರಂಗರಾಜ) ಎಲೈ ರಂಗನಾಥನೇ, (ಅನಪೇಕ್ಷಾ) ಸ್ವತಃ ಸಿದ್ಧವಾದ (ತೇ ಇಚ್ಛಾ) ನಿನ್ನ ಸಂಕಲ್ಪವಾದುದು (ಸುಕರಂ ಇತರತ್ ಇತಿ ವೇಲಾಂ ವಿಲಂಘ್ಯ) ಇದು ಸುಲಭ, ಇದು ಮಾಡಲಾಗದುದು ಎಂಬ ಎಲ್ಲೆಯನ್ನು ಮೀರಿ (ಸದಾ) ಯಾವಾಗಲೂ (ಯಾವತ್) ಎಲ್ಲೆಲ್ಲಿಯೂ (ವಿಹರತಿ) ವಿಹರಿಸುತ್ತದೆ. (ಸಾ) ಅಂಥ ಸಂಕಲ್ಪವೇ (ತೇ) ನಿನ್ನ (ಶಕ್ತಿಃ) ಶಕ್ತಿ ಎಂಬ ಗುಣವಾಗುತ್ತದೆ. ಇಂಥ ಶಕ್ತಿ ನಿನಗೆ ಇರುವುದರಿಂದಲೇ (ಅನಂತೇ ಕಾರ್ಯೇ) ಎಲ್ಲೆ ಇಲ್ಲದ ಕಾರ್ಯ ವರ್ಗಗಳಲ್ಲಿ (ಸ್ವತನುಮುಖತಃ) ನಿನ್ನ ಶರೀರವಾಗುವ ಚೇತನಾಚೇತನಗಳ ಮೂಲಕ (ತ್ವಾಂ) ನಿನ್ನನ್ನು (ಉಪಾದಾನಂ) ಉಪಾದಾನ ಕಾರಣವೆಂದು (ಆಹುಃ) ವೈದಿಕರು ಹೇಳಿದರು. (ಸಾ ಏವ) ಆ ಶಕ್ತಿಯೇ (ಐಶಾನಾತ್) ಪಾಶುಪತಮತ ಪ್ರಕ್ರಿಯೆಗಿಂತಲೂ (ಅತಿಶಯಕರೀ) ಬೇರೆಯಾಗಿ ಹೆಚ್ಚಳವನ್ನು ಹೊಂದಿದೆ. (ಸಾ) ಆಶಕ್ತಿಯು (ಊರ್ಣನಾಭೌ) ಜೇಡರ ಹುಳುವಿನಲ್ಲಿ (ವಿಭಾವ್ಯಾ) ಕಾಣತಕ್ಕದ್ದಾಗಿದೆ.

ಶಕ್ತಿಯ ಸ್ವರೂಪ ಇಲ್ಲಿ ಹೇಳಿದೆ. ಈಶ್ವರನು ಉಪಾದಾನಕಾರಣವಾಗಿರುವುದೇ ಅವನ ಶಕ್ತಿ ಎಂಬುವುದಾಗಿದೆ. ಭಗವಂತನು ಲೋಕಕ್ಕೆ ಉಪಾದಾನಕಾರಣನೂ ನಿಮಿತ್ತಕಾರಣನೂ ತಾನೇ ಆಗುತ್ತಾನೆ. 'ಪ್ರಕೃತಿಶ್ಚ ಪ್ರತಿಜ್ಞಾದೃಷ್ಟಾಂತಾನುಪರೋಧಾತ್' ಎಂದು ಸೂತ್ರಕಾರರು ಇದನ್ನು ಹೇಳಿದ್ದಾರೆ. ಉಪಾದಾನಕಾರಣವಾದರೆ ವಿಕಾರ ಉಂಟಾಗಬಹುದಲ್ಲಾ ಎಂಬ ಆಕ್ಷೇಪಕ್ಕೆ ಉತ್ತರವೇನೆಂದರೆ ಭಗವಂತನು ತನ್ನ ಶರೀರವಾದ ಚಿದಚಿತ್ತುಗಳ ವಿಕಾರದಿಂದ ಉಪಾದಾನವಾಗುತ್ತಾನೆ. ಸ್ವಯಂ ಶುದ್ಧನೂ ವಿಕಾರರಹಿತನೂ ಆಗಿರುವವನು ಅವನು. ಸ್ವಶರೀರ ಭೂತ ವಿಶೇಷಣದ್ವಾರಾ ಇವನು

ಉಪಾದಾನಕಾರಣನಾಗುತ್ತಾನೆ. ಇವನ ಸ್ವರೂಪಕ್ಕೆ ಯಾವ ವಿಕಾರವೂ ಉಂಟಾಗುವುದಿಲ್ಲ. ವಿಶಿಷ್ಟರೂಪದಲ್ಲಿ ವಿಕಾರ ಉಂಟಾದರೂ ವಿಶೇಷ್ಯ ರೂಪದಲ್ಲಿ ಯಾವ ವಿಕಾರವೂ ಉಂಟಾಗುವುದಿಲ್ಲ. ಸೂಕ್ಷ್ಮ ಚಿದಚಿದ್ವಿಶಿಷ್ಟನಾದ ಪ್ರಭು ಕಾರ್ಯಾವಸ್ಥೆಯಲ್ಲಿ ಸ್ಥೂಲಚಿದಚಿದ್ವಿಶಿಷ್ಟನಾಗುತ್ತಾನೆ. ತನ್ನನ್ನುಳಿದು ಮತ್ತೆಲ್ಲವನ್ನೂ ನಿರ್ವಹಿಸುವ ಸಾಮರ್ಥ್ಯ ಇದು. 'ಜಗತ್ಪ್ರಕೃತಿ ಭಾವೋ ಮೇ ಯಸ್ಯಾ ಶಕ್ತಿರಿತೀರ್ಯತೇ' ಎಂದು ಇದನ್ನು ನಿರೂಪಿಸಿದ್ದಾರೆ. ಅಘಟನಘಟನಾಸಾಮರ್ಥ್ಯವನ್ನು ಶಕ್ತಿ ಎಂದು ಹೇಳಬಹುದು. ಇದು ಪಾಶುಪತ ಮತದಲ್ಲಿ ಹೇಳುವ ಶಕ್ತಿಗಿಂತ ಬೇರೆಯಾದುದಾಗಿದೆ.

ಸ್ವಮಹಿಮಸ್ಥಿತೀರಿಶ ಭೃಶಕ್ರಿಯೋಽಪ್ಯಕಲಿತಶ್ರಮ ಏವ
ಬಿಭರ್ಷಿ ಯತ್ ।
ವಪುರಿವ ಸ್ವಮಶೇಷಮಿದಂ ಬಲಂ ತವ ಪರಾಶ್ರಿತಕಾರಣ-
ವಾರಣಂ ॥ ॥೩೨॥

(ಈಶ) ಭಗವಂತನೇ, (ಸ್ವಮಹಿಮಸ್ಥಿತಿಃ) (ತ್ವಂ) ತನ್ನ ಮಾಹಾತ್ಮ್ಯೆದಲ್ಲಿಯೇ ಸ್ಥಿರವಾಗಿ ನಿಂತಿರುವ ನೀನು (ಭೃಶಕ್ರಿಯಃ ಅಪಿ) ಅಪರಿಮಿತವಾದ ಚೇಷ್ಟಿತಗಳನ್ನುಳ್ಳವನಾಗಿದ್ದರೂ (ಅಕಲಿತ ಶ್ರಮ ಏವ) ಆಯಾಸವಿನಿತೂ ಹೊಂದದವನಾಗಿಯೇ (ಅಶೇಷಂ) ಸಕಲ ಲೋಕವನ್ನೂ (ಸ್ವಂವಪುಃ ಇವ) ನಿನ್ನ ಶರೀರವನ್ನು ಹೇಗೋ ಹಾಗೆ (ಬಿಭರ್ಷಿ) ವಹಿಸುತ್ತೀಯೆ (ಇತಿಯತ್) ಹೀಗೆಂಬ ಯಾವುದೊಂದಿದೆಯೋ ಅದು (ತವ) ನಿನ್ನ (ಬಲಂ) ಬಲ ಎನ್ನುವ ಗುಣ. (ಇದಂ) ಈ ಗುಣವಾದುದು (ಪರಾಶ್ರಿತ ಕಾರಣ ವಾರಣಂ) ಅನ್ಯಾಧಿಷ್ಠಿತವಾಗಿ ಕಾರಣವಾಗಿರುವುದನ್ನು ವ್ಯಾವರ್ತಿಗೊಳಿಸುತ್ತದೆ.

ಬಲ ಎಂಬುವ ಗುಣದ ಸ್ವರೂಪ ಇಲ್ಲಿದೆ. ಭಗವಂತನನ್ನು 'ಸ್ವೇ ಮಹಿಮ್ನಿ ಪ್ರತಿಷ್ಠಿತಃ' ಎಂದು ಉಪನಿಷತ್ತು ಹೇಳುತ್ತದೆ. ಅವನು ಎಲ್ಲರಿಗೂ ಆಧಾರ

ವಾಗಿದ್ದರೂ ತಾನು ಅನಾಧಾರನಾಗಿದ್ದಾನೆ. ಸಕಲ ಚರಾಚರವನ್ನೂ ಅವನು ಶ್ರಮವಿನಿತಿಲ್ಲದೆಯೇ ಧರಿಸಿದ್ದಾನೆ. ಇತರ ಕಾರಣಗಳು ಬೇರೆಯವರನ್ನು ಆಶ್ರಯಿಸಿಕೊಂಡು ಕಾರಣವಾಗುತ್ತವೆ. ಆದರೆ ಭಗವಂತನ ನಿಲುವು ಅಂಥದಲ್ಲ. ಯಾವ ಬೇರೆ ಆಧಾರವೂ ಇಲ್ಲದೆಯೇ ಅವನು ಎಲ್ಲಕ್ಕೂ ಕಾರಣವಾಗುತ್ತಾನೆ. 'ಶ್ರಮಪ್ರಸಂಗರಹಿತಂ ಸರ್ವಧಾರಣ ಸಾಮರ್ಥ್ಯಂ' ಎಂದು ಇದರ ಲಕ್ಷಣವನ್ನು ಹೇಳಿದ್ದಾರೆ. ತನ್ನ ಸಂಕಲ್ಪ ಮಾತ್ರದಿಂದಲೇ ಸರ್ವ ಪದಾರ್ಥಗಳನ್ನೂ ಧಾರಣಮಾಡುವ ಸಾಮರ್ಥ್ಯ ಇದು. 'ಏಷಸೇತುಃ ವಿಧರಣಃ', 'ಯತ್ರ ವಿಶ್ವಂ ಭವತ್ಯೇಕನೀಳಂ', 'ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ', 'ಪರಮಾತ್ಮಾ ಚ ಸರ್ವೇಷಾಂ ಆಧಾರಃ ಪರಮೇಶ್ವರಃ' ಮೊದಲಾದ ಶ್ರೀ ಸೂಕ್ತಿಗಳು ಈ ಗುಣವನ್ನು ನಿರೂಪಿಸುತ್ತವೆ.

ಮೃಗನಾಭಿಗಂಧ ಇವ ಯತ್ಸಕಲಾರ್ಥಾನ್ನಿಜಸನ್ನಿಧೇರವಿಕೃತೋ
ವಿಕೃಣೋಷಿ ।
ಪ್ರಿಯರಂಗ ವೀರ್ಯಮಿತಿ ತತ್ತು ವದಂತೇ ಸವಿಕಾರಕಾರಣ–
ಮಿತೋ ವಿನಿವಾರ್ಯಂ ॥ ॥೩೩॥

(ಹೇ ಪ್ರಿಯರಂಗ) ಪ್ರಿಯನಾದ ರಂಗನಾಥನೇ, (ತ್ವಂ) ನೀನು (ಮೃಗನಾಭಿಗಂಧ ಇವ) ಕಸ್ತೂರಿಯ ಪರಿಮಳದಂತೆ (ಅವಿಕೃತಃ) ಸ್ವಯಂ ವಿಕಾರವನ್ನು ಹೊಂದದೆ (ನಿಜಸನ್ನಿಧೇಃ) ನಿನ್ನ ಸನ್ನಿಧಾನ ಮಾತ್ರದಿಂದಲೇ (ಸಕಲಾರ್ಥಾನ್) ಸಕಲ ಪದಾರ್ಥಗಳನ್ನೂ (ವಿಕೃಣೋಷಿ) ವಿಕಾರಪಡಿಸುತ್ತೀಯೆ. (ಇತಿಯತ್) ಹೀಗೆಂಬುವುದು ಯಾವುದುಂಟೋ (ತತ್) ಅದನ್ನು (ವೀರ್ಯಮಿತಿ) ವೀರ್ಯಗುಣವೆಂದು (ವದಂತೇ) ವೈದಿಕರು ಹೇಳುತ್ತಾರೆ. (ಇತಃ) ಇದರಿಂದ (ಸವಿಕಾರ ಕಾರಣಂ) ವಿಕಾರವನ್ನೊಳಗೊಂಡು ಕಾರಣವಾಗುವಿಕೆಯು (ವಿನಿವಾರ್ಯಂ) ವ್ಯಾವರ್ತಿಗೊಳಿಸತಕ್ಕದ್ದು.

ವೀರ್ಯಗುಣ ಸ್ವರೂಪವನ್ನೂ ಅದರ ಕಾರ್ಯವನ್ನೂ ಇಲ್ಲಿ ತಿಳಿಸು ತ್ತಾರೆ ಕಸ್ತೂರಿ ತನ್ನ ಸನ್ನಿಧಾನದಿಂದಲೇ ಇತರ ಪದಾರ್ಥಗಳಿಗೆ ತನ್ನ ವಾಸನೆಯನ್ನು ನೀಡುತ್ತದೆ. ತಾನು ಯಾವ ವಿಕಾರಕ್ಕೂ ಒಳಗಾಗದು. ಕಾರಣವು ಸಾಮಾನ್ಯವಾಗಿ ವಿಕಾರಕ್ಕೊಳಗಾಗುತ್ತದೆ. ಹಾಗೆ ಭಗವಂತನು ವಿಕಾರಕ್ಕೊಳಗಾಗುವಂಥ ಕಾರಣವಲ್ಲ. 'ವಿಕಾರವಿರಹೋ ವೀರ್ಯಂ ಪ್ರಕೃತಿ ತ್ವೇಽಪಿ ಮೇ ಸದಾ' ಎಂದು ಇದರ ಲಕ್ಷಣವನ್ನು ಆ ಕಾರಣದಿಂದ ನಿರೂಪಿಸಿ ದ್ದಾರೆ.

**ಸಹಕಾರ್ಯಪೇಕ್ಷಮಪಿ ಹಾತುಮಿಹ ತದನಪೇಕ್ಷಕರ್ತೃತಾ ।**
**ರಂಗಧನ ಜಯತಿ ತೇಜ ಇತಿ ಪ್ರಣತಾರ್ತಿಜಿತ್ಪ್ರತಿಭಟಾಭಿ-**
**ಭಾವುಕಂ ॥ ॥೩೪॥**

(ಹೇ ರಂಗಧನ) ಶ್ರೀರಂಗನಾಥನೇ, (ಸಹಕಾರ್ಯಪೇಕ್ಷಮಪಿ) ಸಹಕಾರಿ ಕಾರಣವನ್ನು ಅಪೇಕ್ಷಿಸುವ ಕಾರಣವನ್ನು (ಹಾತುಂ) ವ್ಯವಚ್ಛೇದಿಸಲು (ತತ್ ಅನಪೇಕ್ಷಕರ್ತೃತಾ) ಆ ಸಹಕಾರಿ ಕಾರಣವನ್ನು ಅಪೇಕ್ಷಿಸದ ಕಾರಣ ಯಾವುದೊಂದು ಇದೆಯೋ ಅದು (ತೇಜ ಇತಿ) ತೇಜಸ್ಸೆಂಬ ಗುಣವೆಂದು (ಜಯತಿ) ಪ್ರಕಾಶಿಸುತ್ತದೆ. (ಪ್ರಣತ ಆರ್ತಿಜಿತ್) ಆಶ್ರಿತರ ಆರ್ತಿಯನ್ನು ಹೋಗಲಾಡಿಸುವುದೂ (ಪ್ರತಿಭಟ ಅಭಿಭಾವುಕಂ) ಎ ದು ರಾ ಳಿ ಗ ಳ ನ್ನು ತಿರಸ್ಕರಿಸುವುದೂ ಆದುದು ಅದು.

ತೇಜಸ್ಸಿನ ಸ್ವರೂಪ ಇಲ್ಲಿ ಹೇಳಿದೆ. ಸಹಕಾರಿಕಾರಣವನ್ನು ಅಪೇಕ್ಷಿ ಸುವುದಿಲ್ಲ ಈಶ್ವರನ ಕಾರಣತ್ವವು. ಸಹಕಾರಿಸಾಪೇಕ್ಷವಾದ ಲೌಕಿಕ ಕಾರಣ ವರ್ಗವನ್ನು ಇಲ್ಲಿ ನಿರಾಕರಿಸಿದೆ. ಈಶ್ವರನ ಸಂಕಲ್ಪ ಅಪ್ರತಿಹತವಾದುದು. ಮತ್ತೊಂದರ ಅಪೇಕ್ಷೆಯನ್ನು ಅದು ಹೊಂದಿಲ್ಲ. ಹಾಗೆಯೇ ಈ ಗುಣ ವನ್ನು 'ಅಪ್ರಮೇಯಂ ಹಿ ತತ್ತೇಜಃ' ಎಂದು ಹೇಳಿದಂತೆ ಇತರರನ್ನು ಅಭಿ ಭವಿಸುವ ಸಾಮರ್ಥ್ಯವೆಂದೂ ನಿರೂಪಿಸಿದೆ. 'ಪರಾಭಿಭವನ ಸಾಮರ್ಥ್ಯಂ

ತೇಜಃ' ಎಂಬಲ್ಲಿ ಇದನ್ನು ಕಾಣಬಹುದು 'ತೇಜಸ್ತ್ವನ್ಯಾನಪೇಕ್ಷತಾ' ಎಂದೂ 'ಸಹಕಾರ್ಯನಪೇಕ್ಷಾ ಮೋ ಸರ್ವಕಾರ್ಯವಿಧೌ ಹಿ ಯಾ । ತೇಜಸ್ಷಷ್ಠಗುಣಂ ಪ್ರಾಹುಃ ತಮಿಮಂ ತತ್ವವೇದಿನಃ ॥' ಎಂದೂ ಈ ಗುಣವನ್ನು ನಿರೂಪಿಸಿದ್ದಾರೆ. 'ನ ತತ್ರ ಸೂರ್ಯೋಭಾತಿ ನ ಚಂದ್ರತಾರಕಂ' ಎಂಬಲ್ಲಿ ಅವನ ಪರಾಭಿಭವನ ಸಾಮರ್ಥ್ಯದ ವರ್ಣನೆ ಇರುವುದನ್ನು ಕಾಣಬಹುದು.

ಮರ್ತ್ಯಾತ್ಥಾಯಂ ವಿರಿಂಚಾವಧಿಕಮುಪರಿ
ಚೋತ್ಪ್ರೇಕ್ಷ್ಯ ಮೀಮಾಂಸಮಾನಾ
ರಂಗೇಂದ್ರಾನಂದವಲ್ಲೀ ತವ ಗುಣನಿವಹಂ
ಯೌವ್ವನಾನಂದ ಪೂರ್ವಂ ।
ನ ಸ್ವಾರ್ಥಂ ಸ್ಪ್ರಷ್ಟುಮೀಷ್ಟೇ ಸ್ಖಲತಿ ಪಥಿ ಪರಂ
ಮೂಕಲಾಯಂ ನಿಲಿಲ್ಯೇ
ಹಂತೈವಂ ತ್ವದ್ಗುಣಾನಾಂ ಅವಧಿಗಣನಯೋಃ
ಕಾ ಕಥಾ ಚಿತ್ರವಾಚೋಃ ॥ ॥೩೩॥

(ಹೇ ರಂಗೇಂದ್ರ) ಶ್ರೀ ರಂಗರಾಜನೇ, (ಆನಂದವಲ್ಲೀ) ತೈತ್ತಿರೀಯ ಉಪನಿಷತ್ತಿನಲ್ಲಿರುವ ಆನಂದವಲ್ಲಿಯು (ಮರ್ತ್ಯಾತ್ಥಾಯಂ) ಮನುಷ್ಯನನ್ನು ಮೊದಲುಗೊಂಡು (ವಿರಿಂಚಾವಧಿಕಂ) ಬ್ರಹ್ಮನನ್ನು ಕೊನೆಯಾಗಿ ಉಳ್ಳದಾಗಿ (ಉಪರಿಚ) ಮೇಲೆ ಮೇಲೂ ಸಹ (ಉತ್ಪ್ರೇಕ್ಷ್ಯ) ಹಂತ ಹಂತವಾಗಿ ಹೇಳಿಕೊಂಡು ಹೋಗಿ (ತವ) ನಿನ್ನ (ಯೌವ್ವನಾನಂದ ಪೂರ್ವಂ) ಯೌವನ, ಆನಂದ ಮೊದಲಾದ (ಗುಣನಿವಹಂ) ಗುಣಸಮೂಹವನ್ನು (ಮೀಮಾಂಸಮಾನಾ ಸತಿ) ವಿಚಾರಿಸುತ್ತಾ ಇದ್ದುಕೊಂಡು (ಸ್ವಾರ್ಥಂ) ತನ್ನ ಉದ್ದೇಶವನ್ನು (ಸ್ಪ್ರಷ್ಟುಂ) ಸ್ಪರ್ಶಿಸಲು ಎಂದರೆ ಮುಟ್ಟಿ ನೋಡುವುದಕ್ಕೂ (ನ ಈಷ್ಟೇ) ಸಮರ್ಥವಾಗಿಲ್ಲ. (ಪಥಿಪರಂ) ಮಾರ್ಗದಲ್ಲಿಯೇ

(ಸ್ಖಲತಿ) ಎಡವುತ್ತದೆ. (ಮೂಕಲಾಯಂ) ಮೂಗನಂತೆ (ನಿಲಿಲ್ಯೇ) ಬಾಯಿ ಮುಚ್ಚಿ ನಿಂತಿದೆ. (ಏವಂಸತಿ) ಈರೀತಿಯಾಗಿರಲು (ತ್ವದ್ಗುಣಾನಾಂ) ನಿನ್ನ ಕಲ್ಯಾಣಗುಣಗಳ (ಅವಧಿ ಗಣನಯೋಃ) ಎಲ್ಲೆ ಮತ್ತು ಸಂಖ್ಯೆ ಇವುಗಳಲ್ಲಿ (ಚಿತ್ತವಾಚೋಃ) ಮನಸ್ಸು ಮತ್ತು ವಾಕ್ಕುಗಳಿಗೆ (ಕಾಕಥಾ) ಪ್ರಸಕ್ತಿ ತಾನೇ ಯಾವುದಿದೆ? (ಹಂತ) ಆಶ್ಚರ್ಯವು.

ಷಡ್ಗುಣ ನಿರೂಪಣೆ ಮಾಡಿದನಂತರ ಇಲ್ಲಿ ಭಗವಂತನ ಆನಂದ ಗುಣದ ನಿರೂಪಣೆ ಮಾಡುತ್ತಾ ಅದು ಅಪರಿಚ್ಛಿನ್ನವಾದುದೆಂದು ಹೇಳಿದೆ. 'ಸ ಏಕೋ ಮಾನುಷ ಆನಂದಃ' ಎಂದು ಶ್ರುತಿ ಆರಂಭಿಸಿ ಆ ಮನುಷ್ಯನ ಆನಂದಕ್ಕಿಂತ ಹೆಚ್ಚಿನ ಆನಂದವನ್ನುಳ್ಳವರನ್ನು ನಿರೂಪಿಸುತ್ತಾ ಬರುತ್ತದೆ. ಆದರೆ ಭಗವಂತನ ಆನಂದವನ್ನು ಹೇಳುವುದಕ್ಕೆ ಸಾಧ್ಯವಾಗದ ಕಾರಣ 'ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ' ಎಂದು ಉದ್ಘೋಷಿಸಿತು. ಅವನು ಆನಂದಸ್ವರೂಪಿ ಎಂದು ನಾವು ತಿಳಿಯಬಹುದು. ಅವನ ಆನಂದ ಇಷ್ಟಿದೆಯೆಂದು ಅದನ್ನು ಪೂರ್ಣವಾಗಿ ತಿಳಿಯುವುದಕ್ಕಾಗಲೀ ಹೇಳುವುದಕ್ಕಾಗಲೀ ಸಾಧ್ಯವಾಗುವುದಿಲ್ಲ. ಇದಕ್ಕೆ ಕಾರಣ ಅವನ ಆನಂದಕ್ಕೆ ಎಲ್ಲೆ ಇಲ್ಲದಿರುವುದೇ ಆಗಿದೆ.

**ನ್ಯಧಾಯಿಷತ ಯೇ ಗುಣಾಃ ನಿಧಿನಿಧಾಯಮಾರಣ್ಯಕೇ–**
**ಷ್ವಮೀ ಮ್ರದಿಮಚಾತುರೀ ಪ್ರಣತ ಚಾಪಲಕ್ಷಾಂತಯಃ ।**
**ದಯಾವಿಜಯ ಸೌಂದರೀ ಪ್ರಭೃತಯೋಽಪಿ ರತ್ನೌಘವತ್**
**ಜಗದ್ವ್ಯವಹೃತಿಕ್ಷಮಾಃ ವರದ ರಂಗರತ್ನಾಪಣೇ ॥** ॥೩೬॥

(ಹೇ ವರದ) ವರಪ್ರದನಾದ ರಂಗನಾಥನೇ, (ಆರಣ್ಯಕೇಷು) ಉಪನಿಷತ್ತುಗಳಲ್ಲಿ (ಯೇಗುಣಾಃ) ಯಾವ ಕೆಲವು ಗುಣಗಳು (ನಿಧಿ ನಿಧಾಯಂ) ನಿಧಿಯ ಹಾಗೆ ರಹಸ್ಯವಾಗಿ (ನ್ಯಧಾಯಿಷತ) ಪ್ರತಿಪಾದಿಸಲ್ಪಟ್ಟವೋ (ಅಮೀ) ಅಂಥ ಈ (ಮ್ರದಿಮ) ಸೌಕುಮಾರ್ಯ, (ಚಾತುರೀ)

ಅಘಟಿತ ಘಟನಾಶಕ್ತಿ, (ಪ್ರಣತ ಚಾಪಲ) ಆಶ್ರಿತ ಪ್ರಾವಣ್ಯ, (ಕ್ಷಾಂತಯಃ) ಕ್ಷಮೆ ಮೊದಲಾದವೂ (ದಯಾ) ದಯೆಯೇನು, (ವಿಜಯ) ಜಯಶಾಲಿತ್ವವೇನು (ಸೌಂದರೀ) ಸೌಂದರ್ಯವೇನು (ಪ್ರಭೃತಯಃ ಅಪಿ) ಇವೇ ಮೊದಲಾದವೂ (ರತ್ನೌಘವತ್) ರತ್ನದ ಗೊಂಚಲುಗಳಂತೆ (ರಂಗರತ್ನಾಪಣೇ) ಶ್ರೀರಂಗ ಗರ್ಭಗೃಹವಾದ ರತ್ನದ ಅಂಗಡಿಯಲ್ಲಿ (ಜಗದ್ವ್ಯವಹೃತಿಕ್ಷಮಾಃ) ಲೋಕಗಳಲ್ಲೆಲ್ಲಾ ವ್ಯವಹಾರ ಯೋಗ್ಯಗಳಾಗಿ ಇವೆ.

ವೇದಾಂತ ಪ್ರತಿಪಾದ್ಯವಾದ ಕಲ್ಯಾಣಗುಣಗಳು ಶ್ರೀ ರಂಗನಾಥನಲ್ಲಿ ಎಲ್ಲರೂ ಸಾಕ್ಷಾತ್ಕರಿಸಲು ಯೋಗ್ಯವಾಗಿ ಪ್ರಕಾಶಿಸಿವೆ. ಗುಣಗಳೇ ರತ್ನಗಳು, ದೇವಾಲಯದ ಗರ್ಭಗೃಹವೇ ಅಂಗಡಿ. ಉಪನಿಷತ್ತುಗಳಲ್ಲಿ ರಹಸ್ಯವಾಗಿ ಪ್ರತಿಪಾದಿತವಾದ ಗುಣಗಳು ಇಲ್ಲಿ ಎಲ್ಲರಿಗೂ ಅನುಭವ ಗೋಚರವಾಗಿವೆ. ಯಾರ ಕಣ್ಣಿಗೂ ಕಾಣದಂತೆ ಗಣಿಗಳಲ್ಲಿರುವ ರತ್ನಗಳನ್ನು ಹೇಗೆ ತಂದು ಅಂಗಡಿಯಲ್ಲಿ ಎಲ್ಲರಿಗೂ ಕಾಣುವಂತೆ ಇಡುವರೋ ಹಾಗೆ ಉಪನಿಷತ್ತುಗಳಲ್ಲಿ ಪ್ರತಿಪಾದ್ಯವಾದ ಗೂಢವಾದ ಕಲ್ಯಾಣಗುಣಗಳು ಶ್ರೀ ರಂಗನಾಥನ ದೇವಾಲಯದಲ್ಲಿ ಬೆಳಗಿವೆ. ಇಲ್ಲಿ ಆ ಕಲ್ಯಾಣ ಗುಣಗಳಿಂದ ಕೂಡಿದ ಸ್ವಾಮಿಯನ್ನು ಎಲ್ಲರೂ ಅನುಭವಿಸಬಹುದು ಎಂಬ ಭಾವ.

ಯಮಾಶ್ರಿತ್ಯೈವಾತ್ಮಂಭರಯ ಇವ ತೇ ಸದ್ಗುಣಗಣಾಃ
ಪ್ರಥಂತೇ ಸೋಽನಂತಸ್ಸ್ವವಶಘನ ಶಾಂತೋದಿತ ದಶಃ ।
ತ್ವಮೇವ ತ್ವಾಂ ವೇತ್ಥ ಸ್ತಿಮಿತನಿತರಂಗಂ ವರದ ಭೋ
ಸ್ವಸಂವೇದ್ಯಸ್ವಾತ್ಮದ್ವಯಸ ಬಹುಳಾನಂದ ಭರಿತಂ ॥ ॥೩೭॥

(ಭೋವರದ) ವರವನ್ನು ಕೊಡುವ ದೇವನೇ, (ತೇ) ಅಂಥ (ಸದ್ಗುಣಗಣಾ) ಕಲ್ಯಾಣಗುಣ ಸಮೂಹಗಳು (ಆತ್ಮಂಭರಯ ಇವ) ಹೊಟ್ಟೆಯನ್ನು ಹೊರೆಯುವವರ ಹಾಗೆ (ಯಂತ್ವಾಂ) ಯಾವ ನಿನ್ನನ್ನು (ಆಶ್ರಿತ್ಯಏವ)

ಅವಲಂಬಿಸಿಯೋ (ಪ್ರಥಂತೇ) ಪ್ರಸಿದ್ಧಿಯನ್ನು ಹೊಂದುತ್ತವೋ (ಸಃ) ಅಂಥ (ಅನಂತ) ನಿರವಧಿಕವಾಗಿ (ಸ್ವವಶ) ತನಗೇ ಅನುಭಾವ್ಯವಾಗಿ (ಘನ) ನಿರಂತವಾಗಿರುವ (ಶಾಂತೋದಿತ ದಶಃ) ಶಾಂತೋದಿತದಶೆಯುನ್ನುಳ್ಳವನಾದ (ತ್ವಮೇವ) ನೀನೇ (ಸ್ತಿಮಿತವಿತರಂಗಂ) ನಿಶ್ಚಲವಾಗಿ ಅಲೆಗಳಿಲ್ಲದ ಸಾಗರದಂತಿರುವ (ಸ್ವಸಂವೇದ್ಯ) ತಾನೇ ಅನುಭವಿಸಬಹುದಾದ (ಸ್ವಾತ್ಮದ್ವಯುಸ) ತನ್ನೊಡನೆ ಸಮಾನವಾದ ಪ್ರಮಾಣವುಳ್ಳ (ಬಹುಳ) ಎಲ್ಲೆ ಇಲ್ಲದ (ಆನಂದ) ಆನಂದದಿಂದ (ಭರಿತಂ) ಪೂರ್ಣವಾದ (ತ್ವಾಂ) ನಿನ್ನ ಸ್ವಸ್ವರೂಪವನ್ನು (ವೇತ್ಥ) ಅನುಭವಿಸುತ್ತೀಯೆ.

ಭಗವಂತನಿಗೆ ಎರಡು ದೆಶೆಗಳಿವೆ ನಿತ್ಯೋದಿತ ಮತ್ತು ಶಾಂತೋದಿತ ಎಂದು. ಅಖಿಲಹೇಯಪ್ರತ್ಯನೀಕವಾಗಿ ಕಲ್ಯಾಣೈಕತಾನವಾದ ತನ್ನ ಸ್ವರೂಪವನ್ನು ತಾನು ಅನುಭವಿಸುವುದು ನಿತ್ಯೋದಿತ ದೆಶೆ ಎನ್ನಲಾಗಿದೆ. ತನ್ನ ವಿಭೂತಿಯನ್ನು ಅನುಭವಿಸಿ ಸಂತೋಷಿಸುವ ದೆಶೆ ಶಾಂತೋದಿತ ದೆಶೆ. ಈ ಅರ್ಥವನ್ನು ಇವುಗಳಿಗೆ ಅದಲು ಬದಲಾಗಿಯೂ ಹೇಳಬಹುದು. ಲೀಲಾ ವಿಭೂತಿ ನಿರ್ವಾಹಕ ಸಂಕಲ್ಪವಿಶಿಷ್ಟಂ ಶಾಂತೋದಿತ ಶಬ್ದೇನ, ನಿತ್ಯ ವಿಭೂತಿ ನಿರ್ವಾಹಕ ಸಂಕಲ್ಪವಿಶಿಷ್ಟಂ ಚ ನಿತ್ಯೋದಿತ ಶಬ್ದೇನ ನಿರೂಢಲಕ್ಷಣಯಾ ಉಚ್ಯತೇ ಇತಿ ಸಂಪ್ರದಾಯಃ .

**ಆಘ್ರಾಯೇಶ್ವರಗಂಧಮೀಶಸದೃಶಂಮನ್ಯಾಸ್ತ್ವಮೇಂದ್ರಾದಯೋ**
**ಮುಹ್ಯಂತಿತ್ವಮನಾವಿಲೋ ನಿರವಧೇಃ ಭೂಮ್ನಃ ಕಣೇಹತ್ಯ ಯತ್।**
**ಚಿತ್ರೀಯೇಮಹಿ ನಾತ್ರ ರಂಗರಸಿಕಂ ತ್ವಂ ತ್ವನ್ಮಹಿಮ್ನಃ ಪರೋ**
**ನೈಪುಲ್ಯಾತ್ ಮಹಿತ ಸ್ವಭಾವ ಇತಿ ವಾ ಕಿಂ**
**ನಾಮ ಸಾತ್ಮ್ಯಂನ ತೇ ॥ ॥೩೮॥**

(ಹೇ ರಂಗರಸಿಕ) ಎಲೈ ರಂಗನಾಥನೇ, (ಇಂದ್ರಾದಯಃ) ಇಂದ್ರನೇ ಮೊದಲಾದ ದೇವತೆಗಳು (ಐಶ್ವರಗಂಧಂ) ಐಶ್ವರ್ಯದ ಲವಲೇಶವನ್ನು

(ಆಘ್ರಾಯ) ಆಘ್ರಾಣಿಸಿ ಪಡೆದವರಾಗಿ (ಈಶ ಸದೃಶಂಮನ್ಯಾಃ) ಸರ್ವೇಶ್ವರನಾದ ನಿನಗೆ ಸಮಾನರೆಂದು ತಮ್ಮನ್ನು ತಿಳಿದವರಾಗಿ (ಮುಹ್ಯಂತಿ) ಮೋಹಗೊಳ್ಳುತ್ತಾರೆ. ಗರ್ವಪಡುತ್ತಾರೆ. (ತ್ವಂ) ನೀನು (ನಿರವಧೇಃ) ಎಲ್ಲೆ ಇಲ್ಲದ (ಭೂಮ್ನಃ) ಹಿರಿಮೆಯನ್ನು (ಕಣೇಹತ್ಯ) ಒಂದು ಪದಾರ್ಥವೆಂದು ಎಣಿಸದೆ (ಅನಾವಿಲಃ ಅಸಿ) ಗರ್ವಪಡದೆ ಇದ್ದೀಯೆ (ಯತ್ ಅತ್ರ) ಎಂಬುವ ಈ ವಿಷಯದಲ್ಲಿ (ವಯಂ) ನಾವು (ನ ಚಿತ್ರೀಯೇಮಹಿ) ಆಶ್ಚರ್ಯಪಡುವುದಿಲ್ಲ. ಏಕೆಂದರೆ (ತ್ವಂ) ನೀನು ಎಂದರೆ ನಿನ್ನ ಸ್ವರೂಪವು (ತ್ವನ್ಮಹಿಮ್ನಃ) ನಿನ್ನ ಹಿರಿಮೆಯ ಸ್ವಭಾವಕ್ಕಿಂತಲೂ (ಪರಃ ಇತಿವಾ) ಮೇಲ್ಪಟ್ಟದೆಂದು ಹೇಳಬಹುದೇ ಅಥವಾ, (ಸ್ವಭಾವಃ) ನಿನ್ನ ಸ್ವಭಾವವು (ವೈಪುಲ್ಯಾತ್) ಮೇಲೆ ಹೇಳಿದ ಸ್ವರೂಪ ವೈಭವಕ್ಕಿಂತಲೂ(ಮಹಿತಃ ಇತಿವಾ) ಮೇಲ್ಪಟ್ಟದು ಎಂದು ಹೇಳಬಹುದೋ ? ಹೇಗೆ ಬೇಕಾದರೂ ಹೇಳಬಹುದಾಗಿರುವಾಗ (ತೇ) ನಿನಗೆ (ಕಿಂನಾಮ) ಯಾವುದುತಾನೇ (ನಸಾತ್ಮ್ಯಂ) ಒಪ್ಪಾಗುವುದಿಲ್ಲ.

ಭಗವಂತನು ಪರಿಪೂರ್ಣ ವೈಭವವನ್ನು ಹೊಂದಿರುವುದರಿಂದ ಗರ್ವಪಡುವುದಿಲ್ಲ. ಆದರೆ ಭಗವಂತನಿಂದ ಅಣು ಮಾತ್ರವಾದ ಮಹಿಮೆ ಪಡೆದವರು ಅದರಿಂದ ಅಹಂಕಾರ ಪಡುತ್ತಿದ್ದಾರೆ. ಭಗವಂತನ ಸ್ವರೂಪ ಹೆಚ್ಚೋ ಸ್ವಭಾವ ಹೆಚ್ಚೋ ಎಂದು ನೋಡಿದಾಗ ಎರಡೂ ಒಂದನ್ನೊಂದು ಮೀರಿಸುವಂತಿದೆ. ಸ್ವರೂಪವನ್ನು ನೋಡಿದಾಗ ಅದೇ ಸ್ವಭಾವವನ್ನು ಮೀರಿಸುವಂತಿದೆ. ಸ್ವಭಾವವನ್ನು ನೋಡಿದರೆ ಅದೇ ಸ್ವರೂಪವನ್ನು ಮೀರಿಸುವಂತಿದೆ. ಒಂದಕ್ಕೊಂದು ಸೋಲದೆ ಇರುವುದರಿಂದ ಇವೆರಡೂ ಬೃಹತ್ತಾಗಿರುತ್ತಾ ಎರಡೂ ಸಮನಾಗಿಯೇ ತೋರುತ್ತವೆ. ನಿನ್ನನ್ನು ಹೇಗೆ ಹೇಳಿದರೂ ಸರಿ ಹೋಗುತ್ತದೆ.

**ಷಾಡ್ಗುಣ್ಯಾದ್ವಾಸುದೇವಃ ಪರ ಇತಿ ಸ ಭವಾನ್ಮುಕ್ತಭೋಗ್ಯೋ**
**ಬಲಾಢ್ಯಾತ್**
**ಬೋಧಾತ್ಸಂಕರ್ಷಣಸ್ತ್ವಂ ಹರಸಿ ವಿತನುಷೇ**
**ಶಾಸ್ತ್ರಮೈಶ್ವರ್ಯವೀರ್ಯಾತ್ ।**

ಪ್ರದ್ಯುಮ್ನಸ್ಸರ್ಗಧರ್ಮೌ ನಯಸಿ ಚ ಭಗವನ್
ಶಕ್ತಿತೇಜೋಽನಿರುದ್ಧಃ
ಬಿಭ್ರಾಣಃ ಪಾಸಿ ತತ್ವಂ ಗಮಯಸಿ ಚ ತಥಾ
ವ್ಯೂಹ್ಯ ರಂಗಾಧಿರಾಜ ॥ ॥೩೯॥

(ಭಗವನ್ ರಂಗಾಧಿರಾಜ) ಭಗವಂತನೇ, ಶ್ರೀರಂಗನಾಥನೇ, (ಸಭವಾನ್ ತ್ವಂ) ಪೂಜ್ಯನಾದ ನೀನು (ವ್ಯೂಹ್ಯ) ವಾಸುದೇವಾದಿ ವ್ಯೂಹರೂಪದಲ್ಲಿ ಅವತರಿಸಿ (ಷಾಡ್ಗುಣ್ಯಾತ್) ಜ್ಞಾನ ಮೊದಲಾದ ಆರು ಗುಣಗಳಿಂದ ಕೂಡಿ (ಪರಃವಾಸುದೇವ ಇತಿ) ಪರವಾಸುದೇವನೆಂದು ವಿಖ್ಯಾತನಾಗಿ (ಮುಕ್ತ ಭೋಗ್ಯಃ ಅಸಿ) ಮುಕ್ತರಿಗೆ ಅನುಭಾವ್ಯನಾಗಿ ಆಗಿರುವಿ. (ಬಲಾಢ್ಯಾತಾ ಭೋಧಾತ್)ಬಲದೊಡನೆ ಸೇರಿದ ಜ್ಞಾನವೆನ್ನುವ ಎರಡು ಗುಣಗಳನ್ನುಹೊಂದಿ (ಸಂಕರ್ಷಣಃ) ಸಂಕರ್ಷಣ ಮೂರ್ತಿಯಾಗಿ (ಹರಸಿ) ಸಂಹಾರ ಕ್ರಿಯೆಯನ್ನು ಮಾಡುವಿ. (ಶಾಸ್ತ್ರಂ ವಿತನುಷೇ) ಶಾಸ್ತ್ರವನ್ನೂ ಪ್ರವರ್ತನಮಾಡುವಿ. (ಐಶ್ವರ್ಯ ವೀರ್ಯಾತ್) ಐಶ್ವರ್ಯವೀರ್ಯಗಳೆಂಬ ಎರಡು ಗುಣಗಳೊಡನೆ ಕೂಡಿ (ಪ್ರದ್ಯುಮ್ನಃ) ಪ್ರದ್ಯುಮ್ನ ಮೂರ್ತಿಯಾಗಿ(ಸರ್ಗಧರ್ಮೌ ನಯಸಿಚ) ಸೃಷ್ಟಿಯನ್ನು ಮಾಡಿ ಧರ್ಮ ಪ್ರವರ್ತನವನ್ನೂ ಮಾಡುತ್ತೀಯೆ. (ಶಕ್ತಿ ತೇಜಃ) ಶಕ್ತಿ ಮತ್ತು ತೇಜಸ್ಸು ಎಂಬುವ ಎರಡು ಗುಣಗಳನ್ನೂ (ಬಿಭ್ರಾಣಃ) ಹೊಂದಿದವನಾಗಿ (ಅನಿರುದ್ಧಃ) ಅನಿರುದ್ಧ ಮೂರ್ತಿಯಾಗಿ (ಪಾಸಿ) ರಕ್ಷಣಾ ಕಾರ್ಯವನ್ನು ಮಾಡುವಿ (ತಥಾ) ಹಾಗೆಯೇ (ತತ್ವಂ ಗಮಯಸಿ ಚ) ತತ್ತ್ವಜ್ಞಾನ ಪ್ರದಾನವನ್ನೂ ಮಾಡುತ್ತೀಯೆ.

ಇಲ್ಲಿ ನಾಲ್ಕು ವ್ಯೂಹಗಳ ಸ್ವರೂಪವನ್ನು ವರ್ಣಿಸಿದ್ದಾರೆ. ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಮತ್ತು ಅನಿರುದ್ಧ ಎಂಬುವರು ನಾಲ್ಕು ವ್ಯೂಹ ಮೂರ್ತಿಗಳು. ವಾಸುದೇವನಲ್ಲಿ ಜ್ಞಾನಶಕ್ತ್ಯಾದಿ ಆರುಗುಣಗಳೂ ಪೂರ್ಣ ವಾಗಿ ಪ್ರಕಟವಾಗಿರುತ್ತವೆ.

ಸಂಕರ್ಷಣನು ಬಲ ಮತ್ತು ಜ್ಞಾನವನ್ನು ಅತಿಶಯವಾಗಿ ಹೊಂದಿದ್ದು ಶಾಸ್ತ್ರ ಪ್ರವರ್ತನ ಮತ್ತು ಪ್ರಲಯವನ್ನೂ, ಪ್ರದ್ಯುಮ್ನನು ಐಶ್ವರ್ಯ ಮತ್ತು

ವೀರ್ಯವನ್ನು ಅತಿಶಯವಾಗಿ ಹೊಂದಿದ್ದು ಸೃಷ್ಟಿ ಮತ್ತು ಧರ್ಮಪ್ರವರ್ತನವನ್ನೂ, ಅನಿರುದ್ಧನು ಶಕ್ತಿ ಮತ್ತು ತೇಜಸ್ಸನ್ನು ಅತಿಶಯವಾಗಿ ಹೊಂದಿದ್ದು ರಕ್ಷಣೆ ಮತ್ತು ತತ್ತ್ವೋಪದೇಶವನ್ನೂ ಮಾಡುತ್ತಾರೆ. ಈ ಎಲ್ಲ ವ್ಯೂಹಗಳೂ ಪರಮಾತ್ಮನ ರೂಪಗಳೇ ಆಗಿವೆ. ಎಲ್ಲರೂ ಆರು ಗುಣಗಳನ್ನೂ ಹೊಂದಿರುತ್ತಾರೆ. ಆಯಾಯಾ ವ್ಯೂಹದಲ್ಲಿ ಎರಡೆರಡುಗುಣಗಳು ಮಾತ್ರ ಅಧಿಕವಾಗಿ ಪ್ರಕಾಶಿಸುತ್ತವೆ.

**ಜಾಗ್ರತ್ಸ್ವಪ್ನಾತ್ಯಲಸತುರೀಯ**
**ಪ್ರಾಯ ಧ್ಯಾತೃಕ್ರಮವದುಪಾಸ್ಯಃ**
**ಸ್ವಾಮಿನ್ ತತ್ತದ್ಗುಣ ಪರಿಬರ್ಹಃ**
**ಚಾತುರ್ವ್ಯೂಹಂ ವಹಸಿ ಚತುರ್ಧಾ ॥** ॥೪೦॥

(ಸ್ವಾಮಿನ್) ಶ್ರೀ ರಂಗನಾಥನೇ, (ಜಾಗ್ರತ್ಪ್ರಾಯ) ಎಚ್ಚರವಾದ ಅವಸ್ಥೆಯಲ್ಲಿರುವವರೂ (ಸ್ವಪ್ನಪ್ರಾಯ) ಕನಸು ಕಾಣುವವರೂ (ಅತ್ಯಲಸ ಪ್ರಾಯ) ಸುಷುಪ್ತಿಯಲ್ಲಿರುವವರೂ (ತುರೀಯ ಪ್ರಾಯ) ಮೂರ್ಛಾ ದೆಶೆಯಲ್ಲಿರುವವರೂ ಆದ (ಧ್ಯಾ ತೃ ಕ್ರ ಮ ವ ತ್) ಧ್ಯಾನ ಮಾಡುವವರಲ್ಲಿರುವ ರೀತಿಯ ಅಧಿಕಾರಕ್ಕನುಸಾರವಾಗಿ (ಉ ಪಾ ಸ್ಯ ಃ) ಉಪಾಸನೆ ಮಾಡಲ್ಪಡತಕ್ಕವನಾಗಿ (ತತ್ತತ್ ಗುಣಪರಿಬರ್ಹಃ) ತಕ್ಕುದಾದ ಗುಣ ಪರಿಕರಗಳನ್ನುಳ್ಳವನಾಗಿ (ಚತುರ್ಧಾ) ನಾಲ್ಕು ಬಗೆಯಾಗಿ (ಚಾತುರ್ವ್ಯೂಹಂ) ವ್ಯೂಹ ಚತುಷ್ಟಯವನ್ನು (ವಹಸಿ) ನೀನು ಧರಿಸುತ್ತೀಯೆ.

ವ್ಯೂಹ ಚತುಷ್ಟಯಗಳಿಗೆ ಅವಾಂತರ ವ್ಯೂಹಗಳು ಉಂಟು. ಅವುಗಳನ್ನು ಇಲ್ಲಿ ನಿರೂಪಿಸಿದೆ. ಜಾಗ್ರದಾದಿ ನಾಲ್ಕು ಅವಸ್ಥೆಗಳಿಗೆ ಇವು ಅನ್ವಯಿಸುತ್ತವೆ. ಉಪಾಸಕರು ಕೆಲವರು ಬಾಹ್ಯವಾದ ವಿಷಯಾನುಭವಗಳೊಡನೆ ಸೇರಿದವರಾಗಿ ಭಗವಂತನನ್ನು ಸ್ಥೂಲವಾಗಿ ಭಜಿಸುವರು. ಮತ್ತೆ ಕೆಲವರು ಮನಸಾ ಧ್ಯಾನಿಸುತ್ತಾರೆ. ಅವರು ಸ್ವಪ್ನಪ್ರಾಯರು. ಇನ್ನೂ ಸೂಕ್ಷ್ಮ

ವಾದ ರೀತಿಯಲ್ಲಿ ಧ್ಯಾನಿಸುವರು, ಉಸಿರು ಹಿಡಿದು ಧ್ಯಾನಿಸುವರು ಸುಷು ಪ್ತಿಯ ಅವಸ್ಥೆಯಲ್ಲಿರುವವರು. ಧ್ಯಾನ ಚಿಹ್ನೆಗಳು ಯಾವದೂ ಇಲ್ಲದಂತೆ ಉಸಿರೂ ಆಡದಂತೆ ಧ್ಯಾನಿಸುವವರು ತುರೀಯ ಪ್ರಾಯರು. ಪರಮ ಪದದಲ್ಲಿ ವಿಶಾಖಯೂಪವೆಂಬ ಹೆಸರಿನ ಒಂದು ಭಗವದ್ರೂಪವಿದೆಯೆಂದು ಲಕ್ಷ್ಮೀ ತಂತ್ರ ಮೊದಲಾದವು ತಿಳಿಸುತ್ತವೆ. ಆ ಸ್ತಂಭದಲ್ಲಿ ಮಧ್ಯಭಾಗದಲ್ಲಿ ಜಾಗ್ರತ್ ಸ್ಥಾನವೂ ಅದರ ಮೇಲೆ ಕ್ರಮವಾಗಿ ಸ್ವಪ್ನ, ಸುಷುಪ್ತಿ ಮತ್ತು ಮೂರ್ಛಾ ಸ್ಥಾನವೂ ಇವೆ. ಇವು ಒಂದೊಂದು ಸ್ಥಾನದಲ್ಲಿಯೂ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಮತ್ತು ಅನಿರುದ್ಧರೆಂಬ ನಾಲ್ಕು ನಾಲ್ಕು ರೂಪ ಗಳುಂಟು. ಜಾಗ್ರದ್ದೆಶೆಯಲ್ಲಿರುವ ವಾಸುದೇವಾದಿ ರೂಪಗಳು ಜಗತ್ತಿನ ಸೃಷ್ಟಿ ಸ್ಥಿತಿಲಯಗಳೆಂಬ ವ್ಯಾಪಾರಗಳನ್ನು ಹೊಂದಿವೆ. ಸ್ವಪ್ನಸ್ಥಾನದ ವಾಸು ದೇವಾದಿ ರೂಪಗಳಿಗೆ ಇಚ್ಛಾ ಮಾತ್ರವೇ ವ್ಯಾಪಾರವಾಗಿದೆ. ಸುಷುಪ್ತಿ ಸ್ಥಾನದಲ್ಲಿರುವ ವಾಸುದೇವಾದಿ ರೂಪಗಳಿಗೆ ಸ್ವಾನಂದಾನುಭವವೇವಿನಾ ಸೃಷ್ಟ್ಯಾದಿ ಇಚ್ಛೆಯೂ ಇಲ್ಲ. ಅಲ್ಲಿನ ವಾಸುದೇಹ ವ್ಯೂಹಕ್ಕೆ ದಿವ್ಯ ಮಂಗಳ ವಿಗ್ರಹವೂ ಇಲ್ಲ. ಯೋಗ ಮಾತ್ರದಿಂದ ಷಾಡ್ಗುಣ್ಯಗಳನ್ನು ಪ್ರಕಾಶಿಸುವ ಶಕ್ತಿ ಉಂಟು. ನಾಲ್ಕನೆಯದಾದ ಮೂರ್ಛಾವಸ್ಥೆಯಲ್ಲಿನ ವಾಸುದೇವಾದಿ ರೂಪಗಳಿಗೆ ಕರಚರಣಾದಿ ವಿಶಿಷ್ಟವಾದ ವಿಗ್ರಹಗಳು ಇಲ್ಲ. ಚೇತನವ್ಯಾಪಾರಚಿಹ್ನೆಯೂ ಇಲ್ಲ. ಈ ರೂಪಗಳೆಲ್ಲಾ ಉಪಾಸಕರ ಭಾವನೆ ಗನುಸಾರವಾಗಿ ಉಪಾಸ್ಯವಾಗುತ್ತವೆ.

**ಅಚಿದವಿಶೇಷಿತಾನ್ ಪ್ರಲಯಸೀಮನಿ ಸಂಸರತಃ**
**ಕರಣಕಲೇಬರೈಃ ಘಟಯಿತುಂ ದಯಮಾನಮನಾಃ ।**
**ವರದ ನಿಜೇಚ್ಛಯೈವ ಪರಮಾನಕರೋಃ ಪ್ರಕೃತಿಂ**
**ಮಹದಭಿಮಾನಭೂತಕರಣಾವಳಿ ಕೋರಕಿಣೀಂ॥** ॥೪೧॥

(ವರದ) ಎಲೈ ವರಪ್ರದನಾದ ಶ್ರೀ ರಂಗನಾಥನೇ, (ಪ್ರಲಯ ಸೀಮನಿ) ಪ್ರಲಯ ಕಾಲದಲ್ಲಿ (ಅಚಿದವಿಶೇಷಿತಾನ್) ಅಚೇತನಕ್ಕಿಂತ ಭೇದವಿಲ್ಲ

ದವರಾಗಿ (ಸಂಸರತಃ) ಸಂಸಾರದಲ್ಲಿ ತೊಳಲುವ ಜೀವರಾಶಿಗಳನ್ನು (ಕರಣ ಕಲೇಬರೈಃ) ಇಂದ್ರಿಯ ಮತ್ತು ಶರೀರಗಳೊಡನೆ (ಘಟಯಿತುಂ) ಸೇರಿಸಲು (ದಯಮಾನಮನಾಃ) ದಯೆಯನ್ನು ತೋರುವ ಮನಸ್ಸುಳ್ಳವನಾಗಿ (ನಿಜೇಚ್ಛಯಾ ಏವ ಪರವಾನ್) ಸ್ವಸಂಕಲ್ಪಪರಾಧೀನನಾಗಿ (ಪ್ರಕೃತಿಂ) ಮೂಲ ಪ್ರಕೃತಿಯೇನು (ಮಹತ್) ಮಹತ್ತುಏನು (ಅಭಿಮಾನ) ಅಹಂಕಾರ ವೇನು (ಭೂತ) ಪಂಚಭೂತಗಳೇನು (ಕರಣ) ಇಂದ್ರಿಯಗಳೇನು ಇವುಗಳ (ಆವಳಿ) ಸಮೂಹವಾಗಿರುವ (ಕೋರಕಿಣೀಂ) ಮೊಗ್ಗುಗಳನ್ನು ಹೊಂದಿರು ವಂತಹ ಸ್ಥಿತಿಯನ್ನು (ಅಕರೋಃ) ಮಾಡಿದೆ.

ಸೃಷ್ಟಿಕಾರ್ಯವು ಭಗವಂತನ ಕರುಣಾಕಾರ್ಯವೆಂದು ಇಲ್ಲಿ ವರ್ಣಿಸಿದೆ. ಪ್ರಳಯ ಕಾಲದಲ್ಲಿ ಶರೀರೇಂದ್ರಿಯಗಳಿಲ್ಲದೆ ಯಾವ ವ್ಯಾಪಾರವನ್ನೂ ಮಾಡಲಶಕ್ಯರಾಗಿದ್ದ ಚೇತನರುಗಳ ಬಗೆಗೆ ದಯೆದೋರಿ ಭಗವಂತನು ತನ್ನ ಸಂಕಲ್ಪಕ್ಕನುಸಾರವಾಗಿ ಅವರಿಗೆ ಶರೀರೇಂದ್ರಿಯಗಳನ್ನು ಕರುಣಿಸಿದನು. ಅವರು ಅದರಿಂದ ತಮ್ಮ ಶ್ರೇಯಸ್ಸನ್ನು ಸಾಧಿಸಿಕೊಳ್ಳುವ ಅವಕಾಶವನ್ನು ನೀಡಿದನು. ಭಗವಂತನು ಲೋಕಸೃಷ್ಟಿಯನ್ನು ಮಾಡುವಾಗ ಮೂಲ ಪ್ರಕೃತಿಯು ಮಹತ್ತು, ಅಹಂಕಾರ ಇಂದ್ರಿಯಗಳು, ಪಂಚಭೂತಗಳು ಮೊದಲಾದವಾಗಿ ಪರಿಣಮಿಸುವಂತೆ ಮಾಡುವನು. ಪ್ರಕೃತಿ ಸ್ವತಂತ್ರ ವಾಗಿ ಜಗತ್ಕಾರಣವಲ್ಲವೆಂದೂ, ಈಶ್ವರನ ಇಚ್ಛೆಗನುಸಾರ ಅದು ಪರಿಣಾಮ ಹೊಂದುವುದೆಂದೂ ಇಲ್ಲಿ ಪ್ರತಿಪಾದಿಸಿದೆ.

ನಿಮ್ನೋನ್ನತಂ ಚ ಕರುಣಂ ಚ ಜಗದ್ವಿಚಿತ್ರಂ
ಕರ್ಮವ್ಯಪೇಕ್ಷ್ಯ ಸೃಜತಸ್ತವ ರಂಗಶೇಷಿನ್ ।
ವೈಷಮ್ಯನಿರ್ಘೃಣತಯೋರ್ನ ಖಲು ಪ್ರಸಕ್ತಿಃ
ತದ್ಬ್ರಹ್ಮಸೂತ್ರಸಚಿವಾಃ ಶ್ರುತಯೋ ಗೃಣಂತಿ ॥ ॥೪೨॥

(ರಂಗಶೇಷಿನ್) ಎಲೈ ರಂಗನಾಥನೇ, (ವಿಚಿತ್ರಂಕರ್ಮ) ಚೇತನರುಗಳ ಚಿತ್ರವಿಚಿತ್ರವಾದ ಕರ್ಮವನ್ನು (ವ್ಯಪೇಕ್ಷ್ಯ) ಅನುಸರಿಸಿ (ಜಗತ್) ಲೋಕ

ವನ್ನು (ನಿಮ್ನೋನ್ನತಂಚ)ದೇವಮನುಷ್ಯರೆಂಬ ಮೇಲೆ ಕೆಳಗೆ ಎಂಬ ಭೇದವುಳ್ಳದಾಗಿಯೂ (ಕರುಣಾಂಚ) ದುಃಖಕ್ಕೆ ಗುರಿಯಾದ ಕಾರಣ ಕರುಣೆತೋರುವಂತೆಯೂ (ಸೃಜತಃ) ಸೃಜಿಸುವ(ತವ)ನಿನಗೆ(ವೈಷಮ್ಯ ನಿರ್ಘೃಣತಯೋಃ) ಪಕ್ಷಪಾತ ಮತ್ತು ನಿರ್ದಯತ್ವವೆಂಬುವುಗಳ (ಪ್ರಸಕ್ತಿಃ ನಖಲು) ಅವಕಾಶವೇ ಇಲ್ಲವಷ್ಟೇ? (ತತ್) ಎಂಬುವ ಈ ವಿಷಯವನ್ನು (ಬ್ರಹ್ಮಸೂತ್ರ ಸಚಿವಾಃ ಶ್ರುತಯಃ) ಬ್ರಹ್ಮಸೂತ್ರವನ್ನು ಜೊತೆಯಾಗಿ ಉಳ್ಳ ಶ್ರುತಿಗಳು (ಗೃಣಂತಿ ಹೇಳುತ್ತವೆ.

ಲೋಕದ ಸೃಷ್ಟಿ ವಿವಿಧವೂ ವಿಚಿತ್ರವೂ ಆಗಿದೆ. ಕೆಲವರಿಗೆ ಉತ್ತಮ ಜನ್ಮವೂ ಒಳ್ಳೆಯ ಗುಣಗಳೂ ಸುಖವೂ ಇದ್ದರೆ ಮತ್ತೆ ಕೆಲವರಿಗೆ ಅದಕ್ಕೆ ವಿರುದ್ಧವಾದ ಜನ್ಮವೂ ದುಃಖಾದಿಗಳೂ ಆಗುತ್ತಿವೆ. ಹೀಗೆ ಬಗೆ ಬಗೆಯಾಗಿ ಸೃಜಿಸುವ ಭಗವಂತನಿಗೆ ಪಕ್ಷಪಾತಾದಿಗಳುಂಟಾಗುವುದಿಲ್ಲವೇ ಎಂದರೆ ಉಂಟಾಗುವುದಿಲ್ಲವೆಂದು ಇಲ್ಲಿ ಹೇಳಿದೆ. ಭಗವಂತನು ಆಯಾ ಚೇತನರ ಕರ್ಮಗಳಿಗನುಗುಣವಾಗಿ ಜಗತ್ ಸೃಷ್ಟ್ಯಾದಿಗಳನ್ನು ಮಾಡುವುದರಿಂದ ಆವನಿಗೆ ಪಕ್ಷಪಾತ ದೋಷವಾಗಲೀ ಕರುಣೆ ಇಲ್ಲದಿರುವಿಕೆಯಾಗಲೀ ಉಂಟಾಗುವುದಿಲ್ಲ.- ಅವರವರ ಕರ್ಮಕ್ಕನುಗುಣವಾಗಿ ಫಲಪ್ರದಾನ ಮಾಡುವವನು ಅವನು. ಸೂತ್ರಕಾರರು 'ವೈಷಮ್ಯನೈರ್ಘೃಣ್ಯೇ ನ ಸಾಪೇಕ್ಷತ್ವಾತ್ ತಥಾ ಹಿ ದರ್ಶಯತಿ' ಎಂಬ ಸೂತ್ರದಲ್ಲಿ ಈ ಅಂಶವನ್ನು ನಿರೂಪಣೆ ಮಾಡಿರುವುದನ್ನು ಕಾಣಬಹುದು. 'ಪುಣ್ಯೋ ವೈ ಪುಣ್ಯೇನ ಕರ್ಮಣಾ ಭವತಿ ಪಾಪಃ ಪಾಪೇನ', 'ಏಷ ಏವ ಸಾಧುಕರ್ಮ ಕಾರಯೇತಿ ತಂ ಯಮೇಭ್ಯೋ ಲೋಕೇಭ್ಯೋ ಉನ್ನಿನೀಷತ ಏಷ ಉ ಏವಾಸಾಧು ಕರ್ಮಕಾರಯತಿತಂ ಯಮಧೋನಿನೀಷತೇ' ಎಂದು ಶ್ರುತಿಗಳೂ ಈ ಅಂಶವನ್ನು ಉದ್ಘೋಷಿಸುತ್ತಿವೆ. ಆದುದರಿಂದ ಲೋಕದಲ್ಲಿ ಕಂಡುಬರುವ ವೈಷಮ್ಯಕ್ಕೆಲ್ಲಾ ಅವರವರ ಕರ್ಮವೇ ಕಾರಣವೆಂದು ತಿಳಿಯಬೇಕು.

**ಸ್ವಾಧೀನೇ ಸಹಕಾರಿಕಾರಣಗಣೇ ಕರ್ತುಶ್ಶರೀರೇಽಥವಾ**
**ಭೋಕ್ತುಃ ಸ್ವಾನುವಿಧಾಪರಾಧವಿಧಯೋ ರಾಜ್ಞೋಽಯಥಾ ಶಾಸಿತುಃ ।**

**ದಾತುರರ್ಥಿಜನೇ ಕಟಾಕ್ಷಣಮಿವ ಶ್ರೀರಂಗ ಸರ್ವಸ್ವ ತೇ**
**ಸ್ರಷ್ಟುಃ ಸೃಜ್ಯದಶಾವ್ಯಪೇಕ್ಷಣಮಪಿ**
**ಸ್ವಾತಂತ್ರ್ಯಮೇವಾವಹೇತ್ ॥ ॥೮೩॥**

(ಶ್ರೀರಂಗ ಸರ್ವಸ್ವ) ಶ್ರೀರಂಗವನ್ನೇ ಸರ್ವಸ್ವವಾಗಿ ಹೊಂದಿರುವ ರಂಗನಾಥನೇ, (ಸ್ರಷ್ಟುಃ) ಸೃಷ್ಟಿಕರ್ತಾ ಆದ (ತೇ) ನಿನಗೆ (ಸೃಜ್ಯದಶಾವ್ಯಪೇಕ್ಷಣಮಪಿ) ಸೃಷ್ಟಿಸಲ್ಪಡುವ ಆತ್ಮರುಗಳ ಕರ್ಮವಿಪಾಕದೆಶೆಯನ್ನು ಎದುರು ನೋಡುತ್ತಿದ್ದರೂ (ಸ್ವಾತಂತ್ರ್ಯಮೇವ) ಸ್ವಾತಂತ್ರ್ಯವನ್ನೇ (ಆವ ಹೇತ್) ನೆಲೆ ನಿಲ್ಲಿಸುತ್ತದೆ. ಹೇಗೆಂದರೆ (ಕರ್ತುಃ) ಮಡಕೆ ಮೊದಲಾದವನ್ನು ಮಾಡುವ ಕುಂಬಾರ ಮೊದಲಾದ ಕರ್ತೃವಿಗೆ (ಸ್ವಾಧೀನೇ) ಅವನಿಗೆ ವಶವಾದ (ಸಹಕಾರಿ ಕಾರಣಗಣೇ) ಸಹಾಯಕವಾದ ಕಾರಣಗಳಾದ ನೀರು, ದಂಡ, ಚಕ್ರ ಮೊದಲಾದ ಸಮೂಹದಲ್ಲಿ ಉಂಟಾದ (ಕಟಾಕ್ಷಣಮಿವ) ಎದುರು ನೋಡುವಿಕೆಯಂತೆ. (ಭೋಕ್ತುಃ) ಭೋಗವನ್ನನುಭವಿಸುವ ಜೀವನಿಗೆ (ಸ್ವಾಧೀನೇ ಶರೀರೇ ಕಟಾಕ್ಷಣಮಿವ) ತನಗೆ ಅಧೀನವಾದ ಶರೀರದ ಬಗೆಗೆ ಇರುವ ಎದುರು ನೋಡುವಿಕೆ ಅಥವಾ ಅಪೇಕ್ಷೆಯಂತೆಯೂ (ಶಾಸಿತುಃ) ನಿಯಾಮಕನಾದ (ರಾಜ್ಞಃ) ಅರಸನಿಗೆ (ಸ್ವಾನುವಿಧಾಪರಾಧವಿಧಯೋಃ) ತನ್ನನ್ನು ಅನುಸರಿಸುವುದು ತನಗೆ ಅಪರಾಧ ಮಾಡುವುದು ಈ ಕಾರ್ಯಗಳಲ್ಲಿ ಉಂಟಾದ (ಕಟಾಕ್ಷಣಮಿವ) ಎದುರು ನೋಡುವಿಕೆಯಂತೆಯೂ (ದಾತುಃ) ಉದಾರನಾದ ಪ್ರಭುವಿಗೆ (ಅರ್ಥಿಜನೇ) ಯಾಚಕರಲ್ಲಿ ಉಂಟಾದ (ಕಟಾಕ್ಷಣಮಿವ) ಅಪೇಕ್ಷೆಯ ಹಾಗೆಯೂ ಇರುತ್ತದೆ.

ಅವನು ನಿರಂಕುಶ ಸ್ವತಂತ್ರನಾಗುವುದಿಲ್ಲವೆಂಬ ಆಕ್ಷೇಪವನ್ನು ಇಲ್ಲಿ ಪರಿಹಾರ ಮಾಡಿದೆ. ಕರ್ಮಕ್ಕನುಸಾರವಾಗಿ ಅವನು ಸೃಷ್ಟಿ ಮಾಡಿದರೂ ಅವನ ಸ್ವಾತಂತ್ರ್ಯಕ್ಕೆ ಹಾನಿಯಿಲ್ಲ. ನಾಲ್ಕು ದೃಷ್ಟಾಂತಗಳನ್ನು ಕೊಟ್ಟು ಅವುಗಳಿಂದ ಭಗವಂತನ ಸ್ವಾತಂತ್ರ್ಯಕ್ಕೆ ಹಾನಿ ಇಲ್ಲವೆಂದು ನಿರೂಪಿಸಿದೆ. ಶುಭಾಶುಭ ಕರ್ಮಗಳಿಂದ ಪ್ರೀತನಾದ ಅಥವಾ ಕುಪಿತನಾದ ಭಗವಂತನು

ಆಯಾ ಚೇತನರಿಗೆ ಆಯಾ ಕರ್ಮಗಳಿಗನುಣವಾದ ಫಲಪ್ರದಾನ ಮಾಡುವ ಕರ್ಮಾಧ್ಯಕ್ಷನಾಗಿದ್ದಾನೆ. ಅವನ ಶಕ್ತಿ ಸ್ವಾತಂತ್ರ್ಯಗಳಿಗೆ ಇದರಿಂದ ಕುಂದಿಲ್ಲ. ಎಲ್ಲವೂ ಅವನಿಗೆ ವಶವಾಗಿಯೇ ಇರುವುವಾಗಿವೆ. ಆಯಾ ಚೇತನರ ಕರ್ಮಾನುಸಾರವಾಗಿ ಫಲ ಪ್ರದಾನ ಮಾಡುವೆನೆಂಬ ಸಂಕಲ್ಪವನ್ನು ಅವನು ಮಾಡಿರುವವನಾಗಿದ್ದಾನೆ. ಕುಂಬಾರನು ಸಹಕಾರಿ ಕಾರಣಗಳನ್ನು ಎದುರು ನೋಡುವಂತೆ, ಜೀವನು ತನಗೇ ಅಧೀನನಾಗಿರುವ ಶರೀರವನ್ನು ಎದುರು ನೋಡುವಂತೆ, ರಾಜನಾದವನು ತನ್ನ ಆಜ್ಞಾನುಪಾಲನೆ ಅಥವಾ ಆಜ್ಞಾಭಂಗವನ್ನು ನಿರೀಕ್ಷಿಸುವಂತೆ, ಉದಾರಿಯಾದ ದಾನಿ ಬೇಡುವವರನ್ನು ನಿರೀಕ್ಷಿಸುವಂತೆ ಭಗವಂತನು ಚೇತನರ ಕರ್ಮಕ್ಕನುಸಾರ ಫಲಪ್ರಧಾನ ಮಾಡುವವನಾಗಿದ್ದಾನೆ.

ಪ್ರಲಯಸಮಯಸುಪ್ತಂ ಸ್ವಂ ಶರೀರೈಕದೇಶಂ
ವರದ ಚಿದಚಿದಾಖ್ಯಂ ಸ್ವೇಚ್ಛಯಾ ವಿಸ್ತೃಣಾನಃ ।
ಖಚಿತಮಿವ ಕಲಾಪಂ ಚಿತ್ರಮಾತತ್ಯ ಧೂನ್ವನ್
ಅನುಶಿಖಿನಿ ಶಿಖೀವ ಕ್ರೀಡಸೇ ಶ್ರೀ ಸಮಕ್ಷಂ ॥ ॥೪೪॥

(ವರದ) ವರಪ್ರದನಾದ ಶ್ರೀ ರಂಗನಾಥನೇ, (ಪ್ರಲಯಸಮಯಸುಪ್ತಂ) ಪ್ರಲಯ ಕಾಲದಲ್ಲಿ (ಕಾರ್ಯ ಕಲಾಪವಿಲ್ಲದೆ) ನಿದ್ರಿಸಿದ್ದ (ಚಿದಚಿದಾಖ್ಯಂ) ಚಿತ್ತು ಮತ್ತು ಅಚಿತ್ತುಗಳಿಂದ ಕೂಡಿದ (ಸ್ವಂ ಶರೀರೈಕದೇಶಂ) ನಿನ್ನ ದೇಹದ ಏಕ ದೇಶವನ್ನು ಎಂದರೆ ಭಾಗವೊಂದನ್ನು (ಸ್ವೇಚ್ಛಯಾ) ನಿನ್ನ ಸಂಕಲ್ಪದಿಂದ (ವಿಸ್ತೃಣಾನಃ) ವಿವಿಧವೂ ವಿಚಿತ್ರವೂ ಆದ ಜಗತ್ತಿನ ರೂಪವಾಗಿ ಬೆಳೆಸುವವನಾಗಿ, (ಅನುಶಿಖಿನಿ) ಹೆಣ್ಣು ನವಿಲಿನ ಬಳಿಯಲ್ಲಿ (ಚಿತ್ರಂ) ನಾನಾ ವರ್ಣವಾದ (ಕಲಾಪಂ) ನವಿಲು ಗರಿಯನ್ನು (ಖಚಿತಮಿವ) ಆಕಾಶದ ವರೆಗೆ ಹರಡುವ ಹಾಗೆ (ಆತತ್ಯ) ಬಿಚ್ಚಿ (ಧೂನ್ವನ್) ಒದರುತ್ತಾ ಇರುವ (ಶಿಖೀವ) ಗಂಡು ನವಿಲಿನಂತೆ (ಶ್ರೀ ಸಮಕ್ಷಂ) ಶ್ರೀದೇವಿಯ ಮುಂದುಗಡೆ (ಕ್ರೀಡಸೇ) ನೀನು ಲೀಲೆಯನ್ನು ಆಡುತ್ತೀಯೆ.

ಭಗವಂತನ ಜಗತ್‌ಸೃಷ್ಟಿ ಎಂಥದು ಎಂದರೆ ಸೂಕ್ಷ್ಮವಾದ ಚಿದಚಿತ್ತುಗಳನ್ನು ಸ್ಥೂಲಚಿದಚಿದವಸ್ಥೆಗೆ ತರುವುದೇ ಆಗಿದೆ. ಗಂಡು ನವಿಲು ತನ್ನ ಮೈಯ್ಯೊಳಗೆ ಅಡಗಿಸಿಕೊಂಡ ನವಿಲುಗರಿಯನ್ನು ಬಿಚ್ಚಿ ಆಡುವಂತೆ ಭಗವಂತನು ತನ್ನಲ್ಲಿ ಅಡಗಿದ್ದ ಚೇತನಾಚೇತನಗಳನ್ನು ಸ್ಥೂಲವಾದ ರೂಪಕ್ಕೆ ತರುತ್ತಾನೆ. ಶ್ರೀದೇವಿಯೊಡನೆ ರಸಿಸುವ ಅವನು ಈ ಸೃಷ್ಟಿ ಮಾಡುತ್ತಾನೆ.

**ಭೂಯೋಭೂಯಸ್ತ್ವಯಿ ಹಿತಪರೇಪ್ಯುತ್ಪಥಾನಾತ್ಮನೀನ**
**ಸ್ರೋತೋಮಗ್ನಾನಪಿ ಪಥಿನಯನ್ ತ್ವಂ ದುರಾಶಾವಶೇನ ।**
**ರುಗ್ಣೇ ತೋಕೇ ಸ್ವ ಇವ ಜನನೀ ತತ್ಕಷಾಯಂ ಪಿಬಂತೀ**
**ತತ್ತದ್ವರ್ಣಾಶ್ರಮವಿಧಿವಶಃ ಕ್ಲಿಶ್ಯಸೇ ರಂಗರಾಜ ॥ ॥೪೫॥**

(ರಂಗರಾಜ) ಶ್ರೀ ರಂಗನಾಥನೇ, (ತ್ವಯಿ) ನೀನು (ಭೂಯೋಭೂಯಃ) ಮೇಲೆ ಮೇಲೆ (ಹಿತಪರೇ ಅಪಿ) ಚೇತನರಿಗೆ ಹಿತವನ್ನುಂಟು ಮಾಡುವುದರಲ್ಲಿಯೇ ಅಭಿಪ್ರಾಯವುಳ್ಳವನಾಗಿದ್ದರೂ (ಉತ್ಪಥ-ಅನಾತ್ಮನೀನ-ಸ್ರೋತಃ ಮಗ್ನಾನಪಿ) ಎಲ್ಲೆಯಿಲ್ಲದೆ ಆತ್ಮನಿಗೆ ದುಃಖ ತರುವ ದುಷ್ಕರ್ಮ ಪ್ರವಾಹದಲ್ಲಿ ಮುಳುಗಿರುವವರನ್ನೂ (ದುರಾಶಾವಶೇನ) ಯಾವುದೋ ದೂರದ ಆಶೆಯಿಂದ (ಪಥಿ) ಒಳ್ಳೆಯ ದಾರಿಯಲ್ಲಿ (ನಯನ್) ನಡೆಸಲಿಚ್ಛಿಸಿದವನಾಗಿ (ಸ್ವೇ ತೋಕೇರುಗ್ಣೇಸತಿ ತತ್ಕಷಾಯಂ ಪಿಬಂತೀ ಜನನೀ ಇವ) ತನ್ನ ಮಗು ರೋಗಕ್ಕೆ ತುತ್ತಾದಾಗ ಅದು ಕುಡಿಯಬೇಕಾದ ಕಷಾಯವನ್ನು ತಾನೇ ಕುಡಿಯುವ ತಾಯಿಯಂತೆ (ತತ್ತದ್ವರ್ಣಾಶ್ರಮ ವಿಧಿವಶಃ) ಆ ವರ್ಣಾಶ್ರಮಧರ್ಮಗಳನ್ನು ವಿಧಿಸುವ ಶಾಸ್ತ್ರಕ್ಕೆ ಪರವಶನಾಗಿ (ಕ್ಲಿಶ್ಯಸೇ) ನೀನೂ ಅನೇಕ ಕೆಲಸಗಳನ್ನು ಕೈಗೊಂಡು ಕಷ್ಟಪಡುತ್ತೀಯೆ.

ಈ ಲೋಕದ ಜನರಿಗೆ ಒಳ್ಳೆಯದನ್ನು ಮಾಡುವುದಕ್ಕಾಗಿ ಅವನು ಅವತಾರ ಮಾಡುವನು ಎನ್ನುವುದನ್ನು ಇಲ್ಲಿಂದ ಸೂಚಿಸಿದ್ದಾರೆ. ನೀನು ಅವತರಿಸಿ ಇತರರಿಗೆ ಅನುಷ್ಠಿಸಿ ತೋರುವುದಕ್ಕಾಗಿ ವರ್ಣಾಶ್ರಮ ಧರ್ಮ

ಗಳನ್ನು ಅನುಷ್ಠಿಸುತ್ತೀಯೆ—'ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ |' ಎಂದು ಹೇಳಿದಂತೆ. ತಾಯಿಯು ಕಷಾಯ ಕುಡಿದರೂ ಅದರ ಫಲ ಮಗುವಿಗೆ ಆಗುತ್ತದೆ. ಹಾಗೆ ಭಗವಂತನು ಕಷ್ಟಪಟ್ಟು ಲೋಕಕ್ಕೆ ಒಳ್ಳೆಯದನ್ನು ಮಾಡಲು ಯತ್ನಿಸುತ್ತಾನೆ. ಅವತಾರಗಳಿಂದ ಇವರನ್ನು ಹೇಗಾದರೂ ರಕ್ಷಿಸಬೇಕೆಂಬ ದುರಾಶೆಯಿಂದ ಅವತರಿಸಿ ಗುರುಕುಲ ವಾಸ, ವನವಾಸ, ಪತ್ನಿಯ ಅಗಲಿಕೆ ಇವನ್ನೆಲ್ಲಾ ಅವನು ಅನುಭವಿಸುತ್ತಾನೆ.

ಸಾರ್ವ, ತ್ವತ್ಕಂ ಸಕಲಚರಿತಂ ರಂಗಧಾಮನ್ ದುರಾಶಾ
ಪಾಶೇಭ್ಯಃ ಸ್ಯಾನ್ನ ಯದಿ ಜಗತಾಂ
ಜಾತು ಮೂರ್ಖೋತ್ತರಾಣಾಂ |
ನಿಸ್ತಂದ್ರಾಲೋಸ್ತವ ನಿಯಮತೋ ನರ್ತುಲಿಂಗ ಪ್ರವಾಹಾ
ಸರ್ಗಸ್ಥೇಮಪ್ರಭೃತಿಷು ಸದಾ ಜಾಗರಾ ಜಾಘಟೀತಿ || ||೭೬||

(ಸಾರ್ವ) ಎಲ್ಲರಿಗೂ ಹಿತಪರನಾದವನೇ, (ರಂಗಧಾಮನ್) ಶ್ರೀ ರಂಗ ನಾಥನೇ, (ತ್ವತ್ಕಂ) ನಿನ್ನದಾದ (ಸಕಲ ಚರಿತಂ) ಸೃಷ್ಟಿ ಮೊದಲಾದ ಸಕಲ ವ್ಯಾಪಾರವೂ (ದುರಾಶಾಪಾಶೇಭ್ಯಃ) ಫಲಿಸುವುದೋ ಏನೋ ಎಂಬ ಹುಸಿ ಆಶೆಯ ಕಾರಣದಿಂದ (ನ ಸ್ಯಾತ್ ಯದಿ) ಆಗದೆ ಇದ್ದ ಪಕ್ಷದಲ್ಲಿ(ಮೂರ್ಖೋತ್ತರಾಣಾಂ) ಮೂರ್ಖರು ತುಂಬ ಇರುವ (ಜಗತಾಂ) ಲೋಕಗಳ (ಸರ್ಗಸ್ಥೇಮಪ್ರಭೃತಿಷು) ಸೃಷ್ಟಿಸ್ಥಿತಿ ಮೊದಲಾದ ಕೆಲಸಗಳಲ್ಲಿ (ನಿಸ್ತಂದ್ರಾಲೋಃ ತವ) ಆಲಸಿಕೆ ಇಲ್ಲದ ನಿನ್ನ (ನಿಯಮತಃ ಋತುಲಿಂಗಪ್ರವಾಹಾ ಸದಾ ಜಾಗರಾ) ನಿಯತವಾದ ವಸಂತ ಋತುಗಳ ಹೂವು ಮೊದಲಾದ ಚಿಹ್ನೆಗಳನ್ನು ಹೋಲುವ ಪ್ರವಾಹನನ್ನುಳ್ಳ ನಿನ್ನ ನಿತ್ಯ ಸಂಕಲ್ಪವು (ಜಾತು) ಒಂದು ಕಾಲದಲ್ಲಿಯೂ (ನಜಾಘಟೀತಿ) ಸಂಗತವಾಗದೆ ಹೋಗುತ್ತದೆ.

ಚೇತನರ ರಕ್ಷಣೆಯೇ ಅಲ್ಲ. ಭಗವಂತನ ಸರ್ವ ವ್ಯಾಪಾರಗಳೂ ಹಾಗೆಯೇ ಲೋಕದ ಹಿತಕ್ಕಾಗಿಯೇ ಇವೆ. ಮೂರ್ಖರೇ ಹೆಚ್ಚಾದ ಈ ಲೋಕವನ್ನು ಮತ್ತೆಮತ್ತೆ ಸೃಜಿಸಿ ರಕ್ಷಿಸುವುದನ್ನು ನೋಡಿದರೆ ನೀನು ಆಲಸ್ಯ

ವಿಲ್ಲದೆ ಪಾಡು ಪಡುವುದು ಕಂಡುಬರುತ್ತದೆ. 'ಎಂದಾದರೂ ನನ್ನ ಪ್ರಯತ್ನ ಸಫಲವಾಗದೇ' ಎಂಬ ದೂರದ ಆಶೆಯಿಂದ ನೀನು ಪ್ರವರ್ತಿಸುವೆಯಷ್ಟೇ ? ಹಾಗಿಲ್ಲದಿದ್ದ ಪಕ್ಷದಲ್ಲಿ ಸೃಷ್ಟ್ಯಾದಿಗಳಲ್ಲಿ ನೀನು ಸ್ವಲ್ಪವೂ ಬೇಸರವಿಲ್ಲದೆ ಮತ್ತೆ ಮತ್ತೆ ಏಕೆ ತೊಡಗುತ್ತಿದ್ದೆ ? ಆತ್ಮೋಜ್ಜೀವನವನ್ನು ಸಾಧಿಸಬೇಕೆಂಬ ದೂರದ ಆಶೆಯೇ ನಿನ್ನ ಈ ಪ್ರಯತ್ನಗಳಿಗೆ ಕಾರಣ. ಆಯಾ ಋತುಗಳಲ್ಲಿ ಹೇಗೆ ಬೇರೆ ಬೇರೆ ಲಕ್ಷಣಗಳು ಉಂಟಾಗುವುವೋ ಹಾಗೆ ಭಗವಂತನು ಸ್ವಲ್ಪವೂ ವಿರಾಮವಿಲ್ಲದೆ ಈ ಸೃಷ್ಟ್ಯಾದಿ ವ್ಯಾಪಾರಗಳನ್ನು ನಡೆಸುತ್ತಲೇ ಇದ್ದಾನೆ.

ಸುಹೃದಿವ ನಿಗಲಾದ್ಯೈರುನ್ಮದಿಷ್ಣುಂ ನೃಶಂಸಂ
ತ್ವಮಪಿ ನಿರಯಪೂರ್ವೈಃ ದಂಡಯನ್ ರಂಗನೇತಃ ।
ತದಿತರಮಪಿ ಬಾಧಾತ್ ತ್ರಾಯಸೇ ಭೋಗ-ಮೋಕ್ಷ
ಪ್ರದಿರಪಿ ತವ ದಂಡಾಪೂಪಿಕಾತಃ ಸುಹೃತ್ತ್ವಂ ॥ ॥೪೭॥

(ರಂಗನೇತಃ) ಶ್ರೀ ರಂಗನಾಥನೇ, (ಉನ್ಮದಿಷ್ಣುಂ) ಉನ್ಮಾದ ಹೊಂದಿದವನನ್ನು (ನಿಗಲಾದ್ಯೈಃ) ಬೇಡಿ ಹಾಕುವುದೇ ಮೊದಲಾದುವುಗಳಿಂದ (ದಂಡಯನ್) ಶಿಕ್ಷಿಸುವ (ಸುಹೃದಿವ) ಸ್ನೇಹಿತನಂತೆ (ತ್ವಮಪಿ) ನೀನೂ ಸಹ (ನೃಶಂಸಂ) ಕ್ರೂರಿಯಾದವನನ್ನು (ನಿರಯಪೂರ್ವೈಃ) ನರಕದಲ್ಲಿಟ್ಟು ಶಿಕ್ಷಿಸುವುದೇ ಮೊದಲಾದವುಗಳಿಂದ (ದಂಡಯನ್) ದಂಡಿಸುವವನಾಗಿ (ತದಿತರಮಪಿ) ಅವನನ್ನು ಮತ್ತು ಅವನಿಗಿಂತ ಬೇರೆಯಾದವನನ್ನೂ (ಬಾಧಾತ್) ನರಕಬಾಧೆಯಿಂದ (ತ್ರಾಯಸೇ) ಕಾಪಾಡುತ್ತೀಯೆ. ಹೀಗೆ ಆದ ಮೇಲೆ (ಭೋಗ ಮೋಕ್ಷ ಪ್ರದಿಃ ಅಪಿ) ಭೋಗ ಮೋಕ್ಷಗಳನ್ನು ಅನುಗ್ರಹಿಸುವುದೂ (ದಂಡಾಪೂಪಿಕಾತಃ) ದಂಡಾಪೂಪ ನ್ಯಾಯದಿಂದ (ತವ) ನಿನ್ನ (ಸುಹೃತ್ತ್ವಂ) ಸೌಹಾರ್ದ ಕಾರ್ಯವೇ ಆಗುತ್ತದೆ.

ಭಗವಂತನು ಚೇತನರನ್ನು ನರಕಕ್ಕೆ ಏಕೆ ಹಾಕುವನು ಎಂದರೆ ಲೋಕದಲ್ಲಿ ಉನ್ಮತ್ತರಾದವರನ್ನು ಸುಹೃತ್ತುಗಳು ಬಂಧನದಲ್ಲಿಡುವಂತೆ.

ಅದೂ ಅವರಿಗೆ ಕ್ಷೇಮಾರ್ಥವಾಗಿಯೇ ಆಗುತ್ತದೆ. ಇವರಿಗೇ ಹೀಗಿರುವಾಗ ಇನ್ನು ಭೋಗಮೋಕ್ಷ ಪ್ರದಾನಗಳ ವಿಚಾರ ಹೇಳಬೇಕಾದುದೇನು? ಅವುಗಳೂ ಅವನ ಸುಹೃತ್ತ್ವ ಕಾರ್ಯವೇ ತಾನೇ. ಹಿತಪರನಾದ ಸ್ವಾಮಿ ಹೀಗೆ ಶಿಕ್ಷಣ ಕ್ರಮದಿಂದಲೂ ರಕ್ಷಣೆಯನ್ನೇ ಮಾಡುತ್ತಾನೆ. ದಂಡದ ಕೊನೆಯಲ್ಲಿ ಒಂದು ಅಪೂಪ ಅಥವಾ ಭಕ್ಷ್ಯವಿದೆಯೆಂದು ಇಟ್ಟುಕೊಳ್ಳೋಣ. ಆ ದಂಡವೇ ಕಳೆದು ಹೋಯಿತೆಂದರೆ ಅಪೂಪ ಇದ್ದೀತೆ! ಹಾಗೆಯೇ ಇಲ್ಲಿಯೂ ಸಹ ಶಿಕ್ಷೆಯೇ ರಕ್ಷೆಯಾಗುವುದಾದರೆ ಅವನನ್ನು ಭಜಿಸುವವರ ವಿಚಾರದಲ್ಲಿ ರಕ್ಷಣೆ ದೊರಕುವುದೆಂಡು ಮತ್ತೆ ಹೇಳಬೇಕೇ? ಉನ್ಮತ್ತನನ್ನು ಶಿಕ್ಷಿಸುವುದರಿಂದ ಅವನನ್ನು ರಕ್ಷಿಸುವುದು ಹೇಗೆಯೋ ಹಾಗೆ ಅನುಕೂಲರಾದ ಇತರರನ್ನೂ ಅವನು ರಕ್ಷಿಸಿಯೇ ರಕ್ಷಿಸುವನು. ಸರ್ವಭೂತ ಸುಹೃತ್ತಾದವನು ಭಗವಂತ ಎಂಬುದನ್ನು ಇದು ಪ್ರಕಾಶಪಡಿಸುತ್ತದೆ.

**ಧೃತಿ-ನಿಯಮನ-ರಕ್ಷಾ-ವೀಕ್ಷಣೈಃ ಶಾಸ್ತ್ರದಾನ**
**ಪ್ರಭೃತಿಭಿರಚಿಕಿತ್ಸ್ಯಾನ್ ಪ್ರಾಣಿನಃ ಪ್ರೇಕ್ಷ್ಯ ಭೂಯಃ ।**
**ಸುರಮನುಜತಿರಶ್ಚಾಂ ಸರ್ವಥಾ ತುಲ್ಯಧರ್ಮಾ**
**ತ್ವಮವತರಸಿ ದೇವೋಽಜೋಽಪಿ ಸನ್ನವ್ಯಯಾತ್ಮಾ ॥೪೮॥**

(ಧೃತಿನಿಯಮನ ರಕ್ಷಾ ವೀಕ್ಷಣೈಃ) ಎಲ್ಲವನ್ನು ಧರಿಸುವುದು, ಅಂತಃ ಪ್ರವೇಶಿಸಿ ನಿಯಮಿಸುವುದು ಮತ್ತು ರಕ್ಷಿಸುವುದು ಮೊದಲಾದ ಸಂಕಲ್ಪಗಳಿಂದಲೂ (ಶಾಸ್ತ್ರದಾನ ಪ್ರಭೃತಿಭಿಃ) ಶಾಸ್ತ್ರಗಳನ್ನು ಕರುಣಿಸುವುದು ಮೊದಲಾದ ಸಂಕಲ್ಪಗಳಿಂದಲೂ (ಅಚಿಕಿತ್ಸ್ಯಾನ್) ತಿದ್ದುವುದಕ್ಕಾಗದ (ಪ್ರಾಣಿನಃ) ಸಂಸಾರಿಗಳನ್ನು (ಪ್ರೇಕ್ಷ್ಯ) ನೋಡಿ (ಅಜಃ ಅವ್ಯಯಾತ್ಮಾ ದೇವಃ ಸನ್ ಅಪಿ) ಜನ್ಮವಿಲ್ಲದವನೂ ನಾಶವಿಲ್ಲದವನೂ ಆದ ದೇವನಾಗಿದ್ದರೂ (ಸುರ ಮನುಜತಿರಶ್ಚಾಂ) ದೇವ ಮನುಷ್ಯತಿರ್ಯಕ್ ಜಾತಿಗಳಿಗೆ (ಸರ್ವಥಾ) ಎಲ್ಲಾ ಪ್ರಾಕಾರಗಳಲ್ಲಿಯೂ (ತುಲ್ಯಧರ್ಮಾ ಸನ್) ಸಮಾನನಾಗಿ (ಭೂಯಃ) ಮತ್ತೆ ಮತ್ತೆ (ತ್ವಂ ಅವತರಸಿ) ನೀನು ವಿಭವಾವ

ತಾರಗಳನ್ನು ಮಾಡುತ್ತಿಯೆ.

ಭಗವದವತಾರಗಳನ್ನು ಇಲ್ಲಿ ನಿರೂಪಿಸಿದ್ದಾರೆ. ಧಾರಣ, ನಿಯಮನ, ರಕ್ಷಣೆ ಮೊದಲಾದ ಸಂಕಲ್ಪಗಳಿಂದಲೂ ಶಾಸ್ತ್ರೋಪದೇಶದಿಂದಲೂ ಸಂಸಾರರೋಗಕ್ಕೆ ಪರಿಹಾರವನ್ನು ಮಾಡಲು ಆಗದ ಕಾರಣ ಭಗವಂತನು ಇಲ್ಲಿ ವಿಭವಾವತಾರಗಳನ್ನು ತಾನೇ ಹೊಂದಿ ಆಯಾ ಜಾತಿಗಳಿಗನುಗುಣವಾದ ಧರ್ಮವನ್ನನುಷ್ಠಿಸುತ್ತಾ ಚೇತನರನ್ನು ಉದ್ಧರಿಸಲು ಉದ್ದೇಶಿಸುತ್ತಾನೆ. ಪ್ರಾಣಿಗಳ ಮೇಲಿನ ಕರುಣೆಯೇ ಭಗವಂತನ ಅವತಾರಕ್ಕೆ ಕಾರಣ. 'ಈ ಮನುಷ್ಯರನ್ನು ಹೇಗೆ ಸನ್ಮಾರ್ಗಕ್ಕೆ ತರಬಲ್ಲೆ' ಎಂದು ಯೋಚಿಸಿ ಭಗವಂತನು ಹೀಗೆ ತಾನೇ ಅವತರಿಸಿ ಅವರನ್ನು ತಿದ್ದಲು ಪ್ರಯತ್ನಿಸುತ್ತಾನೆ.

ಅನುಜನುರನುರೂಪ-ರೂಪ-ಚೇಷ್ಟಾ
ನ ಯದಿಸಮಾಗಮಮಿಂದಿರಾಕರಿಷ್ಯತ್ ।
ಅಸರಸಮಥವಾಪ್ರಿಯಂ ಭವಿಷ್ಣುಃ
ಧ್ರುವಮಕರಿಷ್ಯತ ರಂಗರಾಜ ನರ್ಮ ॥೮೯॥

(ರಂಗರಾಜ) ಎಲೈ ಶ್ರೀ ರಂಗನಾಥನೇ, (ಇಂದಿರಾ) ಶ್ರೀ ದೇವಿಯು (ಅನುಜನುಃ) ನಿನ್ನ ಅವತಾರವನ್ನನುಸರಿಸಿ (ಅನುರೂಪ ರೂಪಚೇಷ್ಟಾಸತೀ) ನಿನಗೆ ಸಮಾನವಾದ ರೂಪ ಮತ್ತು ಚೇಷ್ಟಿತ ಲೀಲೆಗಳನ್ನೊಳಗೊಂಡು (ಸಮಾಗಮಂ) ತಾನೂ ಅವತರಿಸಿ ನಿನ್ನೊಡನೆ ಸಮಾಗಮವನ್ನು (ನ ಅಕರಿಷ್ಯತ್ ಯದಿ) ಹೀಗೆ ಹೊಂದದೆ ಇದ್ದಿದ್ದರೆ (ತೇ) ನಿನ್ನ (ನರ್ಮ) ವಿಲಾಸ ಚೇಷ್ಟಿತವು (ಅಸರಸಂ) ರಸವಿಲ್ಲದುದಾಗಿಯೂ (ಅಥವಾ) ಅಥವಾ (ಅಪ್ರಿಯಂ ಭವಿಷ್ಣುಃ) ಪ್ರಿಯವಲ್ಲದುದಾಗಿಯೋ (ಅಕರಿಷ್ಯತ) ಮಾಡಿಬಿಡುತ್ತಿದ್ದಳು. (ಧ್ರುವಂ) ಇದು ನಿಶ್ಚಯ.

'ದೇವತ್ವೇ ದೇವದೇಹೇಯಂ ಮನುಷ್ಯತ್ವೇ ಚ ಮಾನುಷೀ' ಎಂದು ಹೇಳಿರುವಂತೆ ಭಗವಂತನು ಅವತಾರ ಮಾಡಿದಾಗ ದೇವಿಯೂ ಅವನೊಡನೆ

ಅವತರಿಸುತ್ತಾಳೆ. ಭಗವಂತನೊಡನೆ ಎಳ್ಳಷ್ಟು ಅಗಲಿಕೆಯನ್ನು ಅವಳು ಹೊಂದಿರುವವಳಲ್ಲ. ಹಾಗೆ ದೇವಿ ಬರದೆ ಇದ್ದಿದ್ದರೆ ಭಗವಂತನ ವಿಲಾಸ ಚೇಷ್ಟಿತವು ಅಪ್ರಿಯವೂ ಅಸ್ವರಸವೂ ಆಗಿಬಿಡುತ್ತಿತ್ತು. ಇದರಿಂದ ಭಗವಂತನು ಅವತರಿಸಿದಾಗ ದೇವಿಯೂ ಅವನೊಡನೆ ಅವತರಿಸುತ್ತಾಳೆ ಎಂದು ಹೇಳಿದಂತಾಯಿತು.

ಗರೀಯಸ್ತ್ವಂ ಪರಿಜಾನಂತಿ ಧೀರಾಃ
ಪರಂ ಭಾವಂ ಮನುಜತ್ವಾದಿಭೂಷ್ವಣ್ |
ಅಜಾನಂತಸ್ತ್ವವಜಾನಂತಿ ಮೂಢಾ
ಜನಿಷ್ಣುಂ ತೇ ಭಗವನ್ ಜನ್ಮ ಕರ್ಮ ||೫೦||

(ಭಗವನ್) ಸ್ವಾಮಿಯೇ, (ಧೀರಾಃ) ಒಳ್ಳೆಯ ಭಕ್ತಿಯನ್ನುಳ್ಳ ಜ್ಞಾನಿಗಳು (ಗರೀಯಸ್ತ್ವಂ) ನಿನ್ನ ಪರತ್ವವನ್ನು (ಪರಿಜಾನಂತಿ) ಚೆನ್ನಾಗಿ ತಿಳಿಯುತ್ತಾರೆ. (ಮೂಢಾಸ್ತು) ಮೂರ್ಖರಾದ ಸಂಸಾರಿಗಳೋ ಎಂದರೆ (ಮನುಜತ್ವಾದಿಭೂಷ್ವಣ್) ಮನುಷ್ಯ ಜಾತಿಯೇ ಮೊದಲಾದ ಎಲ್ಲಾ ಜಾತಿಗಳಲ್ಲಿಯೂ ಜನಿಸುವ (ಪರಂಭಾವಂ) ಪರತ್ವವನ್ನು (ಅಜಾನಂತಃ) ಅರಿಯಲಾರದವರಾಗಿ (ಜನಿಷ್ಣುಂ) ಸಾಂಸಾರ ನಿವರ್ತಕವಾದ (ತೇ) ನಿನ್ನ (ಜನ್ಮ ಕರ್ಮ) ಅವತಾರವನ್ನೂ ದಿವ್ಯಚೇಷ್ಟಿತಗಳನ್ನೂ (ಅವಜಾನಂತಿ) ನಿಹೀನವಾಗಿ ತಿಳಿಯುತ್ತಾರೆ.

ಅವನ ಅವತಾರ ರಹಸ್ಯ ಧೀರರಿಗೆ ಗೊತ್ತು. 'ತಸ್ಯಧೀರಾ: ಪರಿಜಾನಂತಿ ಯೋನಿಂ' ಎಂದೂ 'ಅವಜಾನಂತಿ ಮಾಂ ಮೂಢಾಃ ಮಾನುಷೀಂತನು ಮಾಸ್ಥಿತಂ' ಎಂದೂ ಈ ಅಂಶಗಳನ್ನು ಹೇಳಿದೆ. ಯಾರು ಭಗವಂತನ ಅವತಾರ ರಹಸ್ಯವನ್ನರಿಯುವರೋ ಅವರು ಆ ದೇಹದ ಕೊನೆಯಲ್ಲಿ ಭಗವಂತನನ್ನೇ ಸೇರುವರು ಎಂಬುದನ್ನು ಸ್ವಾಮಿಯೇ ಹೇಳಿದ್ದಾನೆ – 'ಜನ್ಮ ಕರ್ಮ ಚ ಮೇ ದಿವ್ಯಂ ಏವಂ ಯೋ ವೇತ್ತಿ ತತ್ತ್ವತಃ | ತ್ಯಕ್ತ್ವಾ ದೇಹಂ

ಪುನರ್ಜನ್ಮ ನೈತಿ ಮಾಮೇತಿ ಸೋಽರ್ಜುನ||'ಎಂಬುದಾಗಿ. ಅವತಾರ ಸಮಯದಲ್ಲಿ ಅವನು ಇತರರಂತೆಯೇ ನಡೆದುಕೊಂಡನು-'ಕತ್ತಿನಂ ಮೇಯ್‌ಕ್ಕಲುಂ ಮೇಯ್‌ಕ್ಕಪ್ಪೆತ್ತಾನ್; ಕಾಡುವಾಳ್ಳಿ ಶಾತಿಯುಮಾಹಪ್ಪೆತ್ತಾನ್, ಪತ್ತಿ ಉರಲಿಡೈ ಆಪ್ಪುಮುಂಡಾನ್-' ಇದರಿಂದ ಅವನೂ ಸಾಮಾನ್ಯ ಮನುಷ್ಯನೇ ಎಂದು ಜನ ಭಾವಿಸಿದರು. ಆದರೆ ಅವನ ಪರತ್ವವನ್ನು ಅರಿತವರು ಮಹಾನುಭಾವರು.

**ಮಧ್ಯೇ ವಿರಿಂಚಗಿರಿಶಂ ಪ್ರಥಮಾವತಾರಃ**
**ತತ್ಸಾಮ್ಯತಃ ಸ್ಥಗಯಿತುಂ ತವಚೇತ್ ಸ್ವರೂಪಂ ।**
**ಕಿಂ ತೇ ಪರತ್ವಪಿಶುನೈರಿಹ ರಂಗಧಾಮನ್**
**ಸತ್ವಪ್ರವರ್ತನ- ಕೃಪಾಪರಿಪಾಲನಾದ್ಯೈಃ ||೫೧||**

(ರಂಗಧಾಮನ್) ಶ್ರೀ ರಂಗನಾಥನೇ, (ಮಧ್ಯೇ ವಿರಿಂಚಗಿರಿಶಂ) ಬ್ರಹ್ಮರುದ್ರರ ನಡುವೆ (ತವ) ನಿನಗುಂಟಾದ (ಪ್ರಥಮಾವತಾರಃ) ಮೊದಲನೆಯ ಅವತಾರವಾದುದು (ತತ್ಸಾಮ್ಯತಃ) ಆ ಬ್ರಹ್ಮ ರುದ್ರರುಗಳೊಡನೆ ಸಾಮ್ಯದ ಕಾರಣವನ್ನು ತೋರಿಸಿ (ಸ್ವರೂಪಂ) ನಿನ್ನ ಪರತ್ವದ ಸ್ವರೂಪವನ್ನು (ಸ್ಥಗಯಿತುಂಚೇತ್) ಮರೆಸಿಕೊಳ್ಳುವುದಕ್ಕಾದರೆ (ತೇ) ನಿನ್ನ (ಪರತ್ವಪಿಶುನೈಃ) ಪಾರಮ್ಯವನ್ನು ಚಾಡಿ ಹೇಳುವಂತಹ (ಸತ್ವಪ್ರವರ್ತನ ಕೃಪಾ ಪರಿಪಾಲನಾದ್ಯೈಃ) ವೇದೋಪದೇಶ ಯೋಗೋಪದೇಶರೂಪವಾದ ಸತ್ವ ಪ್ರವರ್ತನವೇನು, ಕೃಪೆಯಿಂದ ರಕ್ಷಿಸುವುದೇನು ಇವೇ ಮೊದಲಾದ ಕಾರ್ಯಗಳಿಂದ (ಇಹ ಕಿಂ) ಇಲ್ಲಿ ಪ್ರಯೋಜನವೇನು ?

ಬ್ರಹ್ಮಶಿವರ ನಡುವೆ ಭಗವಂತನು ವಿಷ್ಣುವಾಗಿ ಅವತರಿಸಿರುವುದುಂಟು. ಹೀಗೆ ಅವತರಿಸಿರುವುದು ಏತಕ್ಕೆ ಎಂದು ವಿಚಾರಿಸಿದ್ದಾರೆ. ಭಗವಂತನು ತನ್ನ ಪರಸ್ವರೂಪವನ್ನು ಮರೆಯಿಸಿಕೊಳ್ಳುವುದಕ್ಕೆ ಹೀಗೆ ಅವತಾರ ಮಾಡಿರುವುದಾದರೆ ಅವನು ತನ್ನ ಪರತ್ವ ಸೂಚನವಾದುವೂ ಸ್ವಸ್ವರೂಪಾ

ವಿಸ್ಮಾರ ಮಾಡುವುವೂ ಆದ ವ್ಯಾಪಾರಗಳನ್ನು ಮಾಡಿದುದು ಏಕೆ? ಅವನ ಸ್ವರೂಪವನ್ನು ಅವನೂ ಮರೆಯಿಸಿಕೊಳ್ಳುವುದಕ್ಕೆ ಆಗುವುದಿಲ್ಲವೆಂದೂ ಅವನು ತನ್ನ ಸೌಲಭ್ಯವನ್ನು ತೋರಿಸುವುದಕ್ಕಾಗಿಯೇ ಹೀಗೆ ಅವರ ಮಧ್ಯೆ ಅವತರಿಸಿದ್ದಾನೆ ಎಂದೂ ತಿಳಿಯಬೇಕು. ವೇದೋಪದೇಶ ಮಾಡಿದುದು, ಆ ವೇದಕ್ಕೆ ಅಪಾಯ ಬಂದಾಗ ಅದನ್ನು ರಕ್ಷಿಸಿದುದು ಮೊದಲಾದ ವ್ಯಾಪಾರಗಳು ಅವನ ಪರತ್ವವನ್ನೇ ಪ್ರದರ್ಶಿಸುತ್ತವೆ.

ಮಧುಃ ಕೈಟಭಶ್ಚೇತಿ ರೋಧಂ ವಿಧೂಯ
ತ್ರಯೀದಿವ್ಯಚಕ್ಷುರ್ವಿಧಾತುರ್ವಿಧಾಯ ।
ಸ್ಮರಸ್ಯಂಗರಂಗಿನ್ ತುರಂಗಾವತಾರಃ
ಸಮಸ್ತಂ ಜಗಜ್ಜೀವಯಿಷ್ಯಸ್ಯಕಸ್ಮಾತ್ ॥೫೨॥

(ಅಂಗರಂಗಿನ್) ರಂಗನಾಥನೇ, (ತುರಂಗಾವತಾರಃ) ಹಯಗ್ರೀವ ರೂಪಿಯಾಗಿ (ಮಧುಃ ಕೈಟಭಶ್ಚೇತಿ) ಮಧು ಎಂದೂ ಕೈಟಭ ಎಂದೂ ಹೇಳಲ್ಪಟ್ಟ (ರೋಧಂ) ಪ್ರತಿಬಂಧಕವನ್ನು (ವಿಧೂಯ) ಹೋಗಲಾಡಿಸಿ (ವಿಧಾತುಃ) ಬ್ರಹ್ಮನಿಗೆ (ತ್ರಯೀದಿವ್ಯಚಕ್ಷುಃ) ವೇದಗಳೆನ್ನುವ ಶ್ರೇಷ್ಠವಾದ ಕಣ್ಣನ್ನು (ವಿಧಾಯ) ಕೊಟ್ಟು (ಅಕಸ್ಮಾತ್) ನಿರ್ಹೇತುಕವಾಗಿ (ಸಮಸ್ತಂ ಜಗತ್) ಸಮಸ್ತ ಜಗತ್ತನ್ನೂ (ಸ್ಮರಸಿ ಜೀವಯಿಷ್ಯಸಿ) ಸ್ಮರಿಸಿಕೊಂಡು ಬದುಕಿಸುವೆ.

ವೇದ ಪ್ರವರ್ತನ ಮಾಡಿದ ಅವತಾರವನ್ನು ಇಲ್ಲಿ ಹೇಳಿದೆ. ವೇದಗಳನ್ನು ಮಧುಕೈಟಭರು ಅಪಹರಿಸಿದಾಗ ಭಗವಂತನು ಹಯಗ್ರೀವಾವತಾರಮಾಡಿ ಅವರನ್ನು ನಿರಸನಮಾಡಿ ವೇದಗಳನ್ನು ಬ್ರಹ್ಮದೇವನಿಗೆ ಅನುಗ್ರಹಿಸಿದನು. 'ಏಕೋ ವಿದ್ಯಾಸಹಾಯಸ್ತ್ವಂ' ಎಂದು ಹೇಳಿರುವಂತೆ ಶ್ರೀಮನ್ನಾರಾಯಣನು ವೇದಗಳನ್ನು ಸಂರಕ್ಷಿಸಿ, ಮತ್ತೆ ಬ್ರಹ್ಮನಿಗೆ ಅವುಗಳನ್ನು ಕೊಟ್ಟು ಉಪಕಾರ ಮಾಡಿದನು.

ರಂಗಧೇ ತಿಮಿರ-ಘಸ್ಮರ-ಶೀತಸ್ವಚ್ಛ-ಹಂಸತನುರಿಂದುರಿವೋದ್ಯನ್ ।
ವೇದಭಾಭಿರನುಜಗ್ರಹಿಥಾರ್ತಾನ್ ಜ್ಞಾನಯಜ್ಞ-
ಸುಧಯೈವ ಸಮೃಧ್ಯನ್ ॥೫೩॥

(ರಂಗಧೇ) ಶ್ರೀ ರಂಗನಾಥನೇ, (ಜ್ಞಾನಯಜ್ಞಸುಧಯಾ ಏವ) ಜ್ಞಾನಯಜ್ಞವಾಗುವ ಅಮೃತದಿಂದಲೇ (ಸಮೃಧ್ಯನ್) ಪರಿಪೂರ್ಣನಾಗಿ (ಇಂದುಃ ಇವ) ಚಂದ್ರನಂತೆ (ತಿಮಿರ ಘಸ್ಮರ ಶೀತ ಸ್ವಚ್ಛ ಹಂಸತನುಃ) ಅಜ್ಞಾನಾಂಧಕಾರವನ್ನು ನುಂಗುವ ತಂಪಾದ ಸ್ವಚ್ಛವಾದ ಹಂಸದ ಶರೀರ ವನ್ನು ಹೊಂದಿದವನಾಗಿ (ಉದ್ಯನ್) ಅವತರಿಸಿ (ಆರ್ತಾನ್) ಕಷ್ಟದಲ್ಲಿರು ವವರನ್ನು (ವೇದಭಾಭಿಃ) ವೇದದ ಪ್ರಕಾಶಗಳಿಂದ (ಅನುಜಗ್ರಹಿಥ) ಅನುಗ್ರಹಿಸಿದೆ.

ಈ ಶ್ಲೋಕದಲ್ಲಿ ಹಂಸಾವತಾರವನ್ನು ವರ್ಣಿಸಿದೆ. ಕೆಲವು ಪುರಾಣಗಳಲ್ಲಿ ಹಂಸಾವತಾರದಲ್ಲಿ ವೇದವನ್ನು ಉದ್ಧರಿಸಿದನೆಂದೂ ಹೇಳುವುದಕ್ಕನುಸಾರ ಇಲ್ಲಿ ಹೇಳಿದೆ. 'ಪನ್ನು ಕಲೈ ನಾಲ್ವೇದಪ್ಪೊರುಳೈ ಎಲ್ಲಾಂ ಪರಿ ಮುಹ ಮಾಯ್ ಅರುಳಿನ ಎನ್ ಪರಮನ್' ಎಂದೂ 'ಅನ್ನಮಾಯ್ ಅಂಗು ಅರುಮರೈ ಪಯಂದಾನ್' ಎಂದೂ ಆಳ್ವಾರರುಗಳು ಹೇಳಿದ್ದಾರೆ. ಬೆಳ್ಳಗಿರುವ ಹಂಸವನ್ನು ಚಂದ್ರೋದಯಕ್ಕೆ ವರ್ಣಿಸಿದೆ. ಅಂಧಕಾರ ನಿವರ್ತಕತ್ವ, ಶೈತ್ಯ ಮೊದಲಾದವು ಹಂಸನಿಗೂ ಚಂದ್ರನಿಗೂ ಸಮಾನವಾಗಿವೆ. ವೇದವನ್ನು ಬ್ರಹ್ಮನಿಗೆ ಉಪದೇಶಿಸಿದರೂ ಅವನ ಮೂಲಕ ಲೋಕಕ್ಕೇ ಉಪಕಾರ ಮಾಡಿದನು ಅವನು. 'ಅನ್ನಮಾಯ್ ಮುನಿವರೋಡು ಅಮರರ್ ಏತ್ತ ಅರು ಮರೈಹಳ್‌ವಳಿಪ್ಪಡುತ್ತ ಅಮ್ಮಾನ್' ಎಂದು ಹಂಸಾವತಾರವನ್ನು ಪ್ರಸ್ತಾಪ ಮಾಡಿದುದನ್ನು ಕಾಣಬಹುದು.

ವಟದಲಮಧಿಶಯ್ಯ ರಂಗಧಾಮನ್
ಶಯಿತ ಇವಾರ್ಣವತರ್ಣಕಃ ಪದಾಬ್ಜಂ ।

**ಅಧಿಮುಖಮುದರೇ ಜಗಂತಿ ಮಾತುಂ**
**ನಿದಧಿಥ ವೈಷ್ಣವಭೋಗ್ಯಲಿಪ್ಸಯಾ ವಾ** ||೫೪||

(ರಂಗಧಾಮನ್) ಶ್ರೀರಂಗನಾಥನೇ, (ಶಯಿತಃ) ಶಯನಿಸಿದ (ಅರ್ಣವತರ್ಣಕಃ ಇವ) ಸಮುದ್ರದ ಮಗುವಿನಂತೆ (ವಟದಲಂ) ಆಲದೆಲೆಯ ಮೇಲೆ (ಅಧಿಶಯ್ಯ) ಮಲಗಿಕೊಂಡು (ಅಭಿಮುಖಂ) ಬಾಯಿಯಲ್ಲಿ (ಪದಾಬ್ಜಂ) ಪಾದಾರವಿಂದವನ್ನು (ನಿದಧಿಥ) ಇಟ್ಟುಕೊಂಡೆ. ಇದು (ಉದರೇ) ನಿನ್ನ ಹೊಟ್ಟೆಯಲ್ಲಿ (ಜಗಂತಿ) ಲೋಕಗಳನ್ನು (ಮಾತುಂವಾ) ಅಳೆಯುದಕ್ಕಾಗಿಯೋ ಅಥವಾ (ವೈಷ್ಣವ ಭೋಗ್ಯಲಿಪ್ಸಯಾ ವಾ) ಶ್ರೀ ವೈಷ್ಣವರಿಗೆ ಭೋಗ್ಯವಾದ ಮಧುವನ್ನು ಪಾದದಿಂದ ಪಡೆಯಬೇಕೆಂಬ ಆಸೆಯಿಂದಲೋ?

'ಆಲಮಾಮರತ್ತಿನಿಲೈಮೇಲ್ ಒರು ಪಾಲಹನಾಯ್ ಞಾಲ ಮೇೞುಂ ಉಂಡಾನ್ ಅರಂಗತ್ತರವಿನಣೈಯಾನ್' ಎಂದು ಹೇಳಿದಂತೆ ವಟಪತ್ರಶಾಯಿಯನ್ನು ಇಲ್ಲಿ ಕೊಂಡಾಡಿದ್ದಾರೆ. 'ಪಾದಗಳಿಂದ ಅಳೆದುಕೊಂಡ ಲೋಕಗಳೆಲ್ಲ ಉದರದೊಳಗಿದ್ದುದರಿಂದ ಆ ಪಾದವನ್ನು ಬಾಯೊಳಗಿಟ್ಟು ಕೊಂಡು ತನ್ನೊಳಗಿರುವ ಆ ಲೋಕಗಳನ್ನು ಅಳೆಯುವ ಉದ್ದೇಶದಿಂದಲೋ ಅಥವಾ 'ವಿಷ್ಣೋಃ ಪದೇ ಪರಮೇ ಮಧ್ವ ಉತ್ಸಃ' ಎಂದಂತೆ ಈ ಪಾದದಲ್ಲಿನ ಮಧು ಪ್ರವಾಹದ ಆಸ್ವಾದವನ್ನು ಹೊಂದಬೇಕೆಂಬ ಆಶೆಯಿಂದಲೋ ನೀನು ಹೀಗೆ ನಿನ್ನಪಾದಾರವಿಂದವನ್ನು ಬಾಯಲ್ಲಿಟ್ಟುಕೊಂಡುದು ?' ಎಂದು ಇಲ್ಲಿ ಕೇಳಿದ್ದಾರೆ. ಪೆರಿಯಾಳ್ವಾರ್ರವರು

'ಶೀತಕ್ಕಡಲ್ ಉಳ್ಳಮುದನ್ನ, ದೇವಕಿ ಕೋದೈಕ್ಕುೞ—
ಲಾಳಶೋದೈಕ್ಕು ಪೋತ್ತಂದ ಪೇದೈಕ್ಕುೞವಿ ಶುವೈತ್ತು
ಉಣ್ಣುಂ ಪಾದಕ್ಕಮಲಂಗಳ್ ಕಾಣೀರೇ, ಪವಳವಾಯೀರ್
ವಂದು ಕಾಣೀರೇ' ಎಂದು ಅನುಭವಿಸಿರುವುದನ್ನು ಕಾಣಬಹುದು.

**ಉನ್ಮೂಲ್ಯಾಹರ ಮಂದರಾದ್ರಿಮಹಿನಾ ತಂ ಸಂಬಧಾನಾಮುನಾ**
**ದೋರ್ಭಿಶ್ಚಂಚಲಮಾಲಿಕೈಶ್ಚ ದಧಿನಿರ್ಮಾಥಂ**
**ಮಥಾನಾಂಬುಧಿಂ** |

**ಶ್ರೀ ರಂಗೇಶ್ವರ ಚಂದ್ರಕೌಸ್ತುಭಸುಧಾ ಪೂರ್ವಂ ಗೃಹಾಣೇತೀ ತೇ ಕುರ್ವಾಣಸ್ಯ ಫಲೇಗ್ರಹಿರ್ಹಿ ಕಮಲಾಲಾಭೇನ ಸರ್ವಶ್ರಮಃ ॥ ॥೫೫॥**

(ಶ್ರೀ ರಂಗೇಶ್ವರ) ಶ್ರೀ ರಂಗನಾಥನೇ, (ಮಂದರಾದ್ರಿಂ) ಮಂದರ ಪರ್ವತವನ್ನು (ಉನ್ಮೂಲ್ಯ) ಬುಡಸಹಿತ ಕಿತ್ತು (ಆಹರ) ತಂದೆ. (ತಂ) ಆ ಬೆಟ್ಟವನ್ನು (ಅಮುನಾ) ಪ್ರಸಿದ್ಧವಾದ (ಅಹಿನಾ) ವಾಸುಕಿ ಎನ್ನುವ ಸರ್ಪದಿಂದ (ಸಂಬಧಾನ) ಕಟ್ಟಿದೆ. (ಚಂಚಲ ಮಾಲಿಕೈಃ) ಧರಿಸಿದ್ದ ಮಾಲೆಗಳು ಅಲುಗಾಡುತ್ತಿರಲು (ದೋರ್ಭಿಃ) ಶ್ರೀ ಹಸ್ತಗಳಿಂದ (ಅಂಬುಧಿಂ) ಕಡಲನ್ನು (ದಧಿನಿರ್ಮಾಥಂ) ಮೊಸರನ್ನು ಕಡೆಯುವ ಹಾಗೆ (ಮಥಾನ) ಕಡೆದೆ. (ಚಂದ್ರಕೌಸ್ತುಭ ಸುಧಾ ಪೂರ್ವಂ) ಚಂದ್ರ, ಕೌಸ್ತುಭ, ಅಮೃತ ಮೊದಲಾದವನ್ನು (ಗೃಹಾಣ) ಗ್ರಹಿಸಿದೆ. (ಇತಿ) ಹೀಗೆ (ಕುರ್ವಾಣಸ್ಯ) ಕೆಲಸ ಮಾಡುವ (ತೇ) ನಿನ್ನ (ಸರ್ವಶ್ರಮಃ) ಶ್ರಮವೆಲ್ಲವೂ (ಕಮಲಾ ಲಾಭೇನ) ಶ್ರೀ ದೇವಿಯನ್ನು ಪಡೆದುದರಿಂದ (ಫಲೇಗ್ರಹಿ: ಹಿ) ಸಫಲವಾಯಿತು ಅಲ್ಲವೇ?

'ವಿಣ್ಣವರ್ ಅಮುದುಣ ಅಮುದಿಲ್‌ವರುಂ ಪೆಣ್ಣಮುದುಂಡ ಎಂಬೆರುಮಾನೇ' ಎಂದು ತಿರುಮಂಗೈ ಆಳ್ವಾರ್ ಅವರು ಹೇಳಿದಂತೆ ಶ್ರೀ ದೇವಿ ಎಂಬುವ ನಿರ್ದುಷ್ಟವಾದ ಅಮೃತವನ್ನು ಪಡೆದುದರಿಂದ ಅವನ ಶ್ರಮ ಸಫಲವಾಯಿತು. ಭಗವಂತನು ಅಮೃತಮಥನ ಮಾಡಿದ ವೈಭವವನ್ನು ತಿರುಮಂಗೈಆಳ್ವಾರ್‌ರವರು 'ಮಾ ಇರು ಕುನ್ರಂ ಒನ್ರು ಮತ್ತಾ ಆಹ ಮಾಶುಣಂ ಅದನೊಡುಂ ಅಳವಿ, ಪಾ ಇರು ಪೌವಮ್ (ಸಮುದ್ರ) ಪಹಡು ವಿಂಡು ಅಲರ ಪಡು ತಿರೈ ವಿಶುಂಬಿಡೈ ಪಡರ, ಶೇ ಇರು ವಿಶುಂಬುಂ ತಿಂಗಳುಂ ಶುಡರುಂ ತೇವರುಂ ತಾಮುಡ್ರ ತಿಶೈಪ್ಪ, ಆಯಿರಂತೋಳಾಲ್ ಅಲೈಕಡಲ್ ಕಡೈಂದಾನ್ ಅರಂಗಂ ಮಾ ನಹರ್ ಅಮರ್‌ನ್ದಾನೇ' ಎಂದು ವರ್ಣಿಸಿರುವುದಕ್ಕನುಸಾರವಾಗಿ ಈ ವರ್ಣನೆ ಇರುವುದನ್ನು ಕಾಣಬಹುದು.

ದೇವೀ ಹಸ್ತಾಂಬುಜೇಭ್ಯಶ್ಚರಣಕಿಸಲಯೇ ಸಂವಹದ್ಭ್ಯೋಽಪಹೃತ್ಯ
ಪ್ರತ್ಯಸ್ಯಾನಂತಭೋಗಂ ಝಟಿತಿ ಚಲಪುಟೇಚಕ್ಷುಷೀ ವಿಸ್ತೃಣಾನಃ।
ಆಕ್ಷಿಪ್ಯೋರಶ್ಚ ಲಕ್ಷ್ಮ್ಯಾಃಸ್ತನ ಕಲಶಕನತ್ಕುಂಕುಮಸ್ತೋಮ
ಪಂಕಾತ್
ದೇವಃ ಶ್ರೀ ರಂಗಧಾಮಾ ಗಜಪತಿಘುಷಿತೇ
ವ್ಯಾಕುಲಸ್ತಾತ್ಪುರೋ ನಃ ॥ ॥೫೬॥

(ಗಜಪತಿಘುಷಿತೇ ಸತಿ) ಗಜೇಂದ್ರನು ಕೂಗಿಕೊಂಡ ಸಮಯದಲ್ಲಿ (ಸಂವಹದ್ಭ್ಯಃ) ಪಾದಗಳನ್ನು ಒತ್ತುತ್ತಿದ್ದ (ದೇವೀ ಹಸ್ತಾಂಬುಜೇಭ್ಯಃ) ದೇವಿಯುವರ ಕರಕಮಲಗಳಿಂದ (ಚರಣಕಿಸಲಯೇ) ಚಿಗುರುಗಳಂತಿರುವ ಶ್ರೀಪಾದಗಳನ್ನು (ಅಪಹೃತ್ಯ) ಎಳೆದುಕೊಂಡು (ಅನಂತ ಭೋಗಂ) ಆದಿ ಶೇಷನ ಮೈಯನ್ನು (ಝಟಿತಿ) ತಕ್ಷಣ (ಪ್ರತ್ಯಸ್ಯ) ಬಿಟ್ಟು ಬಿಟ್ಟು (ಲಕ್ಷ್ಮ್ಯಾಃ) ಶ್ರೀದೇವಿಯ (ಸ್ತನಕಲಶ ಕನತ್ಕುಂಕುಮಸ್ತೋಮ ಪಂಕಾತ್) ವಕ್ಷಃಸ್ಥಲದಲ್ಲಿ ಪ್ರಕಾಶಿಸುವ ಕುಂಕುಮ ಲೇಪದಿಂದ (ಉರಃ) ತನ್ನ ವಕ್ಷಃಸ್ಥಲವನ್ನು (ಆಕ್ಷಿಪ್ಯ ಚ) ಬೇರೆ ಮಾಡಿಕೊಡು (ಚಲಪುಟೇ) ಚಲಿಸುವ ರೆಪ್ಪೆಗಳುಳ್ಳ (ಚಕ್ಷುಷೀ) ನೇತ್ರಗಳನ್ನು (ವಿಸ್ತೃಣಾನಃ) ವಿಸ್ತಾರವಾಗಿ ಅರಳಿಸಿದವನಾಗಿ (ವ್ಯಾಕುಲಃ) ಮನಸ್ಸು ಕದಡಿದವನಾದ (ಶ್ರೀ ರಂಗಧಾಮಾ ದೇವಃ) ದೇವನಾದ ಶ್ರೀ ರಂಗನಾಥನು (ನಃ ಪುರಃ) ನಮ್ಮ ಕಣ್ಮುಂದೆಯೇ (ಸ್ತಾತ್) ನಿಲ್ಲುವಂತಾಗಲಿ.

ಗಜೇಂದ್ರನು ಆರ್ತಿಯಿಂದ ಕೂಗಿ ಕರೆದಾಗ ಸ್ವಾಮಿ ಸ್ವಲ್ಪವೂ ತಡ ಮಾಡದೆ ಹೇಗೆ ಅವನ ರಕ್ಷಣೆಗೆ ಧಾವಿಸಿದನೆಂಬುದನ್ನು ಇಲ್ಲಿ ವರ್ಣಿಸಿದೆ. ತಿರುಮಂಗೈ ಆಳ್ವಾರ್ ಅನುಭವಿಸಿದಂತೆ ಗಜೇಂದ್ರನ ದುಃಖವನ್ನು ಹೋಗಲಾಡಿಸಲು ಸ್ವಾಮಿ ಬಂದುದನ್ನು ಇಲ್ಲಿ ವಿವರಿಸಿದೆ. 'ಪೋರಾನೈ ಪೊಯ್ಹೈವಾಯ್ ಕೋಳ್ಪಟ್ಟು ನಿನ್ರು ಅಲರಿ ನೀರಾರ್ ಮಲರ್ ಕಮಲಂಕೊಂಡು ಓರ್ ನೆಡುಂಗೈಯಾಲ್ ನಾರಾಯಣಾವೋ ಮಣಿವಣ್ಣಾ ನಾಹಣೈಯಾಯ್ ವಾರಾಯ್ ಎನ್ ಆರಿಡರೈ ನೀಕ್ಕಾಯ್' ಎಂದು ಬೇಡಿದಾಗ ಅವನ

ಮುಂದೆ ಬಂದು ನಿಂತ ಹಾಗೆ ನನ್ನ ಮುಂದೆ ಬಂದು ನಿಲ್ಲಬೇಕು ಎಂದು ಬೇಡಿದ್ದಾರೆ. ಗಜೇಂದ್ರವರದನನ್ನು ಇಲ್ಲಿ ಹೀಗೆ ಸ್ತುತಿಸಿದ್ದಾರೆ. ತಿರು ಮಂಗೈ ಆಳ್ವಾರ್ರವರು 'ಕಡಿಹೊಳ್ ಪೂಂಪೊಳ್ಳಿಲ್ ಕಾಮರು ಪೊಯ್‌ಹೈ ವೈಹುತಾಮರೈ ವಾಂಗಿಯ ವೇಳ್ಳಂ ಮುಡಿಯುಂ ವಣ್ಣಂ ಓರ್ ಮುಳ್ಳಾವಲಿ ಮುದಲೈಪತ್ತ, ಮತ್ತದು ನಿರ್ ಶರಣ್ ನಿನ್ನೈಪ್ಪ, ಕೊಡಿಯುವಾಯ್ ವಿಲಂಗಿ ನುಯಿರ್ ಮಲಂಗ, ಕೊಂಡಶೀತ್ತಂ ಒನ್ರು ಉಂಡುಳದರಿಂದು, ಉನ್ ಅಡಿಯನೇನುಂ ವಂದು ಅಡಿಯಿಣ್ಯೈ ಅಡೈಂದೇನ್ ಅಣಿಪೊಳ್ಳಿಲ್ ತಿರುವರಂಗತ್ತ ಮ್ಮಾನೇ' ಎಂದು ಅನುಭವಿಸಿದ್ದಾರೆ.

ಅತಂತ್ರಿತ-ಚಮೂಪತಿ-ಪ್ರಹಿತಹಸ್ತಮಸ್ವೀಕೃತ-
ಪ್ರಣೀತ ಮಣಿಪಾದುಕಂ ಕಿಮಿತಿ ಚಾಕುಲಾಂತಃಪುರಂ ।
ಅವಾಹನ ಪರಿಷ್ಕ್ರಿಯಂ ಪತಗರಾಜಮಾರೋಹತಃ
ಕರಿಪ್ರವರಬೃಂಹಿತೇ ಭಗವತಸ್ತ್ವರಾಯೈ ನಮಃ ॥ ॥೫೭॥

(ಕರಿಪ್ರವರ ಬೃಂಹಿತೇ) ಗಜೇಂದ್ರನ ಆರ್ತನಾದ ಕಿವಿಗೆ ಬಿದ್ದಾಗ (ಅತಂತ್ರಿತ ಚಮೂಪತಿ–ಪ್ರಹಿತ ಹಸ್ತಂ) ವಿಷ್ವಕ್ಸೇನರು ಕೊಟ್ಟ ಹಸ್ತಲಾಘವವನ್ನು ಗಣಿಸದೆ (ಅಸ್ವೀಕೃತ ಪ್ರಣೀತ ಮಣಿಪಾದುಕಂ) ಸಿದ್ಧವಾಗಿ ತರಲ್ಪಟ್ಟ ಮಣಿಪಾದುಕೆಗಳನ್ನು ಸ್ವೀಕರಿಸದೆಯೂ (ಕಿಮಿತಿ ಆಕುಲಾಂತಃ ಪುರಂ) ಇದು ಏನು ಇದು ಏನು ಎಂದು ದಿವ್ಯ ಮಹಿಷಿಗಳು ಆಕುಲಗೊಳ್ಳಲು (ಅವಾಹನ ಪರಿಷ್ಕ್ರಿಯಂ) ವಾಹನ ಪರಿಷ್ಕಾರವೊಂದನ್ನೂ ಮಾಡದೆಯೇ (ಪತಗರಾಜಂ ಆರೋಹತಃ) ಗುರುತ್ಮಂತನ ಮೇಲೆ ಏರುವವನಾದ (ಭಗವತಃ) ಭಗವಂತನ (ತ್ವರಾಯೈ) ತ್ವರೆಗೆ (ನಮಃ) ನಮಸ್ಕಾರವು.

ಗಜೇಂದ್ರನ ಕೂಗು ಕೇಳಿದಾಗ ಬೇಗ ಬಂದ ಭಗವಂತನಿಗೆ ನಾನು ನಮಿಸುವುದಿಲ್ಲ. ಆದರೆ ಅವನ ತ್ವರೆಗೆ ನಾನು ನಮಿಸುವೆನು. ಅಂದಿನ ಆ ತ್ವರೆಯು ಕಾರಣ ಅವನು ವಿಷ್ವಕ್ಸೇನರ ಹಸ್ತಲಾಘವವನ್ನೂ ನಿರೀಕ್ಷಿಸಲಿಲ್ಲ.

ಪಾದುಕೆ ಹಾಕಿಕೊಳ್ಳಲಿಲ್ಲ. ವಾಹನ ಪರಿಷ್ಕಾರ ಮಾಡಲಿಲ್ಲ. ಅಂತಃಪುರದವರೆಲ್ಲಾ 'ಆ ಆ' ಎಂದು ವ್ಯಾಕುಲರಾದರು. ಅಂಥ ವೇಗದಿಂದ ಸ್ವಾಮಿ ಧಾವಿಸಿಬಂದನು. ಆ ತ್ವರೆಗೆ ನಾನು ನಮಿಸುವೆನು ಎಂದು ಹೇಳಿದೆ ಇಲ್ಲಿ. 'ವಿಣ್ಣುಳ್ಳಾರ್ ವಿಯಪ್ಪ ವಂದು ಆನೈಕ್ಕು ಅನ್ರು ಅರುಳೈಯೀಂದ ಕಣ್ಣರಾ' ಎಂದು ತೊಂಡರಡಿಪ್ಪೊಡಿ ಆಳ್ವಾರ್ರವರೂ 'ಕೈಮ್ಮಾ ತುನ್ಬಂ ಕಡಿಂದ ಪಿರಾನೇ' ಎಂದು ನಮ್ಮಾಳ್ವಾರ್ರವರೂ ಅನುಸಂಧಾನ ಮಾಡಿರುವುದನ್ನು ಕಾಣಬಹುದು.

ಯಂ ಪಶ್ಯನ್ ವಿಶ್ವಧುರ್ಯಾಂ ಧಿಯಮಸಕೃದಥೋಮಂಥರಾಂ
ಮನ್ಯಮಾನಃ
ಹುಂಕಾರಾಸ್ಫಾಲನಾಂಘ್ರಿಪ್ರಹತಿಭಿರಪಿ ತಂ ತಾರ್ಕ್ಷ್ಯ-
ಮಧ್ಯಕ್ಷಿಪಸ್ತ್ವಂ ।
ಕಿಂಚೋದಂಚನ್ನುದಸ್ಥಾಸ್ತಮಥ ಗಜಪತೇರ್ಬೃಂಹಿತೇ
ಜೃಂಭಮಾಣೇ
ದೇವ ಶ್ರೀರಂಗಬಂಧೋ ಪ್ರಣಮತಿ ಹಿ ಜನೇ
ಕಾಂದಿಶೀಕೀ ದಶಾ ತೇ॥ ॥೫೮॥

(ಶ್ರೀರಂಗ ಬಂಧೋ ದೇವ) ಪರಮ ಬಂಧುವಾದ ಶ್ರೀ ರಂಗನಾಥನೇ, (ಗಜಪತೇಃ) ಗಜೇಂದ್ರನ(ಬೃಂಹಿತೇ) ಕೂಗು (ಜೃಂಭಮಾಣೇಸತಿ) ಜೋರಾಗಿ ಕೇಳಿಸುತ್ತಿರಲಾಗಿ (ಯಂ ತಾರ್ಕ್ಷ್ಯಂ) ಅಧಿಕವಾದ ವೇಗದೊಡನೆ ಪೋಗಬಲ್ಲ ಯಾವ ಗುರುತ್ಮಂತನನ್ನು (ಪಶ್ಯನ್ ಸನ್) ನೋಡುವವನಾಗಿ ಆ ಗರುತ್ಮಂತನ ವೇಗದ ಮುಂದೆ (ಅಸಕೃತ್) ಯಾವಾಗಲೂ (ವಿಶ್ವಧುರ್ಯಾಂ) ಲೋಕಗಳನ್ನೆಲ್ಲಾ ನಿರ್ವಹಿಸುವ (ಧಿಯಂ ಅಥೋ) ತನ್ನ ಸಂಕಲ್ಪರೂಪವಾದ ಜ್ಞಾನದ (ಮಂಥರಾಂ) ವೇಗ ಕಡಿಮೆ ಯಾದುದಾಗಿ (ಮನ್ಯಮಾನಃ ಅಪಿ) ತಿಳಿಯುವವನಾಗಿದ್ದರೂ (ತ್ವಂ) ನೀನು(ಹೂಂಕಾರ–ಆಸ್ಫಾಲನ–ಅಂಘ್ರಿಪ್ರಹತಿಭಿಃ) ಹೂಂಕಾರ ಮಾಡುವುದು, ಕೈಯಿಂದ ಹೊಡೆಯುವುದು, ಕಾಲಿನಿಂದ ಒದೆಯುವುದು ಮೊದಲಾದ ಕಾರ್ಯಗಳಿಂದ (ತಂ) ಆ ಗರುಡನನ್ನು

(ಅಧ್ಯಕ್ಷಿಪ:) ಕನಲಿ ಓಡಿಸಿದೆ. (ಕಿಂಚ) ಮತ್ತೂ (ತಂ) ಆ ಗರುಡನನ್ನೂ (ಉದಂಚನ್ ಸನ್) ಮೇಲೆತ್ತಿ ಹಿಡಿದುಕೊಂಡು (ಉದಸ್ಥಾ:) ಹೊರಟೆ. ಇದನ್ನು ವಿಚಾರಿಸಲು (ಪ್ರಣಮತಿ ಜನೇ) ಆಶ್ರಿತ ಜನರ ವಿಷಯದಲ್ಲಿ (ತೇ ದಶಾ) ನಿನ್ನ ನಿಲುವು (ಕಾಂದಿಶಿಕೀ) ಭಯದಿಂದ ಓಡಿ ಹೋಗುವಂತಹ ದಾಗುತ್ತದೆ.

ಗಜೇಂದ್ರರಕ್ಷಣತ್ವರೆಯನ್ನು ಇಲ್ಲಿ ವರ್ಣಿಸಿದೆ. ಭಗವಂತನ ಉದ್ವೇಗ ವನ್ನು ಕಂಡು ಗರುಡನು ವಾಚಾಮಗೋಚರವಾದ ವೇಗದಿಂದ ಓಡಿದನು. ಆದರೂ ಭಗವಂತನಿಗೆ ತೃಪ್ತಿ ಆಗಲಿಲ್ಲ. ಅವನನ್ನು ಬೆದರಿಸಿ ಹೊಡೆದು ಓಡಿಸಿದನು. ಅದೂ ಅವನಿಗೆ ತೃಪ್ತಿಯಾಗದ ಕಾರಣ ಅವನನ್ನೂ ಎತ್ತಿ ಎತ್ತಿಕೊಂಡೇ ಓಡಿಬಂದು ಆ ಮಡುವಿನ ಬಳಿ ಬಂದು ಸೇರಿದ. ಆಶ್ರಿತ ರಕ್ಷಕ ನಾದ ಸ್ವಾಮಿ ಅತ್ಯಧಿಕವಾದ ವೇಗದಿಂದ ಅವರ ರಕ್ಷಣೆಗೆ ಬಂದು ಸೇರು ತ್ತಾನೆ. ತನ್ನ ಸಂಕಲ್ಪ ಜ್ಞಾನಕ್ಕಿಂತ ವೇಗವಾದುದು ಲೋಕದಲ್ಲಿ ಇಲ್ಲ. ಆ ಸಂಕಲ್ಪ ವಿಜ್ಞಾನಕ್ಕಿಂತಲೂ ಗರುಡನ ವೇಗ ಅಧಿಕವಾಗಿತ್ತೆಂದು ತಿಳಿದರೂ ಆಶ್ರಿತ ರಕ್ಷಣೆಯಲ್ಲಿ ಇದ್ದ ತ್ವರೆಯಿಂದ ಹೀಗೆ ಸಾರಿದನು ಸ್ವಾಮಿ.

**ಶ್ರೀರಂಗೇಶಯ ಶರಣಂ ಮಮಾಸಿ ವಾತ್ಯಾ ವ್ಯಾಲೋಲತ್**
**ಕಮಲ–ತಟಾಕ–ತಾಂಡವೇನ ।**
**ಸ್ರಗ್ಭೂಷಾಂಬರಮಯಥಾಯಥಂ ದಧಾನೋ ಧಿಜ್ಞಾಂ**
**ಇತ್ಯನುಗಜಗರ್ಜಮಾಜಗಂಥ॥ ॥೫೯॥**

(ಶ್ರೀ ರಂಗೇಶಯ) ಶ್ರೀರಂಗನಾಥನೇ, ನೀನು (ಅನುಗಜಗರ್ಜಂ) ಗಜೇಂದ್ರನ ಆರ್ತನಾದವು ಕಿವಿಗೆ ಬಿದ್ದೊಡನೆಯೇ (ಮಾಂಧಿಕ್ ಇತಿ) ಕೆಟ್ಟೆ ಕೆಟ್ಟೆ, ನಾನು ಸಾವಕಾಶ ಮಾಡಿದೆನಲ್ಲ ಎಂದು ನೊಂದು (ಸ್ರಗ್ಭೂಷಾಂಬರಂ) ಮಾಲೆ, ಆಭರಣ, ವಸ್ತ್ರ ಮೊದಲಾದವನ್ನು (ಅಯಃಥಾಯಃಥಂ) ಹೇಗಿರ ಬೇಕೋ ಹಾಗೆ ಕ್ರಮವಾಗಿ ಇಲ್ಲದಂತೆ (ದಧಾನಃ) ಧರಿಸಿದವನಾಗಿ (ವಾತ್ಯಾ ವ್ಯಾಲೋಲತ್ ಕಮಲ ತಟಾಕತಾಂಡವೇನ) ಬಿರುಗಾಳಿಯಿಂದ ಚಂಚಲ

Funding: Tattva Heritage Foundation,Kolkata. Digitization: eGangotri.



ವಾಗಿರುವ ಕಮಲ ಸರೋವರದ ವಿಲಾಸದಿಂದ ಕೂಡಿದವನಾಗಿ (ಆ ಜಗಂಥ) ಬಂದು ಸೇರಿದೆ. ಇಂಥ ಆಶ್ರಿತ ಪಕ್ಷಪಾತಿಯಾದ ನೀನು (ಮಮ ಶರಣಂ ಅಸಿ) ನನಗೆ ರಕ್ಷಕನಾಗಿದ್ದೀಯೆ.

ಶ್ರೀ ಗಜೇಂದ್ರ ರಕ್ಷಣ ವೃತಾಂತವೇ ಇಲ್ಲೂ ಇದೆ. 'ವನ್ ಕಾತ್ತು ಆರೈಯು ಒರುಂಗೇ ಮರಿಂದು ಕಿಡಂದು ಅಲರ್ನ್ದ ಮೆನ್ಗಾಲ್ ಕಮಲ ತಡಂ ಬೋಲ್ ಪೊಲಿಂದನ ಎಂಬಿರಾನ ತಡಂಕಣ್ಗಳ್' ಎಂದು ತಿರುವಿರುತ್ತದಲ್ಲಿ ನಮ್ಮಾಳ್ವಾರ್ರವರು ಅನುಭವಿಸಿರುವುದಕ್ಕೆ ಅನುಗುಣವಾಗಿ ಇಲ್ಲಿ 'ವಾತ್ಯಾ ವ್ಯಾಲೋಲತ್ ಕಮಲ ತಟಾಕತಾಂಡವೇನ' ಎಂದು ವರ್ಣಿಸಿದೆ. ತಪ್ಪು ತಪ್ಪಾಗಿ ಆಭರಣಾದಿಗಳನ್ನು ಧರಿಸಿದ್ದನೆಂಬುದನ್ನು ಮೂರನೆಯ ಪಾದ ತಿಳಿಸುತ್ತದೆ. ಇಂಥ ಸ್ವಾಮಿ ನಮಗೆ ಪರಮರಕ್ಷಕನಾಗಿದ್ದಾನೆ ಎಂದು ಅನುಭವಿಸಿದೆ.

**ಮೀನ ತನುಸ್ತ್ವಂ ನಾವಿ ನಿಧಾಯ ಸ್ಥಿರಚರಪರಿಕರಮನು**
**ಮನು ಭಗವನ್ ।**
**ವೇದಸನಾಭಿಃ ಸ್ವೋಕ್ತಿವಿನೋದೈಃ ಅಕಲಿತಲಯ–ಭಯಲವಂ**
**ಅಮುಮವಹಃ॥ ॥೬೦॥**

(ಭಗವನ್) ಸ್ವಾಮಿಯೇ, (ಮೀನ ತನುಃ ತ್ವಂ) ಮೀನ ಶರೀರನಾದ ನೀನು (ನಾವಿ) ಒಂದು ಹಡಗಿನಲ್ಲಿ (ಅನುಮನು) ಮನುಮಹರ್ಷಿಯ ಹತ್ತಿರದಲ್ಲಿಯೇ (ಸ್ಥಿರಚರ ಪರಿಕರಂ) ಸ್ಥಾವರ ಜಂಗಮಾತ್ಮಕವಾದ ಸಕಲ ಪದಾರ್ಥಗಳನ್ನೂ (ನಿಧಾಯ) ಇಟ್ಟು (ವೇದ ಸನಾಭಿಃ ಸ್ವೋಕ್ತಿ ವಿನೋದೈಃ) ವೇದ ರೂಪಗಳಾದ ತನ್ನ ವಿನೋದದ ಮಾತುಗಳಿಂದ (ಅಕಲಿತಲಯಭಯ ಲವಂ) ಪ್ರಲಯ ಭಯದಿಂದಾದ ಚಿಂತೆಯ ಲೇಶವೂ ಇಲ್ಲದಂತೆ (ಅಮುಂ) ಈ ಪರಿಕರವನ್ನು (ಅವಹಃ) ವಹಿಸಿದೆ.

ಇಲ್ಲಿಂದ ದಶಾವತಾರದ ವೃತ್ತಾಂತವನ್ನು ನಿರೂಪಿಸಿದೆ. ಇಲ್ಲಿ ಮತ್ಸ್ಯಾ ವತಾರವನ್ನು ವರ್ಣಿಸಿದೆ. ತನ್ನ ಭಕ್ತನಾದ ಸತ್ಯವ್ರತ ರಾಜನಿಗೆ ಅನುಗ್ರಹ

ಮಾಡಲು ಸ್ವಾಮಿ ಮತ್ಸ್ಯರೂಪದಲ್ಲಿ ಅವನಿಗೆ ಕಾಣಿಸಿಕೊಂಡು, ಪ್ರಲಯ ಜಲದಲ್ಲಿ ಆ ಸತ್ಯವ್ರತನನ್ನೂ ಸಪ್ತಋಷಿಗಳನ್ನೂ ಒಂದು ನಾವೆಯಲ್ಲಿ ಇರುವಂತೆ ಮಾಡಿ, ಅವನಿಗೆ ಆತ್ಮೋಪದೇಶ ಮಾಡಿದನು. ಭಗವಂತನ ಆದೇಶದಂತೆ ಸತ್ಯವ್ರತನು ತನ್ನ ನಾವೆಯನ್ನು ಆ ಮೀನಮೂರ್ತಿಯ ಕೊಂಬಿಗೆ ಕಟ್ಟಿದನು. ಭಗವಂತನು ಈ ಅವತಾರದಲ್ಲಿ ವೇದವನ್ನು ಉದ್ಧರಿಸಿದನು ಮತ್ತು ಸತ್ಯವ್ರತನಿಗೆ ನೇರವಾಗಿ ಆತ್ಮೋಪದೇಶ ಮಾಡಿದನು.

---

**ಶ್ರೀನಯನಾಭೋದ್ಭಾಸುರ ದೀರ್ಘ ಪ್ರವಿಪುಲ ಸುರುಚಿರ**
**ಶುಚಿ ಶಿಶಿರವಪುಃ ।**
**ಪಕ್ಷನಿಗೀರ್ಣೋದ್ಗೀರ್ಣ ಮಹಾಬ್ಧಿಃಸ್ಥಲ ಜಲ ವಿಹರಣ**
**ರತಗತಿರಚರಃ ॥ ॥೩೧॥**

ಶ್ರೀ ರಂಗನಾಥನೇ, (ಶ್ರೀ ನಯನಾಭೋದ್ಭಾಸುರ) ಶ್ರೀ ದೇವಿಯ ದಿವ್ಯ ನೇತ್ರಗಳಂತೆ ಪ್ರಕಾಶಿಸುವುದೂ (ದೀರ್ಘ) ದೀರ್ಘವಾದುದೂ (ಪ್ರವಿಪುಲ)ವಿಶಾಲವಾದುದೂ (ಸುರುಚಿರ) ಬಹಳ ಸುಂದರವಾದುದೂ(ಶುಚಿ) ನಿರ್ಮಲವಾದುದೂ (ಶಿಶಿರ) ತಂಪಾಗಿರುವುದೂ ಆದ (ವಪುಃ) ಶರೀರವನ್ನುಳ್ಳ ನೀನು (ಪಕ್ಷ ನಿಗೀರ್ಣ-ಉದ್ಗೀರ್ಣ ಮಹಾಬ್ಧಿಃ) ಗರಿಗಳಿಂದ ನುಂಗಲ್ಪಟ್ಟುದೂ ಹೊರ ಹಾಕಿದುದೂ ಆದ ದೊಡ್ಡ ಸಮುದ್ರವನ್ನುಳ್ಳವನಾಗಿ (ಸ್ಥಲ ಜಲ ವಿಹರಣರತ ಗತಿಃ) ನೆಲದಮೇಲೆಯೂ ನೀರಿನಲ್ಲಿಯೂ ವಿಹರಿಸುವುದರಲ್ಲಿ ಆಸಕ್ತ ವಾದ ಗಮನವನ್ನುಳ್ಳವನಾಗಿ (ಅಚರಃ) ಸಂಚರಿಸಿದೆ.

ಮತ್ಸ್ಯಮೂರ್ತಿಯ ವಿಹಾರ ವಿಶೇಷವನ್ನು ಇಲ್ಲಿ ವರ್ಣಿಸಿದೆ. ಸ್ತ್ರೀಯರನ್ನು 'ಮೀನ ನೇತ್ರೆಯರು' ಎನ್ನುವರು. ಶ್ರೀ ದೇವಿಯ ನೇತ್ರದಂತೆ ಪ್ರಕಾಶಿಸುವ ದೇಹ ಮತ್ಸ್ಯಮೂರ್ತಿಯದು. ಮತ್ಸ್ಯಮೂರ್ತಿ ತನ್ನ ಪಕ್ಕಗಳಿಂದ ಸಮುದ್ರವನ್ನು ತನ್ನೊಳಗೇ ಅಡಗಿಸಿಬಿಟ್ಟಾಗ ಸ್ಥಲದ ಮೇಲೆ ವಿಹರಿಸುವನು. ಮತ್ತೊಮ್ಮೆ ಆ ಸಮುದ್ರವನ್ನು ತನ್ನ ಬಿಚ್ಚಿದ ರೆಕ್ಕೆಗಳಿಂದ

ಹೊರಗೆ ಬಿಟ್ಟಾಗ ಸಮುದ್ರದಲ್ಲಿ ಸಂಚರಿಸುವನು. ಮತ್ಸ್ಯಮೂರ್ತಿಯ ದೇಹದ ಅದ್ಭುತ ರೂಪ ಸೌಂದರ್ಯಗಳನ್ನೂ ಅವನ ವಿಹಾರ ವೈಚಿತ್ರ್ಯವನ್ನೂ ಇಲ್ಲಿ ವರ್ಣಿಸಿದ್ದಾರೆ.

**ಚಕರ್ಥ ಶ್ರೀರಂಗಿನ್ ನಿಖಿಲಜಗದಾಧಾರ ಕಮಠೋ**
**ಭವನ್ ಧರ್ಮಾನ್ ಕೂರ್ಮಃ ಪುನರಮೃತಮಂಥಾಚಲಧರಃ ।**
**ಜಗಂಥ ಶ್ರೇಯಸ್ತ್ವಂ ಮರಕತ-ಶಿಲಾಪೀಠಲಲಿತೋ**
**ಜಲಾದುದ್ಯಲ್ಲಕ್ಷ್ಮೀ-ಪದಕಿಸಲಯ-ನ್ಯಾಸಸುಲಭಂ ॥ ॥೬೨॥**

(ಶ್ರೀರಂಗಿನ್) ಶ್ರೀ ರಂಗನಾಥನೇ, ನೀನು (ನಿಖಿಲಜಗದಾಧಾರ ಕಮಠಃ ಭವನ್) ಎಲ್ಲಾ ಲೋಕಗಳಿಗೂ ಆಧಾರವಾದ ಕೂರ್ಮರೂಪಿ ಯಾಗಿ (ಧರ್ಮಾನ್) ಧರ್ಮಗಳನ್ನು (ಚಕರ್ಥ) ವ್ಯಾಖ್ಯಾನ ಮಾಡಿದೆ. (ಪುನಃ) ಮತ್ತೆಯೂ (ಅಮೃತ ಮಂಥಾಚಲಧರಃ) ಅಮೃತವನ್ನು ಕಡೆಯು ವುದಕ್ಕಾಗಿ ಹಾಕಿದ ಮಂದರ ಪರ್ವತವನ್ನು ಧರಿಸಿರುವ (ಕೂರ್ಮಃ) ಆಮೆ ಯಾಗಿ (ಮರಕತಶಿಲಾ ಪೀಠ ಲಲಿತಃ) ಮರಕತಶಿಲೆಯ ಆಸನದಂತೆ ಸುಂದರ ವಾಗಿ (ಜಲಾತ್) ಸಮುದ್ರದ ನೀರಿನಿಂದ (ಉದ್ಯತ್) ಉದಯಿಸುತ್ತಿದ್ದ (ಲಕ್ಷ್ಮೀ) ಶ್ರೀದೇವಿಯ (ಪದಕಿಸಲಯ) ಚಿಗುರಿನಂತೆ ಇರುವ ಪಾದಗಳನ್ನು (ನ್ಯಾಸ ಸುಲಭಂ) ಇಡುವುದಕ್ಕೆ ಯುಕ್ತವಾದ (ಶ್ರೇಯಃ) ನಲ್ಮೆಯನ್ನು (ಜಗಂಥ) ಪಡೆದೆ.

ಆದಿ ಕೂರ್ಮಮೂರ್ತಿಯನ್ನೂ ಮಂದರ ಪರ್ವತವನ್ನು ಧರಿಸಿದ ಕೂರ್ಮಮೂರ್ತಿಯನ್ನೂ ಇಲ್ಲಿ ಅನುಸಂಧಾನ ಮಾಡಿದೆ. ಆಧಾರ ಪೀಠದ ಮೇಲೆ ಕೂರ್ಮಮೂರ್ತಿಯ ಅನುಸಂಧಾನ ಮಾಡಬೇಕೆಂದು ಹೇಳಿರು ವುದು ಆದಿ ಕೂರ್ಮನ ಮೂರ್ತಿ. ಧರ್ಮಗಳನ್ನು ಕೂರ್ಮಮೂರ್ತಿ ಉಪ ದೇಶಿಸಿದುದು ಕೂರ್ಮ ಪುರಾಣಾದಿಗಳಲ್ಲಿ ಹೇಳಿದೆ. ಅಮೃತ ಮಥನ ವಾದಾಗ ಶ್ರೀದೇವಿ ಸಮುದ್ರದಿಂದ ಉದಯಿಸಿ ಕೂರ್ಮ ಮೂರ್ತಿಯ ಬೆನ್ನ

ಮೇಲೆ ತನ್ನ ಪಾದವನ್ನಿಟ್ಟುಕೊಂಡು ಮೇಲೆ ಬಂದಳೆಂಬುವ ವರ್ಣನೆ ಸುಂದರವಾಗಿದೆ. ಶ್ರೀದೇವಿಗೆ ಪಾದಪೀಠದಂತೆ ಆಯಿತಂತೆ ಕೂರ್ಮಮೂರ್ತಿಯ ಬೆನ್ನು. ತಿರುಮಂಗೈ ಆಳ್ವಾರ್ರವರು—

'ಮಲಂಗುವಿಲಂಗು ನೆಡುವೆಳ್ಳಂ ಮರುಹ ಅಂಗೋರ್ ವರೈನಟ್ಟು
ಇಲಂಗುಶೋದಿ ಆರಮುದಂ ಎಯ್‌ದುಂ ಅಳವೋರಾಮೈಯಾಯ್,
ವಿಲಂಗಲ್ ತಿರಿಯತ್ತಡಂಗಡಲುಳ್ ಶುಮುಂದು ಕಿಡಂದವಿತ್ತಹನ್ನೈ
ಕಲಂಗಲ್ ಮುನ್ನೀರ್ ಕಣ್ಣಪುರತ್ತು ಅಡಿಯೇನ್ ಕಂಡು ಹೊಂಡೇನೇ'

ಎಂದು ಅನುಭವಿಸಿರುವುದನ್ನು ಕಾಣಬಹುದು,

ಹೃದಿ ಸುರರಿಪೋರ್ದಂಷ್ಟ್ರೋತ್ಖಾತೇ ಕ್ಷಿಪನ್ ಪ್ರಲಯಾರ್ಣವಂ
ಕ್ಷಿತಿಕುಚತಟೇಮರ್ಚನ್ ದೈತ್ಯಾಸ್ರ–ಕುಂಕುಮ–ಚರ್ಚಯಾ ।
ಸ್ಫುಟಧುತ–ಸಟಾ–ಭ್ರಾಮ್ಯದ್ಬ್ರಹ್ಮಸ್ತವೋನ್ಮುಖಬೃಂಹಿತಃ
ಶರಣಮಸಿ ಮೇ ರಂಗಿನ್ ತ್ವಂ ಮೂಲಕೋಲತನುರ್ಭವನ್॥ ॥೬೩॥

(ರಂಗಿನ್) ಶ್ರೀ ರಂಗನಾಥನೇ, (ಮೂಲಕೋಲ ತನುರ್ಭವನ್ ತ್ವಂ) ಆದಿ ವರಾಹಮೂರ್ತಿಯಾದ ನೀನು (ದಂಷ್ಟ್ರೋತ್ಖಾತೇ) ಕೋರೆ ಹಲ್ಲುಗಳಿಂದ ಅಗೆದು ಹಳ್ಳ ಮಾಡಲ್ಪಟ್ಟ (ಸುರರಿಪೋರ್ಹೃದಿ) ಹಿರಣ್ಯಾಕ್ಷನ ಎದೆಯಲ್ಲಿ (ಪ್ರಲಯಾರ್ಣವಂ) ಪ್ರಲಯ ಸಮುದ್ರವನ್ನು (ಕ್ಷಿಪನ್) ತಂದು ತಳ್ಳಿದವನಾಗಿ (ದೈತ್ಯಾಸ್ರ ಕುಂಕುಮ ಚರ್ಚಯಾ) ಆ ಅಸುರನ ರಕ್ತವೆಂಬ ಕುಂಕುಮ ಲೇಪದಿಂದ (ಕ್ಷಿತಿಕುಚತಟೇ) ಭೂದೇವಿಯ ವಕ್ಷಃ ಸ್ಥಲವನ್ನು (ಅರ್ಚನ್) ಅಲಂಕರಿಸಿದವನಾಗಿ (ಸ್ಫುಟಧುತ) ಚೆನ್ನಾಗಿ ಒದರಲ್ಪಟ್ಟ (ಸಟಾ) ಕೇಸರಗಳಿಂದ (ಭ್ರಾಮ್ಯತ್) ಹೆದರಿ ಭ್ರಮಿಸಿದ (ಬ್ರಹ್ಮ) ಚತುರ್ಮುಖನು ಮಾಡಿದ (ಸ್ತವ) ಸ್ತೋತ್ರಗಳಿಗೆ (ಉನ್ಮುಖ) ಎದುರ್ಮುಖವಾಗಿ (ಬೃಂಹಿತಃ) ಗರ್ಜನೆ ಮಾಡಿದವನಾದ (ತ್ವಂ) ನೀನು (ಮೇ) ನನಗೆ (ಶರಣಮಸಿ) ರಕ್ಷಕನಾಗಿದ್ದೀಯೆ.

ಹಿರಣ್ಯಾಕ್ಷನನ್ನು ವಧಿಸಿದ ಆದಿವರಾಹನನ್ನು ಇಲ್ಲಿ ಅನುಸಂಧಾನ ಮಾಡಿದೆ. ಆ ಹಿರಣ್ಯಾಕ್ಷನ ದೇಹ ಎಷ್ಟು ದೊಡ್ಡದಾಗಿತ್ತೆಂಬುದನ್ನು ಸೂಚಿಸಿದ್ದಾರೆ ಮೊದಲಪಾದದಲ್ಲಿ. ಹಿರಣ್ಯಾಕ್ಷನ ಎದೆಯನ್ನು ಕೋರೆ ಹಲ್ಲಿನಿಂದ ಸೀಳಿ ಹಳ್ಳಮಾಡಿ ಅದರಲ್ಲಿ ಸ್ವಾಮಿ ಪ್ರಳಯ ಸಾಗರವನ್ನು ಹಾಯಿಸಿದ. ಶ್ರೀ ವರಾಹನು ತನ್ನ ಮೈಮೇಲಿನ ರೋಮಗಳನ್ನು ಒದರಿದಾಗ ಆ ಶಬ್ಧ ಬ್ರಹ್ಮಲೋಕವನ್ನೂ ಮುಟ್ಟಲು ಬ್ರಹ್ಮದೇವನು ಹೆದರಿ ಭಗವಂತನನ್ನು ಸ್ತುತಿಸಿದ. ಆ ಸ್ತೋತ್ರಕ್ಕೆ ಎದುರು ಧ್ವನಿಯನ್ನು ಕೊಡುವಂತೆ ಸ್ವಾಮಿ 'ಘೋಣಾರವೈರ್ಘುರ್ಘುರೈಃ' ಎಂದು ಹೇಳಿದಂತೆ ಗರ್ಜನೆ ಮಾಡಿದನು. ಅಂಥ ಕೋಲ ವರಾಹಮೂರ್ತಿ ನಮ್ಮ ರಕ್ಷಕನಾಗಿದ್ದಾನೆ.

ನೃಹರಿದಶಯೋಃ ಪಶ್ಯನ್ನೌತ್ಪತ್ತಿಕಂ ಘಟನಾದ್ಭುತಂ
ನರಮುತಹರಿಂ ದೃಷ್ಟ್ವೈಕೈಕಂ ಸಮುದ್ವಿಜತೇ ಜನಃ ।
ಇತಿಕಿಲ ಸಿತಾಕ್ಷೀರನ್ಯಾಯೇನ ಸಂಗಮಿತಾಂಗಕಂ
ಸ್ಫುಟಸಟಮಹಾದಂಷ್ಟ್ರಂ ರಂಗೇಂದ್ರಸಿಂಹಮುಪಾಸ್ಮಹೇ॥ ॥೭೪॥

(ನೃಹರಿದಶಯೋಃ) ಮನುಷ್ಯತ್ವ ಮತ್ತು ಸಿಂಹತ್ವ ಇವುಗಳ (ಔತ್ಪತ್ತಿಕಂ) ಸಹಜವಾದ (ಘಟನಾದ್ಭುತಂ) ಸೇರುವಿಕೆಯ ಅದ್ಭುತವನ್ನು (ಪಶ್ಯನ್ ಜನಃ) ದರ್ಶಿಸುವ ಜನರು (ನರಂ) ಮನುಷ್ಯ ಜಾತಿಯನ್ನೋ (ಉತಹರಿಂ) ಅಥವಾ ಸಿಂಹ ಜಾತಿಯನ್ನೋ (ಏಕೈಕಂ) ಪ್ರತ್ಯೇಕವಾಗಿ (ದೃಷ್ಟ್ವಾ)ನೋಡಿ (ಸಮುದ್ವಿಜತೇ) ಉದ್ವೇಗಗೊಳ್ಳುತ್ತಾರೆ (ಇತಿಕಿಲ) ಎಂಬುವ ಅಭಿಪ್ರಾಯದಿಂದ (ಸಿತಾಕ್ಷೀರ ನ್ಯಾಯೇನ) ಸಕ್ಕರೆಯನ್ನೂ ಹಾಲನ್ನೂ ಸೇರಿಸುವ ನ್ಯಾಯದಂತೆ (ಸಂಗಮಿತಾಂಗಕಂ) ಎರಡೂ ರೂಪಗಳನ್ನೂ ಸೇರಿಸಿ ಒಂದಾಗಿ ಮಾಡಿಕೊಂಡು (ಸ್ಫುಟಸಟ ಮಹಾದಂಷ್ಟ್ರಂ) ಸುಂದರವಾದ ಕೇಸರಗಳನ್ನೂ ದೊಡ್ಡ ಕೋರೆ ಹಲ್ಲುಗಳನ್ನೂ ಉಳ್ಳ (ರಂಗೇಂದ್ರ ಸಿಂಹಂ) ಸಿಂಹಮೂರ್ತಿಯಾದ ಶ್ರೀ ರಂಗನಾಥನನ್ನು (ಉಪಾಸ್ಮಹೇ) ಧ್ಯಾನ ಮಾಡುತ್ತೇನೆ.

ಇಲ್ಲಿಂದ ಶ್ರೀ ನೃಸಿಂಹನ ವೈಭವದ ವರ್ಣನೆ ಇದೆ. ಅವನ ಸೌಂದರ್ಯ ವನ್ನು ಇಲ್ಲಿ ಹೇಳಿದೆ. ನರ ಮತ್ತು ಸಿಂಹದರೂಪು ಸಹಜವಾಗಿ ಸೇರಿರುವ ನರಸಿಂಹರೂಪವನ್ನು ನೋಡಿದ ಜನ ಬರಿಯ ನರರೂಪವನ್ನಾಗಲೀ ಬರಿಯ ಸಿಂಹರೂಪವನ್ನಾಗಲೀ ಕಾಣಲು ಬಯಸುತ್ತಿರಲಿಲ್ಲ; ಹಾಗೆ ಕಂಡರೆ ಅವರು ಜುಗುಪ್ಸೆ ಪಡುತ್ತಿದ್ದರು. ಕ್ಷೀರವೂ ಸಕ್ಕರೆಯೂ ಸಹಜವಾಗಿ ಸೇರಿದಂತೆ ಇರುವುದು ಈ ರೂಪ. ಅವತಾರ ಕಾಲದಲ್ಲಿಯೇ ಈ ಎರಡು ರೂಪಗಳನ್ನು ಸಹಜವಾಗಿಯೇ ಸೇರಿಸಿಕೊಂಡು ಸ್ವಾಮಿ ಮೈ ದೋರಿದನು.

**ದ್ವಿಷಾಣ–ದ್ವೇಷೋದ್ಯನ್ನಯನ–ವನವಹ್ನಿ–ಪ್ರಶಮನ**
**ಭ್ರಮಲ್ಲಕ್ಷ್ಮೀವಕ್ತ್ರಪ್ರಹಿತ–ಮಧುಗಂಡೂಷ–ಸುಷುಮೈಃ ।**
**ನಖಕ್ಷುಣ್ಣಾರಾತಿ–ಕ್ಷತಜ–ಪಟಲೈರಾಪ್ಲುತಸಟಾ–**
**ಚ್ಛಟಾಸ್ಕಂಧೋ ರುಂಧೇ ದುರಿತಮಿಹ ಪುಂಸ್ಪಂಚವದನಃ ॥ ॥೭೫॥**

(ದ್ವಿಷಾಣ) ಆಶ್ರಿತರ ಶತ್ರುವಾದ ಹಿರಣ್ಯಕಶಿಪುವಿನ ಬಗೆಗೆ (ದ್ವೇಷ) ಉಂಟಾದ ದ್ವೇಷದಿಂದ (ಉದ್ಯತ್) ಉಂಟಾದ (ನಯನವನವಹ್ನಿಃ) ಶ್ರೀ ನೇತ್ರಗಳ ಬೆಂಕಿಯನ್ನು (ಪ್ರಶಮನ) ಆರಿಸಲು ಹೊರಟು (ಭ್ರಮತ್) ಭ್ರಮಿಸುವ (ಲಕ್ಷ್ಮೀ) ಶ್ರೀ ಮಹಾ ಲಕ್ಷ್ಮಿಯ (ವಕ್ತ್ರ) ಬಾಯಿಯಿಂದ (ಪ್ರಹಿತ) ಉಗುಳಲ್ಪಟ್ಟ (ಮಧುಗಂಡೂಷ ಸುಷುಮೈಃ) ತಾಂಬೂಲ ಗಂಡೂಷದಂತಿರುವ (ನಖಕ್ಷುಣ್ಣಾರಾತಿಕ್ಷತಜಪಟಲೈಃ) ಉಗುರುಗಳಿಂದ ಸೀಳಲ್ಪಟ್ಟ ಶತ್ರುವಿನ ರಕ್ತದ ಧಾರೆಗಳಿಂದ (ಆಪ್ಲುತ ಸಟಾಚ್ಛಟಾಸ್ಕಂದಃ) ನೆನೆಸಲ್ಪಟ್ಟ ಕೇಸರಗಳಿಂದ ಕೂಡಿದ ತೋಳುಗಳನ್ನುಳ್ಳ (ಪುಂಸ್ಪಂಚವದನಃ) ಶ್ರೀ ನೃಸಿಂಹ ಮೂರ್ತಿಯು(ಇಹ) ಈ ಶ್ರೀರಂಗದಲ್ಲಿ (ದುರಿತಂ) ಪಾಪಗಳನ್ನು (ರುಂಧೇ) ನಾಶಗೊಳಿಸಿ ಕರುಣಿಸುತ್ತಾನೆ.

ಹಿರಣ್ಯನ ದೇಹವನ್ನು ಸ್ವಾಮಿ ಸೀಳಿದಾಗ ಆ ದೇಹದಿಂದ ಹೊರಟ ರಕ್ತದ ಧಾರೆ ಸ್ವಾಮಿಯ ಕೇಸರಗಳನ್ನು ನೆನೆಸಿತು. ಇದನ್ನು ಇಲ್ಲಿ ಉತ್ಪ್ರೇಕ್ಷಿ

ಸಿರುವುದು ಹೀಗಿದೆ. ಶತ್ರುವಿನ ಮೇಲಿನ ಕೋಪದಿಂದ ಅಗ್ನಿಯಂತೆ ಜ್ವಲಿ ಸುತ್ತಾ ಇದ್ದ ನೇತ್ರಾಗ್ನಿಯನ್ನು ಆರಿಸಲು ಶ್ರೀದೇವಿ ತಾಂಬೂಲದ ಗುಂಡೂಷ ವನ್ನು ಆ ಕಣ್ಣಿನ ಮೇಲೆ ಉಗಿದಳೋ ಎಂಬಂತೆ ಅದು ಕಂಡು ಬಂದಿತು. ಶ್ರೀ ದೇವಿಯೂ ಮಧ್ಯೆ ಪ್ರವೇಶಿಸುವಷ್ಟು ಅವನ ಕೋಪ ಹೆಚ್ಚಾಗಿತ್ತೆಂದು ಹೇಳಲಾಗಿದೆ.

**ನಖಾಗ್ರಗ್ರಸ್ತೇಽಪಿ ದ್ವಿಷತಿ ನಿಜಭಕ್ತದ್ರುಹಿ ರುಷಃ —**
**ಪ್ರಕರ್ಷಾದ್ವಿಷ್ಣುತ್ವಾದ್ವಿಗುಣಪರಿಣಾಹೋತ್ಕಟತನುಃ ।**
**ವಿರುದ್ಧೇ ವ್ಯೆಯಗ್ರೀ-ಸುಘಟಿತ-ಸಮಾನಾಧಿಕರಣೇ**
**ನೃಸಿಂಹತ್ವೇ ಬಿಭ್ರದ್ವರದ ಬಿಭರಾಮಾಸಿಥ ಜಗತ್ ॥ ॥೬೬॥**

(ವರದ) ವರಪ್ರದನಾದ ಸ್ವಾಮಿಯೇ, (ವಿರುದ್ಧೇ) ಒಂದರೊಡನೆ ಒಂದು ಸೇರದೆ ವಿರುದ್ಧವಾಗಿದ್ದಾಗ್ಯೂ (ವ್ಯೆಯಗ್ರೀಸುಘಟಿತ ಸಮಾನಾಧಿ ಕರಣೇ) ಆಶ್ರಿತರ ವಿರೋಧಿಯನ್ನು ತೊಲಗಿಸಬೇಕೆಂಬ ವ್ಯಗ್ರತೆಯಿಂದ ಅಧಿಕವಾಗಿ ಹೊಂದಿರುವಂತೆ ಒಂದೇ ಕಡೆ ಕೂಡಿಸಿದ ಸಮಾನಾಧಿಕರಣವುಳ್ಳ (ನೃಸಿಂಹತ್ವೇ) ನರತ್ವ ಮತ್ತು ಸಿಂಹತ್ವಗಳನ್ನು (ಬಿಭ್ರತ್) ಧರಿಸಿರುವ (ತ್ವಂ) ನೀನು (ನಿಜ ಭಕ್ತದ್ರುಹಿ) ಆಶ್ರಿತ ವಿರೋಧಿಯಾದ ಹಿರಣ್ಯನು, (ನಖಾಗ್ರಗ್ರಸ್ತೇಽಪಿ) ಉಗುರುಗಳ ಕೊನೆಯಿಂದ ನಾಶಮಾಡಲ್ಪಟ್ಟಿದ್ದಾಗ್ಯೂ (ರುಷಃ) ಕೋಪದ (ಪ್ರಕರ್ಷಾತ್)ಆಧಿಕ್ಯದಿಂದ (ವಿಷ್ಣುತ್ವಾ ದ್ವಿಗುಣ ಪರಿಣಾ ಹೋತ್ಕಟತನುಃ) ವಿಷ್ಣುತ್ವಕ್ಕಿಂತಲೂ ಇಮ್ಮಡಿಯಾದ ಹಿರಿಮೆಯನ್ನುಳ್ಳುದೂ ಭಯಂಕರವಾದುದೂ ಆದ ಶರೀರವನ್ನು ಹೊಂದಿದವನಾಗಿ (ಜಗತ್) ಪ್ರಪಂಚ ವನ್ನು (ಬಿಭರಾಮಾಸಿಥ) ನಿರ್ವಹಿಸಿದೆ; ಧರಿಸಿದೆ.

ಸ್ವಾಮಿ ಅಂಗುಳ್ಯಗ್ರದಿಂದ ರಾಕ್ಷಸನನ್ನು ಕೊಂದುಹಾಕಿದರೂ ಆ ಆಶ್ರಿತ ವಿರೋಧಿಯ ಬಗೆಗೆ ಅತ್ಯಧಿಕವಾದ ಕೋಪವನ್ನು ಹೊಂದಿದನು. ಶ್ರೀ ನೃಸಿಂಹನು ಲೋಕವನ್ನೆಲ್ಲಾ ವ್ಯಾಪಿಸಿದನು. ದಿವ್ಯಮಂಗಳವಿಗ್ರಹವನ್ನೂ

ಅಪೂರ್ವವಾಗಿ ಸ್ವಾಮಿ ಇಲ್ಲಿ ನರತ್ವ ಸಿಂಹತ್ವಗಳನ್ನು ಹೊಂದಿರುವಂತೆ ಹೊಂದಿದ. 'ವಿಷ್ಣು' ಎಂಬ ಶಬ್ದಕ್ಕೆ ಹೊಂದುವಂತಹ ವ್ಯಾಪಕತ್ವವನ್ನು ನೀನು ಹೊಂದಿರುವಂತೆ ನೃಸಿಂಹನಾಗಿ ಎಲ್ಲವನ್ನೂ ವ್ಯಾಪಿಸಿದೆ. 'ಸ್ತಂಭೈಕವರ್ಜಮಧುನಾ ನರಸಿಂಹಗರ್ಭಂ' ಎಂಬ ಶ್ರೀ ಸೂಕ್ತಿಯನ್ನು ಇಲ್ಲಿ ಸ್ಮರಿಸಬಹುದು.

ದೈತ್ಯೌದಾರ್ಯೇಂದ್ರಯಾಂಚಾ-ವಿಹತಿಮಪನಯನ್
ವಾಮನೋ ಅರ್ಥೀ ತ್ವಮಾಸೀಃ
ವಿಕ್ರಾಂತೇ ಪಾದಪದ್ಮೇ ತ್ರಿಜಗದಣುಸಮಂ
ಪಾಂಸುಲೀಕೃತ್ಯ ಲಿಲ್ಯೇ
ನಾಭೀಪದ್ಮಶ್ಚ ಮಾನಕ್ಷಮಮಿವ ಭುವನಗ್ರಾಮಮನ್ಯಂ
ಸಿಸೃಕ್ಷುಃ
ತಸ್ಥೌ ರಂಗೇಂದ್ರವೃತ್ತೇ ತವ ಜಯಮುಖರೋ
ಡಿಂಡಿಮಸ್ತತ್ರ ವೇದಃ ॥ ॥೬೭॥

(ರಂಗೇಂದ್ರ) ಶ್ರೀ ರಂಗನಾಥನೇ, (ವಾಮನಃ ತ್ವಂ) ಶ್ರೀ ವಾಮನಾವತಾರವನ್ನೆತ್ತಿದ ನೀನು (ದೈತ್ಯೌದಾರ್ಯ - ಇಂದ್ರಯಾಂಚಾ ವಿಹತಿಂ ಅಪನಯನ್) ಅಸುರನಾದ ಮಹಾಬಲಿಯ ಔದಾರ್ಯವೇನು, ಇಂದ್ರನ ಯಾಚನೆಯೇನು ಇವೆರಡಕ್ಕೂ ನಿಷ್ಫಲತ್ವವನ್ನು ಹೋಗಲಾಡಿಸುವವನಾಗಿ (ಅರ್ಥೀ ಆಸೀಃ) ಮಹಾಬಲಿಯ ಪಕ್ಕದಲ್ಲಿ ಯಾಚಕನಾಗಿ ಆದೆ. ಅನಂತರ (ತ್ರಿ ಜಗತ್) ಮೂರು ಲೋಕವೂ (ಅಣುಸಮಂ) ಪರಮಾಣು ಸಮಾನವಾಗಿ (ವಿಕ್ರಾಂತೇ ಪಾದಪದ್ಮೇ) ತನ್ನನ್ನು ಅಳೆಯುವ ಪಾದ ಕಮಲಗಳಲ್ಲಿ (ಪಾಂಸುಲೀಕೃತ್ಯ) ಧೂಳು ಅಂಟಿಕೊಂಡಿರುವಂತೆ ಆಗಿ (ಲಿಲ್ಯೇ) ಲಯವನ್ನು ಹೊಂದಿದುದಾಯಿತು.(ನಾಭೀಪದ್ಮಶ್ಚ) ನಾಭಿಯ ಕಮಲವೋ ಎಂದರೆ (ಮಾನಕ್ಷಮಾ) ಅಳೆಯುವುದಕ್ಕೆ ತಕ್ಕುದಾದ (ಅನ್ಯಂ) ಮತ್ತೊಂದು (ಭುವನ ಗ್ರಾಮಂ) ಲೋಕ ಸಮೂಹವನ್ನು (ಸಿಸೃಕ್ಷುಃ ಇವ) ಸೃಜಿಸ

ಲಿಚ್ಛಿಸಿದಂತೆ (ತಸ್ಥೌ) ಇದ್ದಿತು. (ತವ) ನಿನ್ನ (ತತ್ರವೃತ್ತೌ) ಆ ತ್ರಿವಿಕ್ರಮನ ಅವತಾರದಲ್ಲಿ (ವೇದಃ) ವೇದವು (ಜಯಮುಖರಃ) ವಿಜಯ ಧ್ವನಿಯನ್ನು ಮೊಳಗುವ (ಡಿಂಡಿಮಃ) ದೊಡ್ಡ ಭೇರಿಯಾಗಿ ಆಗಿದೆ.

ಸ್ವಾಮಿ ವಾಮನನಾಗಿ ಮಹಾಬಲಿಯಲ್ಲಿ ಮೂರಡಿ ನೆಲವನ್ನು ಯಾಚಿಸಿದ. ಇದರಿಂದ ಬಲಿಯ ಔದಾರ್ಯವನ್ನು ಬೆಳಕಿಗೆ ತಂದ. ಇಂದ್ರನ ಬೇಡಿಕೆಯನ್ನೂ ಸಫಲಗೊಳಿಸಿದ. ಹಾಗೆ ಸ್ವಾಮಿ ಬೇಡದೆ ಹೋಗಿದ್ದರೆ ಇವೆರಡೂ ನಿಷ್ಫಲವಾಗಿ ಹೋಗುತ್ತಿದ್ದವು. ಮೂರು ಲೋಕವನ್ನೂ ತನ್ನ ಶ್ರೀಪಾದದಿಂದ ಅಳೆದಾಗ ಆ ಲೋಕಗಳು ಸ್ವಾಮಿಯ ಪಾದದಲ್ಲಿ ಧೂಳಿನ ಕಣಗಳಂತೆ ಅಂಟಿಕೊಂಡಿದ್ದವಂತೆ. ಅಂಥ ಬೃಹದ್ರೂಪವನ್ನು ಸ್ವಾಮಿ ಧರಿಸಿದ. ಭಗವಂತನ ನಾಭೀ ಕಮಲ ಇನ್ನೊಂದು ಲೋಕವನ್ನು ಸೃಜಿಸಲಿಚ್ಛಿಸುವಂತೆ ಇತ್ತು.

'ಶಿಲಂಬಿನಿಡೈ ಶಿರು ಪರಲ್ ಪೋಲ್ ಪೆರಿಯ ಮೇರು ತಿರುಕ್ಕುಳಂಬಿಲ್ ಕಣಕಣಪ್ಪ ತಿರುವಾಕಾರಂ ಕುಲುಂಗ' ಎಂದು ತಿರುಮಂಗೈಯಾಳ್ವಾರ್ರವರು ಅನುಭವಿಸಿರುವುದನ್ನು ಕಾಣಬಹುದು.

ಭವಾನ್ ರಾಮೋ ಭೂತ್ವಾ ಪರಶುಪರಿಕರ್ಮಾ
ಭೃಗುಕುಲಾತ್
ಅಲಾವೀದ್ಭೂಪಾಲಾನ್ ಪಿತೃಗಣಮತಾಪ್ಸೀತ್
ತದಸೃಜಾ ।
ಭುವೋ ಭಾರಾಕ್ರಾಂತಂ ಲಘುತಲಮುಪಾಚೀಕ್ಲಪದಿತಿ
ದ್ವಿಷಾಮುಗ್ರಂಪಶ್ಯೋಽಪ್ಯನಘ ಮಮ
ಮಾಜೀಗಣದಘಮ್ ॥ ॥೭೮॥

(ಹೇ ಅನಘ) ದೋಷರಹಿತನಾದ ಸ್ವಾಮಿಯೇ, (ಭವಾನ್) ನೀನು (ಭೃಗು ಕುಲಾತ್) ಭೃಗುಕುಲದಲ್ಲಿ ಜನಿಸಿ (ಪರಶು ಪರಿಕರ್ಮಾ) ಕೊಡಲಿ

ಯನ್ನು ಆಯುಧವನ್ನಾಗಿ ಹೊಂದಿ (ರಾಮಃ ಭೂತ್ವಾ)ಪರಶುರಾಮನಾಗಿ ಆಗಿ (ಭೂಪಾಲಾನ್) ದುಷ್ಟ ಕ್ಷತ್ರಿಯರನ್ನು (ಅಲಾವೀತ್) ಕತ್ತರಿಸಿ ಹಾಕಿದೆ. (ತದಸೃಜಾ) ಅವರ ರಕ್ತದಿಂದ (ಪಿತೃಗಣಂ) ನಿನ್ನ ಪಿತೃಗಳ ಸಮೂಹಕ್ಕೆ (ಅತಾರ್ಪ್ಸೀತ್) ತರ್ಪಣ ಮಾಡಿದೆ. (ಭಾರಾಕ್ರಾಂತಂ) ಭಾರದಿಂದ ಕೂಡಿದ (ಭುವಃ ತಲಂ) ಭೂತಲವನ್ನು (ಲಘು) ಭಾರ ಹೋಗಿ ಹಗುರವಾಗುವಂತೆ (ಉಪಾಚೀಕ್ಲಪತ್) ಮಾಡಿ ಕರುಣಿಸಿದೆ. (ಇತಿ) ಹೀಗೆ (ದ್ವಿಷಾಂ) ಶತ್ರುಗಳಿಗೆ (ಉಗ್ರಂಪಶ್ಯಃ ಅಪಿ) ಭಯಂಕರನಾಗಿ ಇರುತ್ತಿದ್ದರೂ (ಮಮ) ನನ್ನ (ಅಘಂ) ಪಾಪವನ್ನು (ಮಾ ಅಜೀಗಣತ್) ಗಣನೆಗೆ ತೆಗೆದುಕೊಳ್ಳಬೇಡ.

ಪರಶುರಾಮಾವತಾರದ ವರ್ಣನೆ ಇಲ್ಲಿದೆ.

'ವೆನ್ರಿ ಮಾಮಳುವೇಂದಿ ಮುರ್ಱಮಙ್ ಮಿಶೈ ಮನ್ನರೈ ಮೂವೆಳು ಕಾಲ್‌ಕೊನ್ರ ದೇವ' ಎಂದು ತಿರುಮಂಗೈಯಾಳ್ವಾರ್ರವರು ಹೇಳಿದಂತೆ ಕ್ಷತ್ರಿಯರನ್ನು ಇಪ್ಪತ್ತೊಂದು ಬಾರಿ ನಾಶ ಮಾಡಿ ಅವರ ರಕ್ತದಿಂದ ಕೂಡಿದ ಮಡುವಿನಲ್ಲಿ ಪಿತೃಗಳಿಗೆ ತರ್ಪಣವಿತ್ತನು ಪರಶುರಾಮ. ಭೂಮಿಗೆ ಉಂಟಾಗಿದ್ದ ದುಷ್ಟ ಕ್ಷತ್ರಿಯರ ಭಾರವನ್ನು ಇಳುಹಿದನು ಶ್ರೀ ಪರಶುರಾಮ. ಅವನು ಕರುಣೆಯಿಂದ ನಮ್ಮ ಪಾಪವನ್ನು ಕ್ಷಮಿಸಲಿ ಎಂದು ಬೇಡಿದೆ ಇಲ್ಲಿ.

**ಮನುಜಸಮಯಂ ಕೃತ್ವಾ ನಾಥಾವತೇರಿಥ ಪದ್ಮಯಾ**
**ಕ್ವಚನ ವಿಪಿನೇ ಸಾ ಚೇದಂತರ್ಧಿನರ್ಮಾ ವಿನಿರ್ಮಮೇ ।**
**ಕಿಮಥ ಜಲಧಿಂ ಬಧ್ವಾ ರಕ್ಷೋ ವಿಧೀಶವರೋದ್ಧತಂ**
**ಬಲಿಮುಖಕುಲೋಚ್ಛಿಷ್ಟಂ ಕುರ್ವನ್ರಿಪುಂ ನಿರಪತ್ರಯಃ ॥ ॥೬೯॥**

(ಹೇ ನಾಥ) ಸ್ವಾಮಿಯೇ, (ಮನುಜ ಸಮಯಂ ಕೃತ್ವಾ) ಮನುಷ್ಯನಾಗಿ ಜನಿಸಲು ಬೇಕಾದ ಸಂಕಲ್ಪವನ್ನು ಮಾಡಿ (ಪದ್ಮಯಾಸಹ) ಶ್ರೀದೇವಿಯೊಡನೆ (ಅವತೇರಿಥ) ಅವತಾರ ಮಾಡಿದೆ. ಆಗ (ಸಾ) ಆ ದೇವಿಯು (ಕ್ವಚನವಿಪಿನೇ)

ಅಶೋಕವನವೆಂಬುವ ಒಂದು ಉಪವನದಲ್ಲಿ (ಅಂತರ್ಧಿನರ್ಮ) ಮರೆಯಾ ಗಿರುವಂತಹ ಒಂದು ಆಟವನ್ನು (ವಿನಿರ್ಮಮೇ ಚೇತ್) ಮಾಡಿದುದೇ ಆಗಿದ್ದರೆ (ಅಥ) ಆದಕ್ಕಾಗಿ (ಜಲಧಿಂ ಬಧ್ವಾ) ಸಮುದ್ರಕ್ಕೆ ಸೇತುವೆಯನ್ನು ಕಟ್ಟಿ( ವಿಧೀಶವರೋದ್ಧತಂ) ಬ್ರಹ್ಮ ರುದ್ರರುಗಳು ಕೊಟ್ಟ ವರದಿಂದ ಗರ್ವಿತ ನಾಗಿದ್ದ (ರಕ್ಷಃ) ರಾಕ್ಷಸನಾದ (ರಿಪುಂ) ಶತ್ರುವನ್ನು (ಬಲಿಮುಖಕುಲೋಚ್ಛಿ ಷ್ಟಂಕುರ್ವನ್) ಕಾಗೆಗಳ ಸಮೂಹವು ತಿಂದ ಎಂಜಲನ್ನಾಗಿ ಮಾಡಿ (ನಿರ ಪತ್ರಯಃ) ನಾಶ ಮಾಡಿದೆ. (ಕಿಂ) ಇದು ಏಕೆ ?

ಶ್ರೀ ರಾಮಾವತಾರದಲ್ಲಿ ಮಾಡಿದ ಲೀಲೆಗಳನ್ನು ಇಲ್ಲಿ ವರ್ಣಿಸಿದ್ದಾರೆ. ತನ್ನ ಸಂಕಲ್ಪಕ್ಕೆ ಸರಿಯಾಗಿ ಅವನು ಮನುಷ್ಯನಾಗಿ ಅವತರಿಸಿದ ದೇವಿ ಯೊಡನೆ. ರಾಕ್ಷಸನು ಅಪಹರಿಸುವಂತಹ ಒಂದು ವ್ಯಾಜವನ್ನು ಏರ್ಪಡಿಸಿ ಸ್ವತಂತ್ರಳಾದ ಆ ಸೀತಾದೇವಿ ಅಶೋಕವನದಲ್ಲಿ ತಾನು ಮರೆಯಾಗಿರುವಂತೆ ಮಾಡಿದಳು. ಹೀಗೆ ದೇವಿ ಮಾಡಿರಲು ಆ ರಾಕ್ಷಸನನ್ನು ಕೊಲ್ಲಲು ಅಷ್ಟು ಪ್ರಯತ್ನ ಮಾಡಿದೆಯಲ್ಲಾ ಏಕೆ? ಸೇತುಬಂಧನ ಮಾಡಿ ಕಪಿಗಳೊಡನೆ ಲಂಕೆಗೆ ಸಾರಿ ರಾವಣನನ್ನು ಸಂಹರಿಸಿದೆ. ಸ್ವತಂತ್ರಳಾದ ದೇವಿ ತನ್ನ ಇಚ್ಛೆಯಿಂದಲೇ ಮರೆಯಾದ ಹಾಗೆ ಮಾಡಿಕೊಳ್ಳಲು ಇದರಲ್ಲಿ ರಾವಣನ ದೋಷವೇನು ? ಆ ದೇವಿ ನಿನ್ನ ಈ ಸಂಕಲ್ಪ ನೆರವೇರುವುದಕ್ಕೆ ತಾನೇ ಹಾಗೆ ಮರೆಯಾದಳು.

**ಯದ್ದ್ಯೂತೇ ವಿಜಯಾಪದಾನಗಣನಾ**
**ಕಾಲಿಂಗದಂತಾಂಕುರೈಃ**
**ಯದ್ವಿಶ್ಲೇಷಲವೋಽಪಿ ಕಾಲಿಯಭುವೇ**
**ಕೋಲಾಹಲಾಯಾಭವತ್ ।**
**ಮೋತ್ಸೇನಾಪಿ ಚ ಯಸ್ಯ ಗೋಪವನಿತಾಃ ಕೃಷ್ಣಾಗಸಾಂ**
**ವ್ಯಸ್ಮರನ್**

**ತಂ ತ್ವಾಂ ಕ್ಷೇಮಕೃಷೀವಲಂ ಹಲಧರಂ ರಂಗೇಶ ಭಕ್ತ್ಯಾಸ್ಮಹೇ ॥ ॥೭೦॥**

(ರಂಗೇಶ) ಶ್ರೀ ರಂಗನಾಥನೇ, (ಯತ್ ದ್ಯೂತೇ) ಬಲರಾಮನಾದ ನಿನ್ನ ಯಾವ ಒಂದು ಜೂಜಾಟದಲ್ಲಿ (ವಿಜಯಾಪದಾನಗಣನಾ) ಇಷ್ಟು ಆಟಗಳನ್ನು ಗೆದ್ದೆವೆಂಬ ಲೆಕ್ಕವಾದುದು (ಕಾಳಿಂಗ ದಂತಾಂಕುರೈಃ) ಕಳಿಂಗರಾಜನ ಹಲ್ಲಿನ ಬೇರುಗಳಿಂದ ಆಯಿತೋ, (ಯದ್ವಿಶ್ಲೇಷಲವಃ ಅಪಿ) ಯಾವ ಬಲ ರಾಮನು ಕ್ಷಣಮಾತ್ರ ಅಗಲಿದ್ದರೂ (ಕಾಲಿಯ ಭುವೇ) ಕಾಳಿಯ ನಾಗನಿಂದ ಆದ (ಕೋಲಾಹಲಾಯ) ಕೋಲಾಹಲಕ್ಕೆ ಅವಕಾಶವಾಗಿ (ಅಭವತ್) ಆಯಿತೋ (ಅಪಿಚ) ಮತ್ತೂ (ಯಸ್ಯ) ಯಾವ ಬಲರಾಮನ (ದೂತ್ಯೇನ) ದೂತಕೃತ್ಯದಿಂದ (ಗೋಪವನಿತಾಃ) ಗೋಪಸ್ತ್ರೀಯರು (ಕೃಷ್ಣಾಗಸಾಂ) ಕೃಷ್ಣನ ತಪ್ಪುಗಳನ್ನು (ವ್ಯಸ್ಮರನ್) ಮರೆತರೋ (ತಂ) ಅಂಥವನೂ (ಕ್ಷೇಮ ಕೃಷೀವಲಂ) ಆಶ್ರಿತರ ಕ್ಷೇಮಕ್ಕಾಗಿ ಕೃಷಿ ಮಾಡುವವನೂ (ಹಲ ಧರಂ) ನೇಗಿಲನ್ನು ಧರಿಸಿರುವವನೂ ಆದ (ತ್ವಾಂ) ನಿನ್ನನ್ನು (ಭಕ್ತ್ಯಾಸ್ಮಹೇ) ಪಡೆಯುವಂತಾಗಲಿ.

ಬಲರಾಮಾವತಾರದ ವರ್ಣನೆ ಇಲ್ಲಿದೆ. ಕಳಿಂಗದೇಶದ ರಾಜನೊಡನೆ ಜೂಜಾಡುವಾಗ ಆ ಕಳಿಂಗ ಒಂದೊಂದು ಆಟದಲ್ಲಿ ಸೋತಾಗ ಬಲರಾಮ ಅವನ ಹಲ್ಲನ್ನು ಒಂದೊಂದಾಗಿ ಉದುರಿಸಿದನು. ಹಲ್ಲುಗಳೆಲ್ಲಾ ಬಿದ್ದ ಮೇಲೆ ಆಟ ಮುಗಿಯಿತು. ಎಷ್ಟು ಆಟದಲ್ಲಿ ಬಲರಾಮ ಗೆದ್ದನು ಎನ್ನುವುದನ್ನು ಆ ಉದುರಿಬಿದ್ದ ಹಲ್ಲುಗಳನ್ನು ಎಣಿಸಿ ಅವನು ತಿಳಿದನಂತೆ. ಕೃಷ್ಣನ ಬಗೆಗೆ ಗೋಪಿಯರಿಗೆ ಕೋಪ ಬಂದಿದ್ದಾಗ ಬಲರಾಮನನ್ನು ಅವರ ಬಳಿಗೆ ಮೊದಲು ಕೃಷ್ಣ ಕಳುಹಿಸಿದನಂತೆ. ಆಗ ಬಲರಾಮನ ಮಾತುಗಳಿಂದ ಆವರ ಕೋಪ ವೆಲ್ಲಾ ಮಾಯವಾಯಿತು. ಹಲಧರನಾದ ಬಲರಾಮನು ಜನರಿಗೆ ಕ್ಷೇಮ ವನ್ನುಂಟು ಮಾಡುವ ಕೃಷೀವಲನಾಗಿದ್ದಾನೆ ಎಂದು ವರ್ಣಿಸಿರುವುದು ಬಹಳ ಮನೋಜ್ಞವಾಗಿದೆ.

**ಆಕಂಠ-ವಾರಿಭರ-ಮಂಥರ ಮೇಘದೇಶ್ಯಂ**
**ಪೀತಾಂಬರಂ ಕಮಲಲೋಚನಪಂಚಹೇತಿ ।**
**ಬ್ರಹ್ಮ ಸ್ತನಂಧಯಮಯಾಚತ ದೇವಕೀ ತ್ವಾಂ**
**ಶ್ರೀರಂಗಕಾಂತ ಸುತಕಾಮ್ಯತಿ ಕಾಽಪರೈವಂ ॥** ॥೬೧॥

(ಶ್ರೀರಂಗಕಾಂತ) ಶ್ರೀ ರಂಗನಾಥನೇ, (ದೇವಕೀ) ದೇವಕಿಯು (ಆಕಂಠ ವಾರಿಭರ ಮಂಥರ ಮೇಘದೇಶ್ಯಂ) ಕುತ್ತಿಗೆಯವರೆಗೂ ತುಂಬಿದ ಜಲಭಾರವನ್ನುಳ್ಳುದೂ ನಿಧಾನವಾಗಿ ಚಲಿಸುವುದೂ ಆದ ಮೇಘದಂತಿರುವುದೂ (ಪೀತಾಂಬರಂ) ಪೀತಾಂಬರವನ್ನುಧರಿಸಿರುವುದೂ (ಕಮಲಲೋಚನ ಪಂಚ ಹೇತಿ) ತಾವರೆಯಂತಹ ಕಣ್ಣುಗಳನ್ನು ಉಳ್ಳದೂ ಪಂಚಾಯುಧಗಳನ್ನುಳ್ಳುದೂ ಆದ (ಬ್ರಹ್ಮ) ಪರಬ್ರಹ್ಮವಸ್ತುವಾದ (ತ್ವಾಂ) ನಿನ್ನನ್ನು (ಸ್ತನಂಧಯಂ) ಮಗುವಾಗಿ (ಅಯಾಚತ) ಬೇಡಿದಳು. (ಅಪರಾ ಕಾ) ಬೇರೆಯಾರು ತಾನೇ (ಏವಂ) ಹೀಗೆ (ಸುತಕಾಮ್ಯತಿ) ಪುತ್ರ ಕಾಮನೆಯನ್ನು ಹೊಂದಿರುವಳು ? ದೇವಕಿ ಒಬ್ಬಳೇ ಇಂಥ ವಿಲಕ್ಷಣವಾದ ಸ್ತ್ರೀ ಆಗಿದ್ದಳು.

ಕೃಷ್ಣಾವತಾರದ ಅನುಭವ ಇಲ್ಲಿಂದ ಆಗಿದೆ. ದೇವಕಿಯು ಭಾಗ್ಯವನ್ನು ಇಲ್ಲಿ ಕೊಂಡಾಡಿದ್ದಾರೆ. ದೇವಕಿಯು ಭಗವಂತನೇ ತನಗೆ ಮಗನಾಗಬೇಕೆಂದು ಬೇಡಿದಳು. ನೀರುಂಡ ಮೇಘದಂತೆ ಶ್ಯಾಮಲನೂ, ಪದ್ಮನಯನನೂ, ಪಂಚಾಯುಧ ಧಾರಿಯೂ ಆದ ಸ್ವಾಮಿ ಆ ದೇವಕಿಗೆ ಪುತ್ರನಾಗಿ ಜನಿಸಿದನು. ಅಂಥ ಅಪೂರ್ವವಾದ ಭಾಗ್ಯಅವಳದು !

**ಶೈಲೋಽಗ್ನಿಶ್ಚ ಜಲಾಂಬಭೂವ ಮುನಯೋ**
**ಮೂಢಾಂಬಭೂವುರ್ಜಡಾಃ**
**ಪ್ರಾಜ್ಞಾಮಾಸುರಗಾಸ್ಸಗೋಪಮಮೃತಾಮಾಸುಃ**
**ಮಹಾಶೀವಿಷಾಃ ।**
**ಗೋವ್ಯಾಘ್ರಾಸ್ಸಹಜಾಂಬಭೂವುರಪರೇ ತ್ವನ್ಯಾಂಬಭೂವುಃ**
**ಪ್ರಭೋ**

ತ್ವಂ ಶೇಷ್ವನ್ಯತಮಾಂ ಬಭೂವಿಥ ಭವದ್ವೇಣು
ಕ್ವಣೋನ್ಮಾದನೇ ॥ ॥೭೨॥

(ಪ್ರಭೋ) ದೇವನೇ, (ಭವದ್ವೇಣುಕ್ವಣೋನ್ಮಾದನೇ) ನಿನ್ನ ವೇಣು ಗಾನದಿಂದ ಉಂಟಾದ ಆನಂದಾತಿಶಯದಲ್ಲಿ (ಶೈಲಃ) ಬೆಟ್ಟವೂ (ಅಗ್ನಿಶ್ಚ) ಬೆಂಕಿಯೂ ಸಹ ( ಜಲಾಂಬಭೂವ ) ನೀರಾಗಿ ಕರಗಿ ಹೋಯಿತು. (ಮುನಯಃ) ಮುನಿಗಳು (ಮೂಢಾಂ ಬಭೂವುಃ) ಮೂಢರಾದರು. (ಜಡಾಃ) ಜಡವಾದ ಪದಾರ್ಥಗಳಾದ (ಅಗಾಃ) ಮರಗಳು (ಸಗೋಪಂ) ಗೋಪರು ಗಳೊಡನೆ (ಪ್ರಾಜ್ಞಾಮಾಸುಃ) ಮಹಾ ಜ್ಞಾನಿಗಳಾದರು. (ಮಹಾಶೀವಿಷಾಃ) ಭಯಂಕರವಾದ ಹಿರಿಯ ಹಾವುಗಳು (ಅಮೃತಾಮಾಸುಃ) ಅಮೃತಮಯ ವಾದವು. (ಗೋವ್ಯಾಘ್ರಾಃ) ಹಸುಗಳು ಹುಲಿಗಳೂ (ಸಹಜಾಂಬಭೂವು:) ಒಡಹುಟ್ಟಿದವಂತೆ ಆದವು. (ಅಪರೇತು) ಮತ್ತೆ ಕೆಲವು (ಅನ್ಯಾಂಬಭೂವುಃ) ಹೀಗೆಯೇ ಬೇರೆಯವರಂತೆ ಆದವು. ಹೆಚ್ಚು ಹೇಳಿ ಏನು ? (ತ್ವಂ) ನೀನೂ (ತೇಷು) ಹೀಗೆ ಪ್ರಭಾವಕ್ಕೊಳಗಾದ ಅವುಗಳಲ್ಲಿ (ಅನ್ಯತಮಾಂ ಬಭೂವಿಥ) ಒಬ್ಬನಾಗಿ ಇದ್ದೆ.

ಶ್ರೀ ಕೃಷ್ಣನ ವೇಣುಗಾನದ ಮಹಿಮೆಯನ್ನು ಇಲ್ಲಿ ವರ್ಣಿಸಿದೆ. ಶ್ರೀ ಕೃಷ್ಣನ ವೇಣುಗಾನದ ಪರಿಣಾಮ ಎಲ್ಲರ ಮೇಲೆ ಹೇಗೆ ಆಯಿತೆಂಬುದನ್ನು ಇಲ್ಲಿ ನಿರೂಪಿಸಿದೆ. ಎಲ್ಲರೂ ಅದರ ವಿಕಾರಕ್ಕೆ ಒಳಗಾದರು. ಭಗವಂತನ ವೇಣುನಾದದ ವೈಭವವನ್ನು ಪೆರಿಯಾಳ್ವಾರ್‌ರವರು 'ನಾವಲಮ್' ಎಂಬುವ ಪ್ರಬಂಧದಲ್ಲಿ ಬಹಳ ಮನೋಜ್ಞವಾಗಿ ವರ್ಣಿಸಿದ್ದಾರೆ—'ಇದು ಓರಪ್ಪುದಂ ಕೇಳೀರ್ ತೂವಲಂಬುರಿ ಉಡೈಯ ತಿರುಮಾಲ್ ತೂಯವಾಯಿಲ್ ಕುೞಲೋಶೈವೞಿಯೇ ಕೋವಲರ್ ಶಿರುಮಿಯರ್ ಇಳಂಕೊಂಗೈ ಕುದು ಹಲಿಪ್ಪ ಉಡಲುಳವಿೞ್ನ್ದು ಎಂಗುಂ ಕಾವಲುಂ ಕಡಂದು ಕಯಿರುಮಾಲೆ ಯಾಹಿ ವಂದು ಕವಿೞ್ನ್ದು ನಿನ್‌ರನರೇ' ಎಂದು ಆರಂಭಿಸಿ.

ಕಲ್ಕಿತನುರ್ಧರಣೀಂ ಲಘುಯಿಷ್ಯನ್
ಕಲಿಕಲುಷಾನ್ ವಿಲುನಾಸಿ ಪುರಾ ತ್ವಂ ।

**ರಂಗನಿಕೇತ ಲುನೀಹಿ ಲುನೀಹೀತಿ**
**ಅಖಿಲಮರುಂತುದಂ ಅದ್ಯ ಲುನೀಹಿ ||** ||೭೩||

(ರಂಗನಿಕೇತ) ಶ್ರೀರಂಗದಲ್ಲಿ ವಾಸಮಾಡುವ ಸ್ವಾಮಿಯೇ, (ಕಲ್ಕಿ ತನುಃತ್ವಂ) ಕಲ್ಕಿಶರೀರಿಯಾದ ನೀನು (ಧರಣೀಂ) ಭೂಮಿಯನ್ನು (ಲಘಯಿಷ್ಯನ್) ಭಾರವನ್ನು ಕಳೆದುಕೊಂಡು ಹಗುರವಾಗಿ ಆಗುವಂತೆ ಮಾಡುವವನಾಗಿ (ಕಲಿಕಲುಷಾನ್) ಕಲಿಗಾಲದ ಪಾಪವುಳ್ಳವರನ್ನು (ಪುರಾವಿಲುನಾಸಿ) ನಿರ್ಮೂಲವಾಗಿಸುವೆ. ಹಾಗೆ ನಿಧಾನಮಾಡದೆ (ಅದ್ಯ) ಇಂದೇ (ಅರುಂತುದಂ ಅಖಿಲಂ) ಕ್ರೂರವಾದ ಪ್ರಾಣಿವರ್ಗವೆಲ್ಲವನ್ನೂ (ಲುನೀಹಿ ಲುನೀಹಿ ಇತಿ) 'ಕತ್ತರಿಸಿ ಹಾಕಿದೆ ಕತ್ತರಿಸಿ ಹಾಕಿದೆ ಎಂದು ಹೇಳುತ್ತಲೇ (ಲುನೀಹಿ) ಕತ್ತರಿಸಿ ಹಾಕಿ ಕೃಪೆಮಾಡಬೇಕು.

ಕಲ್ಕ್ಯವತಾರ ಭವಿಷ್ಯತ್ಕಾಲದ ಅವತಾರ. ಎಂದೋ ಮಾಡಬೇಕೆಂದಿರುವ ಈ ಅವತಾರವನ್ನು ಇಂದೇ ಮಾಡಿ ಲೋಕದಲ್ಲಿರುವ ಪಾಪಿಗಳನ್ನು ನಾಶ ಮಾಡಬೇಕೆಂದು ಬೇಡಿದ್ದಾರೆ. 'ಪುರಾ' ಎಂಬುದು ಭವಿಷ್ಯತ್ಕಾಲದ ಅರ್ಥವನ್ನು ಸೂಚಿಸುತ್ತದೆ.

**ಆಸ್ತಾಂತೇಗುಣರಾಶಿವದ್ಗುಣಪರೀವಾಹಾತ್ಮನಾಂ ಜನ್ಮನಾಂ**
**ಸಂಖ್ಯಾಭೌಮನಿಕೇತನೇಷ್ವಪಿ ಕುಟೀಕುಂಜೇಷು ರಂಗೇಶ್ವರ ।**
**ಅರ್ಚ್ಯಃ ಸರ್ವಸಹಿಷ್ಣು ರರ್ಚಕಪರಾಧೀನಾಖಿಲಾತ್ಮಸ್ಥಿತಿಃ**
**ಪ್ರೀಣೀಷೇ ಹೃದಯಾಲುಭಿಸ್ತವ ತತಶ್ಶೀಲಾಜ್ಜಡೀ**
**ಭೂಯತೇ ||** ||೭೪||

(ರಂಗೇಶ್ವರ) ಶ್ರೀ ರಂಗನಾಥನೇ, (ತೇ) ನಿನ್ನ (ಗುಣರಾಶಿವತ್) ಗುಣಗಳ ಸಮೂಹದಂತೆ (ಗುಣಪರೀವಾಹಾತ್ಮನಾಂ) ಆ ಗುಣಗಳ ಪರೀವಾಹರೂಪವಾದ (ಜನ್ಮನಾಂ) ಅವತಾರಗಳಿಗೂ (ಸಂಖ್ಯಾ) ಎಣಿಕೆಯು (ಆಸ್ತಾಂ)

ಆಗಲಿ. (ಭೌಮನಿಕೇತನೇಷು) ಈ ಭೂಮಂಡಲದಲ್ಲಿರುವ ಆಲಯ ಗಳಲ್ಲಿಯೂ (ಕುಟೀಕುಂಜೇಷು ಅಪಿ) ಗೃಹಗಳಲ್ಲಿಯೂ ಆಶ್ರಮಗಳಲ್ಲಿಯೂ (ಅರ್ಚ್ಯಃ) ಆರಾಧಿಸಲ್ಪಡತಕ್ಕವನಾಗಿ (ಸರ್ವ ಸಹಿಷ್ಣುಃ) ಎಲ್ಲವನ್ನೂ ಸಹಿ ಸುವವನಾಗಿ (ಅರ್ಚಕ ಪರಾಧೀನಾಖಿಲಾತ್ಮಸ್ಥಿತಿಃ) ಅರ್ಚಕರಿಗೆ ಪರವಶವಾದ ಎಲ್ಲ ನಿಲುವನ್ನೂ ಹೊಂದಿದವನಾಗಿ (ಪ್ರೀಣೀಷೇ) ನಲಿಯುತ್ತಿದ್ದೀಯೆ. (ತತಃ) ಅಂಥ (ತವಶೀಲಾತ್) ನಿನ್ನ ಶೀಲ ಗುಣದ ಕಾರಣ (ಹೃದಯಾಲುಭಿಃ ಜಡೀಭೂಯತೇ) ಸಹೃದಯದಿಂದ ಮೋಹಕ್ಕೊಳಗಾಗಲ್ಪಡುತ್ತದೆ. ಎಂದರೆ ಸಹೃದಯರು ಮೋಹಿಸುತ್ತಾರೆ.

ಅರ್ಚಾವತಾರಗಳ ಪ್ರಸ್ತಾವ ಇಲ್ಲಿ ಇದೆ. ವಿಭವಾವತಾರಗಳಲ್ಲಿ ದಶಾವ ತಾರಗಳು ಮುಖ್ಯವಾದರೂ ಆ ಅವತಾರಗಳನ್ನು ಎಣಿಕೆ ಮಾಡುವುದಕ್ಕಾ ಗುವುದಿಲ್ಲ ಎಂಬ ಭಾವ. ಹೇಗೆ ಭಗವಂತನ ಗುಣಗಳಿಗೆ ಲೆಕ್ಕವಿಲ್ಲವೋ, ಹಾಗೆಯೇ ಅವನ ಅವತಾರಗಳನ್ನೂ ಎಣಿಸುವುದಕ್ಕಾಗುವುದಿಲ್ಲ. ಸಹೃದಯರು ಭಗವಂತನು ಅರ್ಚಾವತಾರಿಯಾಗಿರುವ ಸೌಶೀಲ್ಯವನ್ನು ಕಂಡು ಮೋಹಿತ ರಾಗುತ್ತಾರೆ. ಅರ್ಚಾವತಾರದ ಪರಮಸೌಲಭ್ಯವನ್ನು ಇಲ್ಲಿ ಅನುಸಂಧಾನ ಮಾಡಿದ್ದಾರೆ. 'ತಮರುಹಂದದು ಎವ್ವುರುವುಂ" ಎಂದಂದೆ ಸ್ವಾಮಿ ಭಕ್ತರ ಇಚ್ಛೆಗನುಸಾರ ಅರ್ಚಾರೂಪಿಯಾಗಿ ಸರ್ವರಿಂದಲೂ ಪೂಜೆಯನ್ನು ಕೈಕೊ ಳ್ಳುವ ಆಶ್ಚರ್ಯವನ್ನು ಇಲ್ಲಿ ವರ್ಣಿಸಿದೆ.

ಶ್ರೀಮದ್ವ್ಯೋಮನಿ ಸೀಮವಾಙ್ಮನಸಯೋಃ
ಸರ್ವೇವತಾರಾಃ ಕ್ವಚಿತ್
ಕಾಮೇ ವಿಶ್ವಜನೀನಮೇತದಿತಿ ಧೀಃ ಶ್ರೀರಂಗಧಾಮನ್ಯಥೆ ।
ಆರ್ತಸ್ವಾಗತಿಕೈಃ ಕೃಪಾಕಲುಷಿತೈಃ ಆಲೋಕಿತೈಃ
ಆರ್ದ್ರಯನ್
ವಿಶ್ವತ್ರಾಣ ವಿಮರ್ಶನಸ್ಖಲಿತಯಾ ನಿದ್ರಾಸಿ
ಜಾಗರ್ಯಯಾ ॥ ॥೭೫॥

(ಶ್ರೀ ಮದ್ವ್ಯೋಮ) ಪರಮ ಪದವು (ನಾಙ್ಮನ ಸಯೋಃ) ವಾಕ್ಕಿಗೂ ಮನಸ್ಸಿಗೂ (ನ ಸೀಮ) ಎಟಕುವುದಿಲ್ಲ. (ಸರ್ವೇ ಅವತಾರಾಃ) ಎಲ್ಲ ವಿಭವಾವತಾರಗಳೂ (ಕ್ವಚಿತ್ ಕಾಲೇ) ಯಾವುದೋ ಕೆಲ ಸಮಯದಲ್ಲಿ ಆಗಿ ಹೋದವು. (ಏತತ್) ಈ ಅರ್ಚಾವತಾರದ ನಿಲುವು (ವಿಶ್ವಜನೀನಂ) ಸಕಲ ಜನರಿಗೂ ಹಿತವಾದುದು, (ಇತಿಧೀಃ) ಹೀಗಿರುವ ಸಂಕಲ್ಪವನ್ನು ಹೊಂದಿ (ಶ್ರೀ ರಂಗಧಾಮನಿ) ಶ್ರೀರಂಗದ ದೊಡ್ಡಮಂದಿರದಲ್ಲಿ (ಆರ್ತಸ್ವಾಗತಿಕೈಃ) ಆರ್ತರನ್ನು ನೋಡಿ ಕುಶಲ ಪ್ರಶ್ನೆ ಮಾಡಿ ಸ್ವಾಗತಿಸತಕ್ಕವೂ (ಕೃಪಾ ಕಲುಷಿತೈಃ) ಕೃಪೆಯಿಂದ ಕದಡಿ ಚೇತನರ ಗುಣದೋಷವನ್ನು ವಿಚಾರಿಸದವೂ ಆದ (ಆಲೋಕಿತೈಃ) ಕಟಾಕ್ಷಗಳಿಂದ (ಆರ್ದ್ರಯನ್) ನೀನು ತಾಪತ್ರಯಾತು ರರಿಗೆ ತಂಪನ್ನುಂಟುಮಾಡುವವನಾಗಿ (ವಿಶ್ವತ್ರಾಣ ವಿಮರ್ಶನ ಸ್ಖಲಿತಯಾ ಜಾಗರ್ಯಯಾ) ಪ್ರಪಂಚವನ್ನು ರಕ್ಷಿಸಬೇಕೆಂಬ ಚಿಂತೆಯೊಡನೆ ಕೂಡಿದ ಎಚ್ಚರದಿಂದ (ನಿದ್ರಾಸಿ) ಯೋಗ ನಿದ್ರೆಮಾಡುತ್ತಿದ್ದೀಯೆ.

ಅರ್ಚಾವತಾರಸೌಶೀಲ್ಯವನ್ನು ಶ್ರೀ ರಂಗನಾಥನಲ್ಲಿ ಅನುಸಂಧಾನ ಮಾಡಿದ್ದಾರೆ. ಭಗವಂತನು ತನ್ನ ಪರರೂಪವಾಗಲೀ ವಿಭವಾವತಾರವಾಗಲೀ ನಾಡಿನ ಜನರಿಗೆ ಉಪಜೀವ್ಯವಾಗದ ಕಾರಣ ಈ ಲೋಕದಲ್ಲಿ ಶ್ರೀರಂಗ ಕ್ಷೇತ್ರ ದಲ್ಲಿ ಬಂದು ಅರ್ಚಾರೂಪಿಯಾಗಿ ಕಂಗೊಳಿಸಿದನೆಂದು ಇಲ್ಲಿ ಅನುಭವಿಸಿದ್ದಾರೆ. ಭಗವಂತನ ಕಟಾಕ್ಷ ವೀಕ್ಷಣದ ವೈಲಕ್ಷಣ್ಯವನ್ನು ವರ್ಣಿಸಿದ್ದಾರೆ. ಈ ಯೋಗ ನಿದ್ರೆ ಜಗದ್ರಕ್ಷಣ ಚಿಂತೆಯೊಡನೆ ಕೂಡಿದುದು ಆಗಿದೆ.

**ಸರ್ಗಾಭ್ಯಾಸವಿಶಾಲಯಾ ನಿಜಧಿಯಾ ಜ್ಞಾನನ್ನನಂತೇಶಯಂ**

**ಭಾರತ್ಯಾ ಸಹಧರ್ಮಚಾರರತಯಾ ಸ್ವಾಧೀನ ಸಂಕೀರ್ತನಃ ।**

**ಕಲ್ಪಾನೇನ ಬಹೂನ್ ಕಮಂಡಲುಗಲದ್ಗಂಗಾ**

**ಪ್ಲುತೋಽಸ ಪೂಜಯತ್**

**ಬ್ರಹ್ಮಾ ತ್ವಾಂ ಮುಖಲೋಚನಾಂಜಲಿಪುಟೈಃ**

**ಪದ್ಮೈರಿವಾವರ್ಜಿತೈಃ ॥ ॥೭೬॥**

(ಕಮಂಡಲು ಗಲದ್ಗಂಗಾಪ್ಲುತಃ) ಕಮಂಡಲದಿಂದ ಹರಿಯುತ್ತಿರುವ ಗಂಗೆಯು ನೀರಿನಲ್ಲಿ ಸ್ನಾನಮಾಡಿದ (ಬ್ರಹ್ಮಾ) ಚತುರ್ಮುಖ ಬ್ರಹ್ಮನು (ಅನಂತೇಶಯಂ ತ್ವಾಂ) ಶೇಷಶಾಯಿಯಾದ ನಿನ್ನನ್ನು (ಬಹೂನ್ ಏವ ಕಲ್ಪಾನ್) ಅನೇಕ ಕಲ್ಪಗಳ ಕಾಲ (ಸರ್ಗಾಭ್ಯಾಸ ವಿಶಾಲಯಾ ನಿಜ ಧಿಯಾ) ಸೃಷ್ಟಿ ಮಾಡುವ ಅಭ್ಯಾಸದಿಂದ ವಿಶಾಲವಾದ ತನ್ನ ಬುದ್ಧಿಯಿಂದ (ಜಾನನ್) ಧ್ಯಾನಿಸುತ್ತಾ ಇದ್ದು (ಸಹಧರ್ಮಚಾರರತಯಾ) ತನ್ನ ಸಹ ಧರ್ಮಿಣಿಯಾದ (ಭಾರತ್ಯಾ) ಸರಸ್ವತಿಯಿಂದ (ಸ್ವಾಧೀನ ಸಂಕೀರ್ತನಃ) ತನಗಧೀನವಾದ ಸಂಕೀರ್ತನವನ್ನು ಹೊಂದಿದವನಾಗಿ (ಆವರ್ಜಿತೈಃ) ಸಂಪಾದಿಸಲಾದ (ಪದ್ಮೈಃ ಇವ ಸ್ಥಿತೈಃ) ಪದ್ಮಗಳ ಹಾಗಿರುವ (ಮುಖಲೋಚನಾಂಜಲಿಪುಟೈಃ) ಮುಖಗಳಿಂದಲೂ ಕಣ್ಣುಗಳಿಂದಲೂ ಅಂಜಲಿಗಳಿಂದಲೂ (ಅಪೂಜಯತ್) ಪೂಜಿಸಿದನು.

ಶ್ರೀ ರಂಗನಾಥನು ಬ್ರಹ್ಮದೇವನಿಂದ ಮೊದಲು ಆರಾಧಿಸಲ್ಪಟ್ಟು ಅನಂತರ ಶ್ರೀರಾಮನಿಂದ ಆರಾಧಿಸಲ್ಪಟ್ಟು ಈಗ ಹೀಗೆ ಕಾವೇರಿಯ ನಡುವೆ ವಿರಾಜಮಾನನಾಗಿದ್ದಾನೆಂಬುದನ್ನು ಇಲ್ಲಿಂದ ನಿರೂಪಿಸಿದೆ. ಕುಲಶೇಖರರು 'ಎಮ್ಮಾಣ್ಬಿಲ್ ಅಯನ್ ನಾನ್ಗು ನಾವಿ ನಾಲುಂ ಎಡುತ್ತು ಏತ್ತಿ ಈರಿರಂಡು ಮುಹಮುಂಕೊಂಡು ಎಮ್ಮಾಡು ಎಳ್ಲಿಲ್ಪಣ್ಗಳ್ ಎಟ್ಟನೋಡುಂ ತೊಳ್ದು ಏತ್ತಿ ಇನಿದು ಇರೈಂಜ ನಿನ್ರ' ಎಂದು ವರ್ಣಿಸಿರುವುದಕ್ಕೆ ಇದು ಸದೃಶವಾಗಿದೆ. ಬಹಳ ಬುದ್ಧಿ ಕಾಶಲವುಳ್ಳವನು ಬ್ರಹ್ಮದೇವ. ಅಂಥ ವಿಲಕ್ಷಣವಾದ ಬುದ್ಧಿಯಿಂದ ಧ್ಯಾನಿಸಿದ. ವಾಗ್ದೇವತೆಯಾದ ಸರಸ್ವತಿಯು ಇವನಿಗೆ ವಲ್ಲಭೆಯಾದ ಕಾರಣ ಭಗವಂತನನ್ನು ನಿರರ್ಗಳವಾಗಿ ಸ್ತುತಿಸುವ ಸಾಮರ್ಥ್ಯ ಅವನಿಗೆ ಉಂಟೆಂದು ಹೇಳಿದೆ. ಬ್ರಹ್ಮನು ತನ್ನ ಕಮಂಡಲುವಿನ ತೀರ್ಥದಿಂದ ದೇವನ ಪಾದವನ್ನು ತೊಳೆದನೆಂಬುವುದನ್ನು ತಿರುಮಳಿಶೈ ಆಳ್ವಾರ್ ಅವರು 'ಕುರೈಕೊಂಡು ನಾನ್ಮುಹನ್ ಕುಂಡಿಹೈನೀರ್ ಪೆಯ್ದು ಮರೈಕೊಂಡ ಮಂದಿರತ್ತಾಲ್ ವಾಳ್ತ್ತಿ' ಎಂದು ಹೇಳಿದ್ದಾರೆ. 'ಅಪೂಜಯತ್' ಎಂಬುದು ಕಾಯಿಕವಾದ ವ್ಯಾಪಾರವನ್ನೂ ಸೂಚಿಸುತ್ತದೆ.

ಮನುಕುಲ-ಮಹೀಪಾಲ-ವ್ಯಾನಮ್ರಮೌಲಿಪರಂಪರಾ
ಮಣಿಮಕರಿಕಾ-ರೋಚಿರ್ನೀರಾಜಿತಾಂಘ್ರಿ-ಸರೋರುಹಃ ।
ಸ್ವಯಮಥ ವಿಭೋ ಸ್ವೇನ ಶ್ರೀರಂಗಧಾಮನಿ ಮೈಥಿಲೀ
ರಮಣವಪುಷಾ ಸ್ವಾರ್ಹಾಣ್ಯಾರಾಧನಾನ್ಯಪಿ ಲಂಭಿತಃ ॥ ॥೭೭॥

(ವಿಭೋ) ಸ್ವಾಮಿಯೇ, (ಮನುಕುಲ) ಮನುವಂಶದವರಾದ (ಮಹೀಪಾಲ) ಚಕ್ರವರ್ತಿಗಳ (ವ್ಯಾನಮ್ರ ಮೌಲಿಪರಂಪರಾ) ಬಾಗಿದ ಕಿರೀಟ ಪಂಕ್ತಿಗಳಲ್ಲಿರುವ (ಮಣಿ ಮಕರಿಕಾರೋಚಿಃ) ಮಕರೀ ಸ್ವರೂಪವಾದ ರತ್ನಗಳ ಕಾಂತಿಯಿಂದ (ನೀರಾಜಿತ) ಆರತಿ ಎತ್ತಲ್ಪಟ್ಟ (ಅಂಘ್ರಿ ಸರೋರುಹಃ) ಪಾದ ಕಮಲಗಳನ್ನುಳ್ಳ (ತ್ವಂ) ನೀನು (ಅಥ) ಮತ್ತು (ಮೈಥಿಲೀರಮಣವಪುಷಾ ಸ್ವೇನ) ಶ್ರೀ ರಾಮಮೂರ್ತಿಯಾದ ನಿನ್ನಿಂದಲೇ (ಶ್ರೀ ರಂಗಧಾಮನಿ) ಶ್ರೀರಂಗ ವಿಮಾನದಲ್ಲಿ(ಸ್ವಾರ್ಹಾಣಿ)ನಿನಗೆ ತಕ್ಕದಾದ(ಆರಾಧನಾನಿ) ಆರಾಧನೆಗಳನ್ನು (ಸ್ವಯಂ) ನಿನ್ನಿಂದಲೇ (ಲಂಭಿತಃ ಅಸಿ) ಅರ್ಪಣೆಮಾಡಿಸಲ್ಪಟ್ಟೆ.

ಇಕ್ಷ್ವಾಕು ವಂಶದ ರಾಜರಿಗೆಲ್ಲ ಶ್ರೀ ರಂಗನಾಥನೇ ಆರಾಧ್ಯ ದೇವತೆ ಎಂದು ಇಲ್ಲಿ ಹೇಳಿದೆ. ಶ್ರೀರಾಮನೂ ಶ್ರೀ ರಂಗನಾಥನನ್ನೇ ಆರಾಧಿಸುತ್ತಾ ಇದ್ದನು. ತಾನು ಪಟ್ಟಾಭಿಷೇಕವನ್ನು ಮಾಡಿಕೊಂಡ ಮೇಲೆ ವಿಭೀಷಣನಿಗೆ ತನ್ನ ಕುಲಧನವನ್ನು ಶ್ರೀರಾಮ ಕೊಟ್ಟನು. ದಿವ್ಯ ದಂಪತಿಗಳೇ ತಮ್ಮನ್ನು ತಾವೇ ಅರ್ಚಿಸಿಕೊಂಡರು. ಶ್ರೀರಾಮನ ರೂಪದಲ್ಲಿ ಶ್ರೀ ರಂಗನಾಥ ರೂಪಿಯಾದ ತನ್ನನ್ನು ತಾನೇ ಆರಾಧಿಸಿಕೊಂಡನಷ್ಟೇ ಅವನು ?

ಮನ್ವನ್ವವಾಯೇ ದ್ರುಹಿಣೇ ಚ ಧನ್ಯೇ
ವಿಭೀಷಣೇನ್ಯೈವ ಪುರಸ್ಕೃತೇನ ।
ಗುಣೈರ್ದರಿದ್ರಾಣಂ ಇಮಂ ಜನಂ ತ್ವಂ
ಮಧ್ಯೇಸರಿನ್ನಾಥ ಸುಖಾಕರೋಷಿ ॥ ॥೭೮॥

(ಹೇನಾಥ) ಶ್ರೀರಂಗನಾಥನೇ, (ಮನು-ಅನ್ವವಾಯೇ) ಮನುಕುಲವೂ

(ಧನ್ಯೇ) ಕೃತಾರ್ಥನಾದ (ದ್ರುಹಿಣೇ) ಬ್ರಹ್ಮನೂ ಇದ್ದರೂ (ಪುರಸ್ಕೃತೇನ) ನಿನ್ನ ಅಭಿಮತಕ್ಕೆ ಅನುಗುಣನಾದ (ವಿಭೀಷಣೇನೈವ) ವಿಭೀಷಣನಿಂದಲೇ (ಮಧ್ಯೇಸರಿತ್) ಕಾವೇರಿ' ನದಿಯ ನಡುವೆ ಸನ್ನಿಧಿಯನ್ನು ಮಾಡಿ (ಗುಣೈಃ ದರಿದ್ರಾಣಂ) ಒಂದು ಗುಣವೂ ಇಲ್ಲದ (ಇಮಂಜನಂ) ನನ್ನಂಥ ಈ ಜನವನ್ನು (ಸುಖಾಕರೋಷಿ) ಸಂತೋಷ ಪಡಿಸುತ್ತೀಯೆ.

ನಾಲ್ಕು ಮುಖವುಳ್ಳ ಬ್ರಹ್ಮನಿಗೆ ಸುಲಭನಾಗಿದ್ದರೂ, ಮನುಕುಲಕ್ಕೆ ಅನುಕೂಲನಾಗಿದ್ದರೂ ಭಗವಂತನು ಅವರನ್ನು ಉದಾಸೀನ ಮಾಡಿ ವಿಭೀಷಣನನ್ನು ಹೆಚ್ಚಾಗಿ ಪುರಸ್ಕರಿಸಿ ಹೀಗೆ ಕಾವೇರಿ ನದಿಯ ನಡುವೆ ಬಂದು ದಯ ಮಾಡಿಸಿರುವುದು ಎಂಥ ಆಶ್ಚರ್ಯ! ಆ ವಿಭೀಷಣನಿಗಾಗಿ ಸ್ವಾಮಿ ಶ್ರೀರಂಗದಲ್ಲಿ ಹೀಗೆ ಪವಡಿಸಿದ್ದಾನೆ.

**ತೇಜಃ ಪರಂ ತತ್ಸವಿತುಃ ವರೇಣ್ಯಂ**
**ಧಾಮ್ನಾ ಪರೇಣಾಪ್ರಣಖಾತ್ಸುವರ್ಣಂ ।**
**ತ್ವಾಂ ಪುಂಡರೀಕೇಕ್ಷಣಮಾಮನಂತಿ**
**ಶ್ರೀರಂಗನಾಥಂ ತಮುಪಾಸಿಷೀಯ ॥** ॥೭೯॥

ಸ್ವಾಮಿಯೇ, (ತ್ವಾಂ) ನಿನ್ನನ್ನು (ಸವಿತುಃ) ಸೂರ್ಯನ (ತತ್) ಪ್ರಸಿದ್ಧವಾಗಿಯೂ (ವರೇಣ್ಯಂ) ಉಪಾಸ್ಯವಾಗಿಯೂ ಇರುವ (ಪರಂತೇಜಃ) ಹಿರಿಯ ತೇಜಸ್ಸಾಗಿ (ಆಮನಂತಿ) ಗಾಯತ್ರೀಪದಗಳು ಹೇಳುತ್ತವೆ. ಮತ್ತು (ಪರೇಣ) ಶ್ರೇಷ್ಠವಾದ (ಧಾಮ್ನಾ) ತೇಜಸ್ಸಿನಿಂದ (ಆಪ್ರಣಖಾತ್) ಮುಡಿಯಿಂದ ಉಗುರುಗಳ ಕೊನೆಯುವರೆಗೆ (ಸುವರ್ಣಂ) ಸ್ವರ್ಣಮಯನಾಗಿ ಇರುವವನಾಗಿಯೂ (ಪುಂಡರೀಕೇಕ್ಷಣಂ) ಕೆಂದಾವರೆಯಂತಹ ಕಣ್ಣುಗಳುಳ್ಳವನಾಗಿಯೂ (ಆಮನಂತಿ) ಕೆಲವು ಶ್ರುತಿಗಳು ಹೇಳುತ್ತವೆ. (ತಂ) ಅಂಥ (ಶ್ರೀರಂಗನಾಥಂ) ಶ್ರೀರಂಗನಾಥನೆನ್ನುವ (ತ್ವಾಂ) ನಿನ್ನನ್ನು (ಉಪಾಸಿಷೀಯ) ಉಪಾಸನೆ ಮಾಡುತ್ತೇನೆ.

ಉಪನಿಷದ್ವಾಕ್ಯಗಳಿಂದಲೇ ಶ್ರೀ ರಂಗನಾಥನನ್ನು ಸ್ತುತಿಸಿದ್ದಾರೆ ಈ ಶ್ಲೋಕದಿಂದ ಆರಂಭಿಸಿ. ಅಂತರಾದಿತ್ಯವಿದ್ಯೆಯಲ್ಲಿ ಹೇಳಿರುವ ಪುರುಷನೂ ಶ್ರೀರಂಗನಾಥನೂ ಒಬ್ಬನೇ ಎಂದು ಸೂಚಿಸಲಾಗಿದೆ. 'ಯಏಷಃ ಅಂತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ ಹಿರಣ್ಯಶ್ಮಶ್ರುಃ ಹಿರಣ್ಯಕೇಶಃ ಆಪ್ರಣಖಾತ್ಸರ್ವ ಏವ ಸುವರ್ಣಃ; ತಸ್ಯಯಥಾ ಕಪ್ಯಾಸಂ ಪುಂಡರೀಕಮೇವ ಮಕ್ಷಿಣೀ ತಸ್ಯೋದಿತಿ ನಾಮ' ಎಂದು ಛಾಂದೋಗ್ಯದಲ್ಲಿ ಹೇಳಿರುವುದಕ್ಕನು ಸಾರವಾಗಿ ಇಲ್ಲಿ ಶ್ರೀ ರಂಗನಾಥನನ್ನು ಸ್ತುತಿಸಿದ್ದಾರೆ.

ಆತ್ಮಾಸ್ಯ ಗಂತುಃ ಪರಿತಸ್ಥುಷಶ್ಚ
ಮಿತ್ರಸ್ಯ ಚಕ್ಷುಃ ವರುಣಸ್ಯ ಚಾಗ್ನೇಃ ।
ಲಕ್ಷ್ಮ್ಯಾ ಸಹೌತ್ಪತ್ತಿಕಗಾಢಬಂಧಂ
ಪಶ್ಯೇಮ ರಂಗೇ ಶರದಶ್ಶತಂ ತ್ವಾಂ ॥ ॥೮೦॥

(ಅಸ್ಯ) ಈ (ಗಂತುಃ) ಜಂಗಮ ವಸ್ತುಗಳ ಸಮೂಹಕ್ಕೂ (ಪರಿತಸ್ಥುಷಶ್ಚ) ಸ್ಥಾವರ ವಸ್ತುಗಳ ಸಮೂಹಕ್ಕೂ (ಆತ್ಮಾ) ಆತ್ಮನಾಗಿದ್ದೀಯೆ. (ಮಿತ್ರಸ್ಯ) ಸೂರ್ಯನಿಗೂ (ವರುಣಸ್ಯ) ವರುಣನಿಗೂ (ಅಗ್ನೇಃಚ) ಅಗ್ನಿಗೂ (ಚಕ್ಷುಃ ಅಸಿ) ಕಣ್ಣಾಗಿದ್ದೀಯೆ. (ಲಕ್ಷ್ಮ್ಯಾಸಹ) ಶ್ರೀದೇವಿಯೊಡನೆ (ಔತ್ಪತ್ತಿಕ ಗಾಢ ಬಂಧಂ) ಸ್ವಭಾವಸಿದ್ಧವಾದ ದೃಢ ಸಂಬಂಧವನ್ನುಳ್ಳ (ತ್ವಾಂ) ನಿನ್ನನ್ನು (ರಂಗೇ) ಶ್ರೀರಂಗದಲ್ಲಿ (ಶತಂಶರದಃ) ನೂರು ವರ್ಷಗಳ ಕಾಲ (ಪಶ್ಯೇಮ) ನೋಡೋಣ.

'ಚಿತ್ರಂ ದೇವಾನಾಂ ಉದಗಾದನೀಕಂಚಕ್ಷುರ್ಮಿತ್ರಸ್ಯ ವರುಣ ಸ್ಯಾಗ್ನೇಃ ಆಪ್ರಾದ್ಯಾವಾಪೃಥಿವೀ ಅಂತರಿಕ್ಷಂ ಸೂರ್ಯ ಆತ್ಮಾ ಜಗತಃ ತಸ್ಥುಷಶ್ಚ' ಎಂಬ ಶ್ರುತಿ ವಾಕ್ಯದ ಅರ್ಥವನ್ನು ಪೂರ್ವಾರ್ಧದಲ್ಲಿ ಹೇಳಿದ್ದಾರೆ. 'ಚಕ್ಷು ರ್ದೇವಾನಾಂ ಉತ ಮರ್ತ್ಯಾನಾಂ' ಎಂದೂ 'ಪಶ್ಯೇಮ ಶರದಶ್ಶತಂ' ಎಂದೂ ಹೇಳುವ ಶ್ರುತಿವಾಕ್ಯಗಳ ಅಭಿಪ್ರಾಯ ಉತ್ತರಾರ್ಧದಲ್ಲಿದೆ. ಭಗವಂತನು ಸಕಲಕ್ಕೂ ಆತ್ಮನಾಗಿದ್ದಾನೆಂಬುದನ್ನು ಇವು ಸ್ಪಷ್ಟವಾಗಿ ತಿಳಿಸುತ್ತವೆ.

**ಯಸ್ಯಾಸ್ಮಿ ಪತ್ಯುರ್ನ ತಮಂತರೇಮಿ**
**ಶ್ರೀರಂಗತುಂಗಾಯತನೇ ಶಯಾನಂ ।**
**ಸ್ವಭಾವದಾಸ್ಯೇನ ಚ ಯೋಽಹಮಸ್ಮಿ**
**ಸಸನ್ಯಜೇ ಜ್ಞಾನಮಯೈರ್ಮಖೈಸ್ತಂ ॥** ॥೮೧॥

(ಯಸ್ಯ) ಯಾವ (ಪತ್ಯುಃ) ಸ್ವಾಮಿಗೆ (ಅಸ್ಮಿ) ನಾನು ದಾಸನಾಗಿದ್ದೇನೆಯೋ (ಶ್ರೀರಂಗ ತುಂಗಾಯತನೇ ಶಯಾನಂ) ಶ್ರೀರಂಗದ ವಿಮಾನದಲ್ಲಿ ಶಯನಿಸಿರುವ (ತಂ) ಆ ಶ್ರೀರಂಗನಾಥನನ್ನು (ನ ಅಂತರೇಮಿ) ಬಿಟ್ಟು ಅಗಲಲಾರೆ. (ಅಹಂ) ನಾನು (ಸ್ವಭಾವದಾಸ್ಯೇನ) ಸಹಜವಾದ ದಾಸ್ಯದ ಕಾರಣ (ಯಃ ಅಸ್ಮಿ) ಯಾವನಾಗಿದ್ದೇನೆಯೋ (ಸಃ ಸನ್) ಹಾಗೆ ಅವನೇ ಆಗಿದ್ದುಕೊಂಡು (ತಂ) ಆ ಶ್ರೀರಂಗನಾಥನನ್ನು (ಜ್ಞಾನಮಯೈಃ ಮಖೈಃ) ಜ್ಞಾನವೆಂಬುವ ಯಾಗಗಳಿಂದ (ಯಜೇ) ಆರಾಧಿಸುತ್ತೇನೆ.

ಅಚ್ಛಿದ್ರದಲ್ಲಿ ಬರುವ 'ಯಸ್ಯಾಸ್ಮಿ ನ ತಮಂತರೇಮಿ', 'ಯೋಽಹಮಸ್ಮಿ ಸಸನ್ಯಜೇ' ಎಂಬ ವಾಕ್ಯಗಳನ್ನು ಆಧಾರವಾಗಿ ಹೊಂದಿ ಈ ಶ್ಲೋಕವನ್ನು ರಚಿಸಿದ್ದಾರೆ. ನನ್ನ ಸ್ವರೂಪ ಎಂಥದೋ ಅಂಥ ಸ್ವರೂಪ ವಿಶಿಷ್ಟನಾಗಿಯೇ ನಾನು ಭಗವಂತನನ್ನು ಸೇವಿಸುತ್ತೇನೆ. ಜ್ಞಾನಯಜ್ಞ ಎಂಬುದು ಧ್ಯಾನಾದಿಗಳಿಗೆ ಅನ್ವಯಿಸುತ್ತದೆ. ಭಗವಂತನಿಗೂ ನಮಗೂ ಇರುವ ಸ್ವಾಮಿ-ದಾಸ್ಯಭಾವವನ್ನು ಇಲ್ಲಿ ಪ್ರತಿಪಾದಿಸಿದೆ.

**ಆಯುಃ ಪ್ರಜಾನಾಂ ಅಮೃತಂ ಸುರಾಣಾಂ**
**ರಂಗೇಶ್ವರಂ ತ್ವಾಂ ಶರಣಂ ಪ್ರಪದ್ಯೇ ।**
**ಮಾಂ ಬ್ರಹ್ಮಣೇಽಸ್ಮೈ ಮಹಸೇ ತದರ್ಥಂ**
**ಪ್ರತ್ಯಂಚಮೇನಂ ಯುನಜೈ ಪರಸ್ಮೈ ॥** ॥೮೨॥

(ಪ್ರಜಾನಾಂ) ಪ್ರಜೆಗಳಿಗೆ (ಆಯುಃ) ರಕ್ಷಕನಾಗಿಯೂ (ಸುರಾಣಾಂ) ದೇವತೆಗಳಿಗೆ (ಅಮೃತಂ) ಭೋಗ್ಯನಾಗಿಯೂ (ರಂಗೇಶ್ವರಂ) ಶ್ರೀರಂಗಕ್ಕೆ

ನಾಥನೂ ಆಗಿ ಇರುವ (ತ್ವಾಂ ಶರಣಂ ಪ್ರಪದ್ಯೇ) ನಿನ್ನಲ್ಲಿ ಶರಣ: ಹೋಗು ತ್ತೇನೆ. (ಪರಸ್ಮೈಬ್ರಹ್ಮಣೇ) ಪರಬ್ರಹ್ಮಸ್ವರೂಪಿಯಾಗಿಯೂ (ಮಹಸೇ) ತೇಜಸ್ವರೂಪಿಯಾಗಿಯೂ ಇರುವ (ಅಸ್ಮೈ) ಈ ದೇವನಿಗೆ (ತದರ್ಥಂ) ಶೇಷ ಭೂತನಾದ (ಪ್ರತ್ಯಂಚಂ) ಪ್ರತ್ಯಗಾತ್ಮನಾದ (ಏನಂ ಮಾಂ) ಈ ನನ್ನನ್ನು (ಯುನಜ್ಮಿ) ವಿನಿಯೋಗಿಸುತ್ತೇನೆ.

'ಅಮೃತಂ ದೇವಾನಂ ಪ್ರಾಯುಃ ಪ್ರಜಾನಾಂ ಇಂದ್ರಂ ರಾಜಾನಂ ಸವಿತಾರಂ ಏತಂ ವಾಯೋರಾತ್ಮಾನಂ ಕವಯೋ ನಿಚಿಕ್ಯುಃ' ಎಂಬ ವಾಕ್ಯ ತೈತ್ತಿರೀಯದಲ್ಲಿದೆ. ಇದು ಈ ಶ್ಲೋಕಕ್ಕೆ ಆಧಾರವಾಗಿದೆ. 'ಬ್ರಹ್ಮಣೇ ತ್ವಾಂ ಮಹಸ ಓಂ ಇತ್ಯಾತ್ಮಾನಂ ಯುಂಜೀತ' ಎಂಬುದನ್ನು ಶಬ್ದತಃ ಅರ್ಥತಃ ಉತ್ತರಾರ್ಧದಲ್ಲಿ ನಿರೂಪಿಸಿದೆ. ಅಲ್ಲಿ ಆತ್ಮಾನಂ ಎಂಬುದನ್ನು ಇಲ್ಲಿ ಪ್ರತ್ಯಂಚಂ ಎಂದೂ ಅಲ್ಲಿ 'ಯುಂಜೀತ' ಎಂಬುದನ್ನು ಸ್ವಾನುಷ್ಠಾನಕ್ಕೆ ಅನುಸಾರವಾಗಿ' 'ಯುನಜ್ಮಿ' ಎಂದೂ ತಿಳಿಸಿದ್ದಾರೆ.

**ಆರ್ತಿಂ ತಿತೀರ್ಷುರಥ ರಂಗಪತೇ ಧನಾಯುನ್**
**ಆತ್ಮಂಭರಿರ್ವಿವಿದಿಷುರ್ನಿಜದಾಸ್ಯಕಾಮ್ಯನ್ ।**
**ಜ್ಞಾನೀತ್ಯಮೂನ್ ಸಮಮುಧಾ ಸಮಮುತ್ಯುದಾರಾನ್**
**ಗೀತಾಸು ದೇವ ಭವದಾಶ್ರಯಣೋಪಕಾರಾನ್ ॥ ॥೮೩॥**

(ರಂಗಪತೇ) ಶ್ರೀ ರಂಗನಾಥನೇ, (ಭವದಾಶ್ರಯಣೋಪಕಾರಾನ್) ನಿನ್ನನ್ನು ಆಶ್ರಯಿಸುವುದನ್ನೇ ಉಪಕಾರವಾಗಿಉಳ್ಳ (ಆರ್ತಿಂ) ನಷ್ಟೈಶ್ವರ್ಯ ಕಾಮನೇನು (ಧನಾಯುನ್) ಅಪೂರ್ವೈಶ್ವರ್ಯ ಕಾಮನೇನು (ಆತ್ಮಂಭರಿಃ) ಕೈವಲ್ಯ ಕಾಮನಾದ (ವಿವಿದಿಷುಃ) ಜಿಜ್ಞಾಸುವೇನು (ನಿಜದಾಸ್ಯ ಕಾಮ್ಯನ್) ಸ್ವಸ್ವರೂಪವಾದ ಶೇಷವೃತ್ತಿಯನ್ನು ಬಯಸುವವನಾದ (ಜ್ಞಾನೀ) ಜ್ಞಾನಿ ಯೇನು (ಇತಿ ಅಮೂನ್) ಎಂಬುವ ಇವರನ್ನು (ಸಮಂ) ಯಾವ ಭೇದವೂ ಇಲ್ಲದೆ (ಗೀತಾಸು) ಭಗವದ್ಗೀತೆಯಲ್ಲಿ (ಅತ್ಯುದಾರಾನ್) ಬಹಳ ಉದಾರ ರೆಂದು (ಸಮಮುಧಾಃ) ಅಭಿಪ್ರಾಯ ಪಟ್ಟೆ.

'ಚತುರ್ವಿಧಾ ಭಜಂತೇ ಮಾಂ ಜನಾಃ ಸುಕೃತಿನೋಽರ್ಜುನ ।
ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀ ಚ ಭರತರ್ಷಭ ॥
ಉದಾರಾಸ್ಸರ್ವ ಏವೈತೇ ಜ್ಞಾನೀತ್ವಾತ್ಮೈವ ಮೇ ಮತಮ್ ॥'

ಎಂಬ ಗೀತಾ ಸೂಕ್ತಿಗನುಸಾರವಾಗಿ ಇಲ್ಲಿ ನಿರೂಪಣೆ ಮಾಡಿದ್ದಾರೆ. ಭಗವಂತನಿಂದ ಬೇರೆ ಬೇರೆ ಪ್ರಯೋಜನಗಳನ್ನು ಬೇಡುವ ಭಕ್ತರನ್ನು ಸ್ವಾಮಿ ಉದಾರರೆಂದು ಕೊಂಡಾಡುತ್ತೇನೆ. ತನ್ನ ಔದಾರ್ಯವನ್ನು ಪ್ರಕಾಶಪಡಿಸು ಕಾರಣ ಅವರು ಎಲ್ಲರೂ ಉದಾರರೆಂದು ಹೇಳಲ್ಪಟ್ಟಿದ್ದಾರೆ.

ನಿತ್ಯಂ ಕಾಮ್ಯಂ ಪರಮಪಿ ಕತಿಚಿತ್
ತ್ವಯ್ಯಧ್ಯಾತ್ಮಸ್ವಮತಿಭಿರಮಮಾಃ ।
ನ್ಯಸ್ಯಾಸಂಗಾ ವಿದಧತಿ ವಿಹಿತಂ
ಶ್ರೀ ರಂಗೇಂದೋ ವಿದಧತಿ ನಚತೇ ॥ ॥೮೪॥

(ಶ್ರೀ ರಂಗೇಂದೋ) ಶ್ರೀ ರಂಗಚಂದ್ರನೇ, (ಕತಿಚಿತ್) ಕೆಲವರು ಅಧಿಕಾರಿಗಳು (ಅಧ್ಯಾತ್ಮಸ್ವಮತಿಭಿಃ) ಆತ್ಮ ವಿಷಯವಾದ ತಮ್ಮ ಜ್ಞಾನಗಳಿಂದ (ಅಮಮಾಃ) ಮಮಕಾರವಿಲ್ಲದವರಾಗಿ (ಅಸಂಗಾಃ) ಸಂಗವನ್ನು ಬಿಟ್ಟವರಾಗಿ (ತ್ವಯಿ ನ್ಯಸ್ಯ) ನಿನ್ನಲ್ಲಿ ಕರ್ತೃತ್ವವನ್ನು ಅನುಸಂಧಾನ ಮಾಡಿ (ನಿತ್ಯಂ) ನಿತ್ಯಕರ್ಮರೂಪವಾಗಿ (ಕಾಮ್ಯಂ) ಕಾಮ್ಯಕರ್ಮ ರೂಪವಾಗಿ (ಪರಮಪಿ) ನೈಮಿತ್ತಿಕ ಕರ್ಮರೂಪವಾಗಿಯೂ ಇರುವ (ವಿಹಿತಂ) ಶಾಸ್ತ್ರಗಳಲ್ಲಿ ವಿಧಿಸಿರುವ ಕರ್ಮವನ್ನು (ವಿದಧತಿ) ಅನುಷ್ಠಿಸುತ್ತಾರೆ. (ತೇ) ಅವರು (ನ ವಿದಧತಿ ಚ) ಅನುಷ್ಠಿಸುವುದೂ ಇಲ್ಲ.

ಕರ್ಮಯೋಗಕ್ಕನುಸಾರ ಇಲ್ಲಿ ನಿರೂಪಣೆ ಮಾಡಿದ್ದಾರೆ. 'ಮಯಿ ಸನ್ನ್ಯಸ್ಯ ಕರ್ಮಾಣಿ' ಎಂದು ಗೀತೆಯಲ್ಲಿ ಹೇಳಿರುವುದಕ್ಕನುಸಾರ ಇಲ್ಲಿ ವರ್ಣನೆ ಮಾಡಿದೆ. ಕರ್ಮಯೋಗವನ್ನನುಷ್ಠಿಸುವ ಬಗೆಯನ್ನು ಶ್ರೀಕೃಷ್ಣನು 'ಮಯಿ ಸರ್ವಾಣಿಕರ್ಮಾಣಿ ಸನ್ನ್ಯಸ್ಯಾಧ್ಯಾತ್ಮಚೇತಸಾ । ನಿರಾಶೀಃ ನಿರ್ಮಮೋ ಭೂತ್ವಾ ಯುಧ್ಯಸ್ವ ವಿಗತ ಜ್ವರಃ॥' ಎಂದು ಉಪದೇಶಿಸಿದನು.

ಫಲತ್ಯಾಗ, ಕರ್ತೃತ್ವತ್ಯಾಗ ಮತ್ತು ಸಂಬಂಧ ತ್ಯಾಗಗಳೊಡನೆ ಕರ್ಮಾನುಷ್ಠಾನ ಮಾಡಬೇಕು. 'ನಿರಾಶೀಃ' ಎಂಬುದು ಫಲಾಪೇಕ್ಷೆ ಇಲ್ಲದಿರುವಿಕೆಯನ್ನೂ 'ನಿರ್ಮಮಃ' ಎಂಬುದು ಸಂಗತ್ಯಾಗವನ್ನೂ 'ಸಂನ್ಯಸ್ಯ' ಎಂಬುದು ಕರ್ತೃತ್ವ ತ್ಯಾಗವನ್ನೂ ಸೂಚಿಸುತ್ತದೆ. ಹೀಗೆ ಕರ್ಮಾನುಷ್ಠಾನ ಮಾಡುವವರು 'ಕರ್ಮಣ್ಯಭಿಪ್ರವೃತ್ತೋಽಪಿ ನೈವ ಕಿಂಚಿತ್ಕರೋತಿ ಸಃ' ಎಂದು ಹೇಳಿದಂತೆ ಕರ್ಮವನ್ನು ಮಾಡುವವರಾಗುವುದಿಲ್ಲ. ಏಕೆಂದರೆ ಅವರು ನಿತ್ಯತೃಪ್ತರೂ, ನಿರಾಶ್ರಯರೂ, ಕರ್ಮಫಲದಲ್ಲಿ ಆಸಕ್ತಿ ಇಲ್ಲದವರೂ ಆಗಿದ್ದಾರೆ.

**ಪ್ರತ್ಯಂಚಂ ಸ್ವಂ ಪಂಚವಿಂಶಂ ಪರಾಚಃ**
**ಸಂಚಕ್ಷಾಣಾಸ್ತತ್ತ್ವರಾಶೇರ್ವಿವಿಚ್ಯ ।**
**ಯುಂಜಾನಾಶ್ಚರ್ತಂಭರಾಯಾಂ ಸ್ವಬುದ್ಧೌ**
**ಸ್ವಂ ವಾ ತ್ವಾಂ ವಾ ರಂಗನಾಥಾಪ್ನುವಂತಿ ॥**

(ರಂಗನಾಥ) ಶ್ರೀರಂಗನಾಥನೇ, (ಪ್ರತ್ಯಂಚಂ) ತನಗೆ ತಾನೇ ಪ್ರಕಾಶಿಸುವವನಾದ (ಸ್ವಂ) ತನ್ನ ಆತ್ಮವನ್ನು (ಪಂಚವಿಂಶಂ) ಇಪ್ಪತ್ತೈದನೆಯ ತತ್ತ್ವವಾಗಿ (ಸಂಚಕ್ಷಾಣಾಃ) ಹೇಳುವವರಾಗಿ (ಪರಾಚಃ) ಇತರರಿಗೇ ಪ್ರಕಾಶಿಸುವ (ತತ್ತ್ವರಾಶೇಃ) ತತ್ತ್ವಗಳ ರಾಶಿಯಿಂದ(ವಿವಿಚ್ಯ) ಬೇರ್ಪಡಿಸಿ (ಋತಂಭರಾಯಾಂಸ್ವಬುದ್ಧೌ) ಸಂಶಯ ಜ್ಞಾನ ವಿಪರೀತ ಜ್ಞಾನವಿಲ್ಲದ ಸಮಾಧಿ ಕಾಲದಲ್ಲಿ ಯಥಾರ್ಥ ಜ್ಞಾನದಲ್ಲಿರುವ ತಮ್ಮ ಬುದ್ಧಿಯಲ್ಲಿ (ತ್ವಂ) ತಮ್ಮ ಆತ್ಮನನ್ನು (ಯುಂಜಾನಾಃ) ಧ್ಯಾನಿಸುವವರು (ಸ್ವಂ ಆಪ್ನುವಂತಿ) ತಮ್ಮ ಆತ್ಮವನ್ನು ಅನುಭವಿಸುತ್ತಾರೆ.

ಜ್ಞಾನಯೋಗದ ಅಧಿಕಾರಿಗಳ ಫಲಭೇದವನ್ನೂ ಸಾಧನ ಭೇದವನ್ನೂ ತಿಳಿಸುತ್ತಾರೆ. ಸ್ವಸ್ಮೈಭಾಸಮಾನತ್ವಂ ಪ್ರತ್ಯಕ್ತ್ವಂ ಪರಸ್ಮೈಭಾಸಮಾನತ್ವಂ ಪರಾಕ್ತ್ವಂ ಪ್ರಾಕೃತಿಮಹದಾದಿ ಇಪ್ಪತ್ತುನಾಲ್ಕು ತತ್ತ್ವಗಳು ಪರಾಕ್ ತತ್ತ್ವ. ಇವುಗಳಿಗಿಂತ ಬೇರೆಯಾದುದೆಂದು ಆತ್ಮವನ್ನು ತಿಳಿದವರು ಆತ್ಮಾನುಸಂಧಾನ ಮಾಡಿ ಆತ್ಮಾನುಭವ ಹೊಂದುತ್ತಾರೆ. ಇವರ ಜಿಜ್ಞಾಸುಗಳು ಭಗವಂತನನ್ನೇ ಅನುಭವಿಸುವವರು ಅವನನ್ನೇ ಉಪಾಸನೆ ಮಾಡುತ್ತಾರೆ. ಋತಂಬಿಭರ್ತಿ ಇತಿ ಋತಂಭರಂ' ಸಂದೇಹ ಮೊದಲಾದವು ಇಲ್ಲದ ಯಥಾರ್ಥವಾದ ಜ್ಞಾನದ ದೆಶೆ ಇದು.

ಅಥಮೃದಿತಕಷಾಯಾಃ ಕೇಚಿದಾಜಾನದಾಸ್ಯ
ತ್ವರಿತಶಿಥಿಲಚಿತ್ತಾಃ ಕೀರ್ತಿಚಿಂತಾನಮಸ್ಯಾಃ ।
ವಿದಧತಿ ನನು ಪಾರಂ ಭಕ್ತಿನಿಘ್ನಾ ಲಭಂತೇ
ತ್ವಯಿಕಿಲ ತತಮೋ ತ್ವಂ ತೇಷು ರಂಗೇಂದ್ರ ಕಿಂತತ್ ॥ ॥೮೬॥

(ರಂಗೇಂದ್ರ) ಶ್ರೀ ರಂಗನಾಥನೇ, (ಮೃದಿತ ಕಷಾಯಾಃ) ಕಳೆಯಲ್ಪಟ್ಟ ಪಾಪವುಳ್ಳವರಾಗಿ (ಆಜಾನದಾಸ್ಯ ತ್ವರಿತ) ಸ್ವಾಭಾವಿಕವಾದ ತಮ್ಮ ದಾಸ್ಯದಲ್ಲಿ ತ್ವರೆಯಿಂದ (ಶಿಥಿಲ ಚಿತ್ತಾಃ) ಮನಸ್ಸು ಕರಗಿ ಹೋದವರಾದ (ಕೇಚಿತ್) ಕೆಲವು ಅಧಿಕಾರಿಗಳು (ಕೀರ್ತಿಚಿಂತಾನಮಸ್ಯಾಃ) ಸಂಕೀರ್ತನ, ಚಿಂತನ, ನಮಸ್ಕಾರ ಮೊದಲಾದ ಇವನ್ನು (ವಿದಧತಿ) ಅನುಷ್ಠಾನ ಮಾಡುತ್ತಾರೆ. (ಭಕ್ತಿ ನಿಘ್ನಾಃ) ಭಕ್ತಿಪರವಶರಾಗಿ (ಪಾರಂ) ಪರಮ ಪ್ರಾಪ್ಯನಾದ ನಿನ್ನನ್ನು (ಲಭಂತೇ) ಪಡೆಯುತ್ತಾರೆ. (ತತಮೋ) ಅಂತಹವರು (ತ್ವಯಿಕಿಲ) ನಿನ್ನಲ್ಲಿ ತಾನೇ ಇರುತ್ತಾರೆ ! ಇದು ಯುಕ್ತ. (ತ್ವಂ) ನೀನು (ತೇಷು) ಅವರಲ್ಲಿ ಇರುತ್ತೀಯಂತೆಯಲ್ಲಾ (ತತ್ ಕಿಂ) ಅದು ಹೇಗೆ ಯುಕ್ತ ?

ಭಕ್ತಿಯೋಗಕ್ಕನುಸಾರ ಇಲ್ಲಿ ನಿರೂಪಣೆ ಮಾಡುತ್ತಾರೆ. ಶಾಸ್ತ್ರೀಯುವಾದ ಕರ್ಮಾನುಷ್ಠಾನದಿಂದ ಭಕ್ತಿಯೋಗಕ್ಕೆ ವಿರೋಧಿಯಾದ ಪಾಪ ಹೋಗುತ್ತದೆ. 'ಅವಿದ್ಯಯಾ ಮೃತ್ಯುಂ ತೀರ್ತ್ವಾ ವಿದ್ಯಯಾ ಅಮೃತ ಮಶ್ನುತೇ' ಎಂದು ಹೇಳಿದಂತೆ. 'ಸತತಂ ಕೀರ್ತಯಂತಃ' ಎಂದು ಗೀತೆಯಲ್ಲಿ ಹೇಳಿದಂತೆ ಅಂಥ ಭಕ್ತರು ಭಗವಂತನನ್ನು ಕೀರ್ತಿಸುತ್ತಾರೆ, ಸ್ತುತಿಸುತ್ತಾರೆ. 'ಯೇ ಭಜಂತಿ ತುಮಾಂ ಭಕ್ತ್ಯಾ ಮಯಿತೇ ತೇಷು ಚಾಪ್ಯಹಂ' ಎಂದು ಗೀತೆಯಲ್ಲಿ ಭಗವಂತನು ಹೇಳುತ್ತಾನೆ. 'ಮಯಿತೇ' ಎಂಬುದು ಸರಿ. 'ತೇಷು ಚಾಪ್ಯಹಂ' ಎಂಬುದು ಹೇಗೆ ಸರಿ ಎಂದು ಕೇಳುತ್ತಾರೆ ಇಲ್ಲಿ. 'ಅಹಮಪಿ ಮದುತ್ತೈ ಷ್ವೇಷ್ವಿವವರ್ತೇ' ಎಂದು ಈ ಭಾಗಕ್ಕೆ ಅರ್ಥವನ್ನು ಭಾಷ್ಯಕಾರರು ನಿರೂಪಿಸಿರುವುದನ್ನು ಕಾಣಬಹುದು.

ಉಪಾದತ್ತೇ ಸತ್ತಾಸ್ಥಿತಿ ನಿಯಮನಾದ್ಯೈಶ್ಚಿದಚಿತೌ
ಸ್ವಮುದ್ದಿಶ್ಯ ಶ್ರೀಮಾನಿತಿ ವದತಿ ವಾಗೌಪನಿಷದೀ ।

**ಉಪಾಯೋಪೇಯತ್ವೇ ತದಿಹ ತವ ತತ್ತ್ವಂ ನ ತು ಗುಣೌ**
**ಅತಸ್ತ್ವಾಂ ಶ್ರೀರಂಗೇಶಯ ಶರಣಮವ್ಯಾಜಮಭಜಂ ॥ ॥೮೭॥**

(ಶ್ರೀ ರಂಗೇಶಯ) ಶ್ರೀ ರ ಂ ಗ ನಾ ಥ ನೇ, (ಔಪನಿಷದೀವಾಕ್) ಉಪನಿಷದ್ವಾಣಿ ಏನು ಹೇಳುತ್ತದೆ ಎಂದರೆ (ಶ್ರೀವರ್ಮಾ) ಶ್ರೀಮನ್ನಾರಾಯಣನು (ಸ್ವಂಉದ್ದಿಶ್ಯ) ತನ್ನನ್ನೇ ಫಲಭಾಗಿಯಾಗಿ ಉದ್ದೇಶಿಸಿ (ಚಿದಚಿತೌ) ಚೇತನಾ ಚೇತನಗಳನ್ನು (ಸತ್ತಾಸ್ಥಿತಿ ನಿಯಮನಾದ್ಯೈಃ) ಸೃಷ್ಟಿ, ಸ್ಥಿತಿ, ನಿಯಮನ ಮೊದಲಾದ ವ್ಯಾಪಾರಗಳಿಂದ (ಉಪಾದತ್ತೇ) ಸ್ವೀಕರಿಸುತ್ತಾನೆ. (ಇತಿ) ಹೀಗೆ ಹೇಳುತ್ತದೆ. (ತತ್) ಆದುದರಿಂದ (ಉಪಾಯೋಪೇಯತ್ವೇ) ಉಪಾಯತ್ವ ಮತ್ತು ಉಪೇಯತ್ವ ಇವು (ತವ) ನಿನಗೆ (ತತ್ತ್ವಂ) ಸ್ವರೂಪವೇ ಆಗುತ್ತದೆ (ನತು ಗುಣೌ) ಗುಣಗಳಲ್ಲ. (ಅತಃ) ಆದುದರಿಂದ ಉಪಾಯೋಪೇಯತ್ವ ಗಳನ್ನು ನೀನು ಸ್ವರೂಪವಾಗಿ ಹೊಂದಿರುವುದರಿಂದ (ತ್ವಾಂ) ನಿನ್ನನ್ನು (ಅವ್ಯಾಜಂ) ಯಾವವ್ಯಾಜವೂ ಇಲ್ಲದೆಯೇ (ಶರಣಂ ಅಭಜಂ) ಶರಣು ಹೊಕ್ಕಿದ್ದೇನೆ.

ಭಕ್ತಿಯೋಗದವರಿಗೆ ಭಗವಂತನು ಪ್ರಾಪ್ಯ. ಪ್ರಪನ್ನರಿಗೆ ಪ್ರಾಪ್ಯ ಮತ್ತು ಪ್ರಾಪಕ ಎರಡೂ ಅವನೇ. 'ಪತಿಂ ವಿಶ್ವಸ್ಯ' ಮೊದಲಾದ ವಾಕ್ಯಗಳಿಗನುಸಾರ ವಾಗಿ ಭಗವಂತನು ಮಾಡುವ ಸೃಷ್ಟ್ಯಾದಿವ್ಯಾಪಾರಗಳು ಅವನಿಗಾಗಿ ಅವನು ಮಾಡುವಂಥವು. ಭಗವಂತನೇ ಉಪಾಯ ಮತ್ತೂ ಉಪೇಯವಾದುದರಿಂದ ಅವನನ್ನೇ ಆಶ್ರಯಿಸುತ್ತೇನೆ ಉಪಾಯವೆಂದು. ಉಪಾಯತ್ವ ಉಪೇಯತ್ವ ಗಳು ಭಗವಂತನ ಸ್ವರೂಪ ನಿರೂಪಕ ಧರ್ಮಗಳೆಂಬುದನ್ನು ಮೂರನೆಯ ಪಾದದಲ್ಲಿ ಹೇಳಿದೆ. ಭಗವಂತನೇ ಪ್ರಧಾನ ಫಲಿ ಮತ್ತು ಪರಮಕರ್ತಾ ಎಂಬುದನ್ನು ಇಲ್ಲಿ ನಿರೂಪಿಸಿದೆ.

**ಪಟುನ್ಯೈಕವರಾಟಕೇವ ಕ್ಲೃಪ್ತಾ ಸ್ಥಲಯೋಃ**
**ಕಾಕಣಿಕಾ–ಸುವರ್ಣ–ಕೋಟ್ಯೋಃ ।**
**ಭವಮೋಕ್ಷಣಯೋಸ್ತ್ವಯ್ಯೈವ ಜಂತುಃ**
**ಕ್ರಿಯತೇ ರಂಗನಿಧೇ ತ್ವಮೇವ ಪಾಹಿ ॥ ॥೮೮॥**

(ರಂಗನಿಧೇ) ಶ್ರೀ ರಂಗನಾಥನೇ, (ಪಟುನಾ) ಸಮರ್ಥನಾದ ಒಬ್ಬನಿಂದ (ಕಾಕಣಿಕಾಸುವರ್ಣಕೋಟ್ಯೋಃ) ಒಂದು ಚಿಕ್ಕಾಸು ಮತ್ತು ಒಂದು ಸುವರ್ಣ ನಾಣ್ಯದ ಜಾತಿಗಳ (ಸ್ಥಲಯೋಃ) ಜಾಗಗಳಲ್ಲಿ (ಕ್ಲಪ್ತಾ) ಏರ್ಪಡಿಸಲ್ಪಟ್ಟ (ಏಕವರಾಟಿಕಾಇವ) ಒಂದೇ ಒಂದು ವಸ್ತುವಿನ ಮೌಲ್ಯದಂತೆ (ಜಂತುಃ) ಚೇತನನು (ತ್ವಯಾಏವ) ನಿನ್ನಿಂದಲೇ (ಭವಮೋಕ್ಷಣಯೋಃ) ಸಂಸಾರದಲ್ಲಿಯೂ ಮೋಕ್ಷದಲ್ಲಿಯೂ (ಕ್ರಿಯತೇ) ಮಾಡಲ್ಪಡುತ್ತಾನೆ. ಆದುದರಿಂದ (ತ್ವಂಏವ) ನೀನೇ (ಪಾಹಿ) ಕಾಪಾಡಬೇಕು.

ಭಗವಂತನು ನಿರಂಕುಶ ಸ್ವತಂತ್ರ. ಪ್ರಭು ನಾಣ್ಯವನ್ನು ಏರ್ಪಡಿಸುವಾಗ ಒಂದು ವಸ್ತುವನ್ನು ಒಮ್ಮೆ ಚಿಕ್ಕಾಸಿನ ಬೆಲೆಗೂ ಮತ್ತೊಮ್ಮೆ ಸುವರ್ಣ ನಾಣ್ಯಕ್ಕೂ ಬೆಲೆ ನಿಗದಿ ಮಾಡಬಹುದು. ಭಗವಂತನು ಒಬ್ಬನನ್ನು ನಿತ್ಯ ಸಂಸಾರಿಯಾಗಿಸಬಹುದು ಅಥವಾ ನಿತ್ಯವಿಭೂತಿಗೆ ಕರೆದೊಯ್ಯಬಹುದು. ಭಗವಂತನ ಸ್ವಾತಂತ್ರ್ಯವನ್ನು ಇಲ್ಲಿ ನಿರೂಪಿಸಿದೆ. ಕೇವಲ ತನ್ನ ಪ್ರಯತ್ನದಿಂದಲೇ ಯಾವ ಚೇತನನೂ ಏನನ್ನೂ ಸಾಧಿಸಲಾರನು. ಐಹಿಕವಾದ ಅಭಿವೃದ್ಧಿಗಾಗಲೀ ಮೋಕ್ಷಪ್ರಯೋಜನಕ್ಕಾಗಲೀ . ಆ ಭಗವಂತನ ಕರುಣೆಯೇ ಆವಶ್ಯಕ. ಭಗವಂತನು ನಿರಂಕುಶ ಸ್ವತಂತ್ರನಾದರೂ ಆಯಾ

ಚೇತನರ ಕರ್ಮಾನುಸಾರ ಫಲಪ್ರದಾನ ಮಾಡುವುದರಿಂದ ಅವನಿಗೆ ವೈಷಮ್ಯ ನೈರ್ಘೃಣ್ಯಗಳಿರುವುದಿಲ್ಲವೆಂಬುದನ್ನು 'ವೈಷಮ್ಯ ನೈರ್ಘೃಣ್ಯೇ ನ ಸಾಪೇಕ್ಷತ್ವಾತ್ ತಥಾ ಹಿ ದರ್ಶಯತಿ' ಎಂಬ ಸೂತ್ರದಲ್ಲಿ ಬಾದರಾಯಣರು ನಿರೂಪಿಸಿರುವುದನ್ನು ಕಾಣಬಹುದು.

**ಜ್ಞಾನಕ್ರಿಯಾಭಜನ ಸಂಪದಕಿಂಚನೋಽಹಂ**
**ಇಚ್ಛಾಧಿಕಾರ-ಶಕನಾನುಶಯಾನಭಿಜ್ಞಃ ।**
**ರಂಗೇಶ ಪೂರ್ಣವೃಜಿನಶ್ಶರಣಂ ಭವೇತಿ**
**ಮಾಽರ್ಯಾ ದೃಬ್ರವೀಮಿ ಮನಸಾ ವಿಷಯಾಕುಲೇನ ॥ ॥೮೯॥**

(ರಂಗೇಶ) ಶ್ರೀ ರಂಗನಾಥನೇ, (ಜ್ಞಾನ ಕ್ರಿಯಭಜನ ಸಂಪದಕಿಂಚನಃ) ಜ್ಞಾನಯೋಗ ಕರ್ಮಯೋಗ ಮತ್ತು ಭಕ್ತಿಯೋಗ ಎಂಬ ಸಂಪತ್ತು ಇಲ್ಲ

ದವನೂ (ಇಚ್ಛಾ- ಅಧಿಕಾರ-ಶಕನ-ಅನುಶಯ-ಅನಭಿಜ್ಞಃ) ಮುಮುಕ್ಷುತ್ವ, ಆಕಿಂಚಿನ್ಯ, ಅನನ್ಯಗತಿತ್ವ ಎಂಬ ಅಧಿಕಾರ, ಶಕ್ತಿ, ಅನುತಾಪ ಇವುಗಳನ್ನು ಅರಿಯದವನೂ ಆಗಿ (ಪೂರ್ಣವೃಜಿನಃ) ತುಂಬಿದ ಪಾಪಗಳನ್ನುಳ್ಳ (ಅಹಂ) ನಾನು (ಮೌರ್ಖ್ಯಾತ್) ಮೂರ್ಖತನದಿಂದ (ವಿಷಯಾಕುಲೇನ) ವಿಷಯ ಗಳಿಂದ ಕದಡಿದ (ಮನಸಾ) ಮನಸ್ಸಿನೊಡನೆ (ಶರಣಂಭವ ಇತಿ) ಶರಣವಾಗು ಎಂದು (ಬ್ರವೀಮಿ) ಹೇಳುತ್ತಿದ್ದೆನೆ.

ತಮ್ಮ ಮೇಲೆ ಭಗವಂತನು ದಯೆತೋರಬೇಕೆಂದು ಬೇಡುತ್ತಾ ತಮ್ಮ ನೈಚ್ಯಾನುಸಂಧಾನವನ್ನು ಮಾಡಿದ್ದಾರೆ. 'ಅಕಿಂಚನೋಽನನ್ಯಗತಿಶ್ಶರಣ್ಯ ತ್ವತ್ಪಾದಮೂಲಂ ಶರಣಂ ಪ್ರಪದ್ಯೇ' ಎಂದು ಭಗವದ್ಯಾಮುನರು ಹೇಳಲಿಲ್ಲವೇ? ಹಾಗೆಯೇ ಇದು. ಜ್ಞಾನಯೋಗ ಕರ್ಮಯೋಗಾದಿಗಳನ್ನಾಗಲೀ ಭಕ್ತಿ ಯೋಗವನ್ನಾಗಲೀ ನಾನು ಸಾಧಿಸಿಲ್ಲ. ಹಾಗೆಯೇ ಪ್ರಪತ್ತ್ಯನುಷ್ಠಾನಕ್ಕೆ ಬೇಕಾದುದೇನೆಂಬುದನ್ನೂ ನಾನರಿಯೆ. ನಾನು ಪಾಪಪೂರ್ಣನಾಗಿದ್ದೇನೆ. ನೀನು ನನ್ನನ್ನು ಕಾಪಾಡಬೇಕೆಂದು ಬೇಡುತ್ತಿದ್ದೇನೆ. ಹೀಗೆ 'ಶರಣಾಗಬೇಕು' ಎಂದು ನಾನು ಹೇಳುವ ಮಾತು ನನ್ನ ಮೂರ್ಖತನವನ್ನು ತೋರಿಸುತ್ತದೆ. ಆದರೂ ಶರಣೋಕ್ತಿಗೇ ನೀನು ಕನಿಕರಿಸಿ ನನ್ನನ್ನು ಸಲಹಬೇಕು. ನಿನ್ನ ಜ್ಞಾನ ಶಕ್ತಿ ಕರುಣೆಗಳು ಇರುವಾಗ ಪಾಪ ನನ್ನನ್ನು ಅಭಿಭವಿಸುವುದು ತಕ್ಕುದಲ್ಲ.

**ತ್ವಯಿ ಸತಿ ಪುರುಷಾರ್ಥೇ ಮತ್ಪರೇ ಚಾಹಮಾತ್ಮ**
**ಕ್ಷಯಕರ–ಕುಹನಾರ್ಥಾನ್ ಶ್ರದ್ದಧದ್ರಂಗ ಚಂದ್ರ ।**
**ಜನಮಖಿಲಮಹಂಯುರ್ವಂಚಯಾಮಿ–ತ್ವದಾತ್ಮ–**
**ಪ್ರತಿಮಭವದನನ್ಯಃ ಜ್ಞಾನಿವದ್ದೇಶಿಕಸ್ಸನ್ ॥ ॥೯೦॥**

(ರಂಗಚಂದ್ರ) ಶ್ರೀ ರಂಗಚಂದ್ರನೇ, (ಪುರುಷಾರ್ಥೇ) ಪರಮಪುರುಷಾರ್ಥವಾದವನೂ (ಮತ್ಪರೇ ಚ) ನನ್ನಲ್ಲಿ ಪ್ರೀತಿಯುಳ್ಳವನೂ ಆದ (ತ್ವಯಿ) ನೀನು (ಸತಿ) ಇರಲಾಗಿ, (ಅಹಂ) ನಾನು (ಆತ್ಮ ಕ್ಷಯಕರ ಕುಹನಾರ್ಥಾನ್) ಆತ್ಮನಿಗೆ ನಾಶವನ್ನುಂಟುಮಾಡುವ ವಂಚಕವಾದ ವಸ್ತುಗಳಲ್ಲಿ (ಶ್ರದಧತ್) ಶ್ರದ್ಧೆಯುಳ್ಳವನಾಗಿ (ಅಹಂಯುಃ) ಅಹಂಕಾರಿಯಾಗಿಯೂ ಇದ್ದುಕೊಂಡು

(ತ್ವದಾತ್ಮಪ್ರತಿಮು) ನಿನಗೆ ಆತ್ಮನಾಗಿರುವವನೂ (ಭವದನನ್ಯಃ) ನಿನಗಿಂತ ಬೇರೆಯಾಗದವನೂ ಆದ (ಜ್ಞಾನಿವತ್) ಜ್ಞಾನಿಯಂತೆ (ದೇಶಿಕಃ ಸನ್) ಗುರುವಾಗಿದ್ದುಕೊಂಡು (ಅಖಿಲಂ ಜನಂ) ಎಲ್ಲರನ್ನೂ (ವಂಚಯಾಮಿ) ವಂಚಿಸುತ್ತಾ ಇದ್ದೇನೆ.

'ಜ್ಞಾನೀತ್ವಾತ್ಮೈವ ಮೇ ಮತಂ' ಎಂದು ನೀನು ಹೇಳಿದುದನ್ನೇ ಮುಂದಿಟ್ಟುಕೊಂಡು ನಾನು ನಿಜವಾದ ಭಕ್ತನಾಗದಿದ್ದರೂ 'ನಾನೇ ಭಗವಂತನಿಗೆ ಆತ್ಮನು. ನಾನೂ ಭಗವಂತನೂ ಅನನ್ಯರು; ನಾನು ಜ್ಞಾನಿ' ಎಂದೆಂದು ಹೇಳಿಕೊಂಡು ಎಲ್ಲರನ್ನೂ ವಂಚಿಸುತ್ತಿದ್ದೇನೆ. ನಿನ್ನನ್ನುಳಿದು ಇತರ ವಿಷಯಗಳಲ್ಲಿ ಆಸಕ್ತಿ ಉಳ್ಳವನಾಗಿದ್ದೇನೆ. ಇಂಥ ನನ್ನನ್ನು ನಿನ್ನ ನಿರವಧಿಕವಾದ ದಯೆಯಿಂದ ನೀನೇ ಸಲಹಬೇಕು.

ಅತಿಕ್ರಾಮನ್ನಾಜ್ಞಾಂ ತವವಿಧಿನಿಷೇಧೇಷು ಭವತೇಽಪಿ
ಅಭಿದ್ರುಹ್ಯನ್ ವಾಗ್ಧೀಕೃತಿಭಿರಪಿ ಭಕ್ತಾಯ ಸತತಂ ।
ಅಜಾನನ್ ಜಾನನ್ವಾ ಭವದಸಹನೀಯಾಗಸಿ ರತಃ
ಸಹಿಷ್ಣುತ್ವಾದ್ರಂಗಪ್ರವಣ ತವ ಮಾಭೂವಮಪರಃ ॥ ॥೯೧॥

(ರಂಗಪ್ರವಣ) ಶ್ರೀ ರಂಗನಾಥನೇ, (ಸತತಂ) ಯಾವಾಗಲೂ (ತವ) ನಿನ್ನ (ವಿಧಿನಿಷೇಧೇಷು ಆಜ್ಞಾಂ) ವಿಧಿನಿಷೇಧರೂಪವಾದ ಕಟ್ಟಳೆಯನ್ನು (ಅತಿಕ್ರಾಮನ್) ಮೀರಿ ನಡೆಯುವವನಾಗಿಯೂ (ವಾಕ್‌ಧೀಕೃತಿಭಿರಪಿ) ಮಾತಿನಿಂದಲೂ ಮನಸ್ಸಿನಿಂದಲೂ ಕ್ರಿಯೆಯಿಂದಲೂ (ಭವತೇ) ನಿನ್ನ ವಿಷಯದಲ್ಲಿಯೂ (ಭಕ್ತಾಯ ಅಪಿ) ಭಾಗವತರ ವಿಷಯದಲ್ಲಿಯೂ (ಅಭಿದ್ರುಹ್ಯನ್) ಅಪಚಾರ ಮಾಡುವವನಾಗಿಯೂ (ಜಾನನ್ ಅಜಾನನ್ವಾ) ತಿಳಿದೋ ತಿಳಿಯದೆಯೋ (ಭವದಸಹನೀಯಾಗಸಿ ರತಃ) ನಿನಗೂ ಅಸಹ್ಯವಾದ ಅಪಚಾರಗಳಲ್ಲಿ ಆಸಕ್ತನಾಗಿರುವವನೂ ಆದ ನಾನು (ಸಹಿಷ್ಣುತ್ವಾತ್) ನೀನು ಸರ್ವ ಸಹಿಷ್ಣುವಾದುದರಿಂದ (ತವ) ನಿನಗೆ (ಅಪರಃ ಮಾಭೂವಂ) ಅನುಗ್ರಾಹ್ಯನಾಗದೆ ಇರುವವನಾಗಲಾರೆ.

ಅಪಚಾರಗಳಲ್ಲಿ ಮುಳುಗಿದ ನನ್ನನ್ನು ನೀನು ಕರುಣೆ ತೋರಿ ಸಲಹ

ಬೇಕು ಎಂದು ಬೇಡಿದ್ದಾರೆ. ಶಾಸ್ತ್ರ ವಿಧಿಯನ್ನು ಮೀರಿ ತಪ್ಪು ಮಾಡಿದ್ದೇನೆ. ಆದರೆ ನೀನು ಸರ್ವಸಹಿಷ್ಣುವಾಗಿರುವುದರಿಂದ ನನ್ನ ರಕ್ಷಣೆಯ ಭಾರ ನಿನ್ನದೇ ಆಗಿರುವಂತೆ ಆಗಲಿ. ನಾನು ತಿಳಿದೋ ತಿಳಿಯದೆಯೋ ಮಾಡಿದ ಅಸಹ್ಯಾಪಚಾರಗಳನ್ನೆಲ್ಲಾ ನೀನೇ ಕ್ಷಮಿಸಿ ಸಲಹಬೇಕು. ಮತ್ತೆ ನಿನ್ನ ಅನುಗ್ರಹವನ್ನು ನನ್ನ ಮೇಲೆ ಮಾಡಬೇಕು.

**ಪ್ರಕುಪಿತ-ಭುಜಗಫಣಾನಾಮಿವ ವಿಷಯಾಣಾಂ**
**ಅಹಂ ಛಾಯಾಂ।**
**ಸತಿ ತವ ಭುಜಸುರವಿಟಪಿ ಪ್ರಚ್ಛಾಯೇ ರಂಗಜೀವಿತ**
**ಭಜಾಮಿ ॥೯೨॥**

(ರಂಗಜೀವಿತ) ಶ್ರೀರಂಗ ವಿಮಾನವನ್ನು ಉಸಿರಾಗಿ ಉಳ್ಳ ದೇವನೇ, (ತವ) ನಿನ್ನ (ಭುಜ) ತೋಳುಗಳೆಂಬ (ಸುರವಿಟಪಿ) ಕಲ್ಪವೃಕ್ಷದ (ಪ್ರಚ್ಛಾಯೇಸತಿ) ನೆರಳು ಚೆನ್ನಾಗಿ ಇರುವಾಗ (ಪ್ರಕುಪಿತ-ಭುಜಗ-ಫಣನಾಂ ಇವ ವಿಷಯಾಣಾಂ) ಕೋಪಗೊಂಡ ಹಾವಿನ ಹೆಡೆಗಳೋಪಾದಿಯಲ್ಲಿರುವ ದುರ್ವಿಷಯಗಳ (ಛಾಯಾಂ) ನೆರಳನ್ನು (ಅಹಂಭಜಾಮಿ) ನಾನು ಆಶ್ರಯಿಸುತ್ತೇನೆ.

'ನಿವಾಸವೃಕ್ಷಃ ಸಾಧೂನಾಂ' ಎಂದಂತೆ ಲೋಕಕ್ಕೆಲ್ಲಾ ನೆರಳು ಕೊಡುವವನು ಆ ಸ್ವಾಮಿಯೇ. 'ಕರ್ಪಹರ್ಕಾವನ ನರ್ಪಲ ತೋಳ್‌ಗಳ್‌ಕ್ಕು' ಎಂದು ಆಳ್ವಾರ್ ಹೇಳಿರುವುದಕ್ಕೆ ಇದು ಸಂವಾದಿಯಾಗಿದೆ. ಅಂಥ ಆಶ್ರಯನಾದ ನೀನಿರುವಾಗ ಹಾವಿನ ಹೆಡೆಗಳೋಪಾದಿ ಇರುವ ದುರ್ವಿಷಯಗಳ ನೆರಳನ್ನು ನಾನು ಆಶ್ರಯಿಸುತ್ತಿರುವುದು ಎಂಥ ದೌರ್ಭಾಗ್ಯ! ಈ ನನ್ನ ದುರ್ನಡತೆಯನ್ನು ನೀನೇ ಪರಿಹರಿಸಿ ರಕ್ಷಿಸಬೇಕು.

**ತ್ವತ್ಸರ್ವಶಕ್ತೇರಧಿಕಾಸ್ಮದಾದೇಃ ಕೀಟಸ್ಯ ಶಕ್ತಿರ್ಬತ ರಂಗಬಂಧೋ।**
**ಯತ್ತ್ವತ್ಕೃಪಾಮುಷ್ಯತಿ ಕೋಶಕಾರನ್ಯಾಯಾದಸೌ ನಶ್ಯತಿ**
**ಜೀವನಾಶಂ ॥ ॥೯೩॥**

(ರಂಗಬಂಧೋ) ಶ್ರೀ ರಂಗನಾಥನೇ, (ಅಸ್ಮದಾದೇಃ ಕೀಟಸ್ಯಶಕ್ತಿಃ)

ನಮ್ಮಂತಹ ಹುಳುಗಳ ಶಕ್ತಿಯಾದುದು (ಸರ್ವಶಕ್ತೇಃತ್ವತ್) ಸರ್ವಶಕ್ತಿ ಯುಕ್ತನಾದ ನಿನ್ನ ಶಕ್ತಿಗಿಂತಲೂ (ಅಧಿಕಾ) ಹೆಚ್ಚಿನದು. (ಯತ್) ಏಕೆಂದರೆ (ಅಸೌ) ಈ ಕೀಟವು (ತ್ವತ್ಕೃಪಾಂ ಅಪಿ ಅತಿ) ನಿನ್ನ ಕರುಣೆಯನ್ನೂ ಮೀರಿ (ಕೋಶಕಾರನ್ಯಾಯಾತ್) ಒಂದು ಹುಳುವಿನ ಕ್ರಿಯೆಯಂತೆ (ಜೀವ ನಾಶಂ ನಶ್ಯತಿ) ತನ್ನ ಜೀವಕ್ಕೆ ತಾನೇ ನಾಶವನ್ನು ಒದಗಿಸುತ್ತದೆ (ಬತ) ಅಯ್ಯೋ !

'ಪರಾಸ್ಯ ಶಕ್ತಿಃ ವಿವಿಧೈವ ಶ್ರೂಯತೇ' ಎಂದು ನಿನ್ನ ಶಕ್ತಿಯನ್ನು ಶ್ರುತಿ ಕೊಂಡಾಡುತ್ತದೆ. ನಿನ್ನ ಕರುಣೆಯ ಪ್ರವಾಹವನ್ನೂ ಶಕ್ತಿಯ ವ್ಯಾಪ್ತಿಯನ್ನೂ ತಡೆಯುವಂತ ಶಕ್ತಿ ನನ್ನದು. ಕೋಶಕಾರಕ್ರಿಮಿ ಹೇಗೆ ತನ್ನ ಸುತ್ತ ಗೂಡು ಕಟ್ಟಿಕೊಂಡು ತಾನೇ ನಾಶವಾಗುವುದೋ ಹಾಗೆ. ಆ ಭಗವಂತನ ಕರುಣೆ ತನ್ನ ಮೇಲೆ ಬರದಂತೆ ಅದನ್ನು ನಿವಾರಿಸುವ ಆ ಕ್ರಿಮಿಯ ಶಕ್ತಿ ಹೆಚ್ಚಲ್ಲವೇ ? ಹಾಗೇ ನನ್ನ ಶಕ್ತಿ ನಿನ್ನ ಶಕ್ತಿಗಿಂತ ಹೆಚ್ಚಾದುದು. ನಿನ್ನ ಕರುಣೆಯ ಪ್ರವಾಹ ವರ್ಷಿಸುತ್ತಿರುವಾಗ ಅದನ್ನು ಹೊಂದದ ರೀತಿ ಹುಳುವಿನಂಥ ನಾನು ತಡೆಮಾಡಿಕೊಳ್ಳುತ್ತಿದ್ದೇನೆ. ಈ ನನ್ನ ದುಷ್ಪ್ರವೃತ್ತಿಯನ್ನು ನೀನೇ ನಿವಾರಿಸಿ ರಕ್ಷಿಸಬೇಕು.

**ಶ್ರೀರಂಗೇಶ ತ್ವದ್ಗುಣಾನಾಮಿವಾಸ್ಮತ್**
**ದೋಷಾಣಾಂ ಕಃ ಪಾರದೃಶ್ವಾ ಯತೋಽಹಂ ।**
**ಓಘೇ ಮೋಘೋದನ್ಯವತ್ ತ್ವದ್ಗುಣಾನಾಂ**
**ತೃಷ್ಣಾಪೂರಂ ವರ್ಷತಾಂ ನಾಸ್ಮಿ ಪಾತ್ರಂ ॥** ॥೯೪॥

(ಶ್ರೀ ರಂಗೇಶ) ಶ್ರೀ ರಂಗನಾಥನೇ, (ತ್ವದ್ಗುಣಾನಾಂ ಇವ) ನಿನ್ನ ಕಲ್ಯಾಣ ಗುಣಗಳ ಹಾಗೆ (ಅಸ್ಮದ್ದೋಷಾಣಾಂ) ನಮ್ಮ ದೋಷಗಳಿಗೂ (ಪಾರದೃಶ್ವಾ) ಎಲ್ಲೆಯನ್ನು ಕಂಡವರು (ಕಃ) ಯಾರು ? (ಯತಃ) ಏಕೆಂದರೆ (ಓಘೇ ಮೋಘೋದನ್ಯವತ್) ದೊಡ್ಡ ಪ್ರವಾಹದಲ್ಲಿ ಪಿಶಾಚಿಗಳು ದಾಹ ತೀರುವಂತೆ ನೀರನ್ನು ಕುಡಿಯಲಾರದ ಹಾಗೆ (ತೃಷ್ಣಾಪೂರಂ ವರ್ಷತಾಂ) ಆಶೆಯು ಪೂರ್ತಿಯಾಗುವ ಹಾಗೆ ವರ್ಷಿಸುತ್ತಿರುವ (ತ್ವದ್ಗುಣಾನಾಂ) ನಿನ್ನ

ಕಲ್ಯಾಣಗುಣಗಳಿಗೆ (ಪಾತ್ರಂನ ಅಸ್ಮಿ) ನಾನು ಪಾತ್ರನಾಗಿ ಆಗಲಿಲ್ಲ!

ನೀನು ಗುಣ ಸಾರ್ವಭೌಮ. ನಾನು ಅಪರಾಧ ಚಕ್ರವರ್ತಿ. ನಿನ್ನ ಕಲ್ಯಾಣ ಗುಣಗಳಿಗೂ ಎಲ್ಲೆಯಿಲ್ಲ. ನನ್ನ ಪಾಪಕ್ಕೂ ಎಲ್ಲೆಯಿಲ್ಲ. ನಿನ್ನ ಕಲ್ಯಾಣಗುಣಗಳು ಪ್ರವಹಿಸುತ್ತಿದ್ದರೂ ನಾನು ಅದನ್ನು ಅನುಭವಿಸುವಂತೆ ಆಗಲಿಲ್ಲ. ಬ್ರಹ್ಮರಕ್ಷಸ್ಸು ಮೊದಲಾದವರು ದೊಡ್ಡ ಪ್ರವಾಹದಲ್ಲಿ ನೀರನ್ನು ಕುಡಿದು ದಾಹಶಾಂತಿ ಮಾಡಿಕೊಳ್ಳಲಾರವು. ಉದನ್ಯವೆಂದರೆ ದಾಹ. ನನ್ನ ಪಾಡೂ ಹಾಗೇ ಆಗಿದೆ. ನನ್ನ ಮೇಲೆ ದಯೆ ತೋರಿ ನೀನೇ ನಿನ್ನ ಕಲ್ಯಾಣ ಗುಣಗಳನ್ನು ನಾನು ಅನುಭವಿಸುವಂತೆ ಮಾಡಬೇಕು.

ತ್ವಂ ಚೇನ್ಮನುಷ್ಯಾದಿಷು ಜಾಯಮಾನಃ
ತತ್ಕರ್ಮಪಾಕಂ ಕೃಪಯೋಪಭುಂಕ್ಷೇ ।
ಶ್ರೀ ರಂಗಶಾಯಿನ್ ಕುಶಲೇತರಾಭ್ಯಾಂ
ಭೂಯೋಽಭಿಭೂಯೇಮಹಿ ಕಸ್ಯ ಹೇತೋಃ ॥ ॥೯೫॥

(ಶ್ರೀರಂಗಶಾಯಿನ್) ಶ್ರೀ ರಂಗನಾಥನೇ, (ತ೦) ನೀನು (ಮನುಷಾದಿಷು) ಮನುಷ್ಯಾದಿಯೋನಿಗಳಲ್ಲಿ (ಜಾಯಮಾನಃ) ಅವತರಿಸುವವನಾಗಿ (ತತ್ಕರ್ಮಪಾಕಂ) ಆ ಜನ್ಮಕ್ಕೆ ಸದೃಶವಾದ ಕರ್ಮಪರಿಪಾಕವನ್ನು (ಕೃಪಯಾ) ದಯೆಯ ಕಾರಣ (ಉಪಭುಂಕ್ಷೇಚೇತ್) ಅನುಭವಿಸುತ್ತಾ ಇರಲಾಗಿ ನಾವು (ಕುಶಲೇತರಾಭ್ಯಾಂ) ಸುಖದುಃಖಗಳಿಂದ (ಭೂಯಃ) ಅನೇಕ ಕಾಲ (ಕಸ್ಯಹೇತೋಃ) ಯಾವ ಕಾರಣಕ್ಕಾಗಿ (ಅಭಿಭೂಯೇಮಹಿ) ತೊಂದರೆಗೊಳಗಾಗುತ್ತಿದ್ದೇವೆ ?

ಭಗವಂತನು ಮನುಷ್ಯತ್ವಾದಿ ರೂಪಗಳಿಂದ ಇಲ್ಲಿ ಅವತರಿಸುತ್ತಾನೆ. ಭಗವಂತನು ಅವತರಿಸುವುದು ನಮ್ಮನ್ನು ತನ್ನ ಆ ದಿವ್ಯಧಾಮಕ್ಕೆ ಕರೆದೊಯ್ಯಲು. ಅವನು ಅವತರಿಸಿದ ಮೇಲೂ ನಾವು ಮತ್ತೆ ಹುಟ್ಟು ವಂತಾಗಬೇಕೇ ? ಅಲ್ಲಿಗೆ ಅವನು ಸಾಧಿಸಿದುದು ತಾನೇ ಏನು ? ನಾವು ಮತ್ತೆ ಹುಟ್ಟದಂತೆ ಅವನು ಅನುಗ್ರಹಿಸಬೇಡವೇ ? 'ನೀಯುಂ ಪಿರಂದು ನಾಂಗಳುಂ ಪಿರಕ್ಕವೇಣುವೋ' ಎಂಬ ಭಾವ.

**ಕ್ಷಮಾ ಸಾಪರಾಧೇಽನುತಾಪಿನ್ಯುಪೇಯಾ**
**ಕಥಂ ಸಾಪರಾಧೇಽಪಿ ದೃಪ್ತೇ ಮಯಿ ಸ್ಯಾತ್ ।**
**ತಥಾಪ್ಯತ್ರ ರಂಗಾಧಿನಾಥಾನುತಾಪ**
**ವ್ಯಪಾಯಂ ಕ್ಷಮೇತಾತಿವೇಲಾ ಕ್ಷಮಾ ತೇ ॥** ॥೯೬॥

(ರಂಗಾಧಿನಾಥ) ಶ್ರೀರಂಗನಾಥನೇ, (ಕ್ಷಮಾ) ಕ್ಷಮೆಯು (ಸಾಪರಾಧೇ ಅನುತಾಪಿನಿ) ಅಪರಾಧ ಮಾಡಿದ್ದರೂ ಅನುತಾಪವುಳ್ಳವರ ವಿಷಯದಲ್ಲಿ (ಉಪೇಯಾ) ಸೇರತಕ್ಕದ್ದು. (ಸಾಪರಾಧೇ ಅಪಿದೃಪ್ತೇಮಯಿ) ಅಪರಾಧಿ ಆಗಿದ್ದೂ ದರ್ಪದಿಂದ ಕೂಡಿರುವ ನನ್ನಲ್ಲಿ (ಕಥಂಸ್ಯಾತ್) ಆ ಕ್ಷಮೆ ಹೇಗೆ ಉಂಟಾದೀತು ! (ತಥಾಪಿ) ಹಾಗೆ ಇದ್ದರೂ (ಅತಿವೇಲಾ) ಎಲ್ಲೆಮೀರಿರುವ (ತೇಕ್ಷಮಾ) ನಿನ್ನ ಕ್ಷಮೆಯು (ಅತ್ರ) ಈ ನನ್ನ ವಿಷಯದಲ್ಲಿ (ಅನುತಾಪ ವ್ಯಪಾಯಂ) ಅನುತಾಪವಿಲ್ಲದೆಯೂ ಸಹ (ಕ್ಷಮೇತ) ಕ್ಷಮಿಸಿ ಕಾಪಾಡುತ್ತದೆ.

ಭಗವಂತನ ಕ್ಷಮಾಗುಣದ ಮಹಿಮೆಯನ್ನು ಇಲ್ಲಿ ವರ್ಣಿಸಿದೆ. ಅನುತಾಪಲೇಶವೂ ಇಲ್ಲದವನ ಬಳಿ ಭಗವಂತನ ಕ್ಷಮಾ ಉಂಟಾಗದು ಎಂಬ ಸಂದೇಹವನ್ನು ಹೇಳಿ ಅನುತಾಪವಿಲ್ಲದಿರುವ ದೋಷವನ್ನು ಅವನ ಕ್ಷಮೆ ಸಹಿಸಿ ರಕ್ಷಿಸುವುದೆಂದು ನಿರೂಪಿಸಿದ್ದಾರೆ. ಕ್ಷಮಾಗುಣದ ಸ್ವಭಾವ ದೋಷವನ್ನು ಸಹಿಸುವುದು ತಾನೇ ? ಅನುತಾಪವಿಲ್ಲದೆ ಇರುವುದೂ ಒಂದು ದೋಷ. ಅದನ್ನೂ ಅವನ ಕ್ಷಮೆ ಸಹಿಸಿ ರಕ್ಷಿಸುತ್ತದೆಯಷ್ಟೇ ?

**ಬಲಿಭುಜಿ ಶಿಶುಪಾಲೇ ತಾದೃಶಾಗಸ್ಕರೇ ವಾ**
**ಗುಣಲವ-ಸಹವಾಸಾತ್ ತ್ವತ್‌ಕ್ಷಮಾ ಸಂಕುಚಂತೀ ।**
**ಮಯಿ ಗುಣಪರಿಮಾಣಾದಂತ ಚಿಂತಾನಭಿಜ್ಞೇ**
**ವಿಹರತು ವರದಾಸೌ ಸರ್ವದಾ ಸಾರ್ವಭೌಮೀ ॥** ॥೯೭॥

(ವರದ) ವರಪ್ರದನೇ, (ತಾದೃಶಾಗಸ್ಕರೇ) ವಾಚಾಮಗೋಚರವಾದ ಅಂಥ ಅಪರಾಧಮಾಡಿದ (ಬಲಿಭುಜಿ) ಕಾಕಾಸುರನಲ್ಲಿಯೂ (ಶಿಶುಪಾಲೇ ವಾ) ಶಿಶುಪಾಲನ ವಿಚಾರದಲ್ಲಿಯೂ (ಗುಣಲವ ಸಹವಾಸಾತ್) ಸ್ವಲ್ಪ ಗುಣದೊಡನೆಯಾದರೂ ಇದ್ದುದರಿಂದ (ಸಂಕುಚಂತೀ) ಸಂಕೋಚ

ಹೊಂದುತ್ತಿದ್ದ (ಅಸೌ) ಈ (ತ್ವತ್‌ಕ್ಷಮಾ) ನಿನ್ನ ಕ್ಷಮೆಯಾದುದು (ಗುಣಪರಮಾಣು-ಉದಂತಚಿಂತಾನಭಿಜ್ಞೇ) ಸತ್ವಗುಣ್ಮ ವಲೇಶದ ವಾರ್ತೆಯು ಸೋಕೂ ಇಲ್ಲದ (ಮಯಿ) ನನ್ನಲ್ಲಿ (ಸರ್ವದಾ) ಯಾವಾಗಲೂ (ಸಾರ್ವಭೌಮೀಸತೀ) ಸಾರ್ವಭೌಮತ್ವವನ್ನು ಹೊಂದಿ (ವಿಹರತು) ವಿಹರಿಸಲಿ.

ಗುಣದೋಷಗಳೆರಡೂ ಸೇರಿರುವರಲ್ಲಿ ಕ್ಷಮಾಗುಣ ಪ್ರವರ್ತಿಸಿದುದರಲ್ಲಿ ಏನೂ ವಿಶೇಷವಿಲ್ಲ. ಕಾಕಾಸುರ 'ತಮೇವ ಶರಣಂಗತಃ' ಎಂಬಂತೆ ಒಂದು ಗುಣ ಹೊಂದಿದ್ದಾನೆ ಶಿಶುಪಾಲ ದೇವರನ್ನು ಬಯ್ಯುವುದಕ್ಕೆ ತೊಡಗಿದಾಗ ಭಗವಂತನ ಶ್ರೀನಾಮಗಳನ್ನು ಹೇಳುತ್ತಿದ್ದ. ಅದೇ ಒಂದು ಗುಣವಾಯಿತು. ಈ ಯಾವ ವಿಧವಾದ ಗುಣವೂ ತಮ್ಮಲ್ಲಿಲ್ಲವೆಂದು ನೈಚ್ಯಾನುಸಂಧಾನ ಮಾಡಿದ್ದಾರೆ. ಭಗವಂತನ ಕ್ಷಮೆ ಕೇವಲ ದುರ್ಗುಣಗಳೇ ಇರುವವನಲ್ಲಿ ವರ್ತಿಸಿದರೆ ಅದಕ್ಕೆ ಹಿರಿಮೆ ಹೆಚ್ಚು. ಸ್ವಲ್ಪವಾದರೂ ಗುಣವಿದ್ದವನಲ್ಲಿ ಅದು ಪ್ರವರ್ತಿಸಿದರೆ ಅವರ ಹೆಚ್ಚಳವೇನು ?

**ದಯಾ ಪರವ್ಯಸನಹರಾ ಭವವ್ಯಥಾ**
**ಸುಖಾಯತೇ ಮಮ ತದಹಂ ದಯಾತಿಗಃ ।**
**ತಥಾಪ್ಯಸೌ ಸುಖಯತಿ ದುಃಖಮಿತ್ಯತೋ**
**ದಯಸ್ವ ಮಾಂ ಗುಣಮಯರಂಗಮಂದಿರ ॥ ॥೯೮॥**

(ಗುಣಮಯ) ಕಲ್ಯಾಣಗುಣಗಳೇ ರೂಪುವೆತ್ತಂತಿರುವ (ರಂಗಮಂದಿರ) ಶ್ರೀರಂಗಮಂದಿರದಲ್ಲಿರುವ ರಂಗನಾಥನೇ, (ದಯಾ) ನಿನ್ನ ದಯೆಯು (ಪರವ್ಯಸನಹರಾ) ಇತರರ ದುಃಖವನ್ನು ಹೋಗಲಾಡಿಸುತ್ತದೆ. (ಮಮ) ನನಗೆ (ಭವವ್ಯಥಾ) ಸಾಂಸಾರಿಕ ದುಃಖವಾದುದು (ಸುಖಾಯತೇ) ಸುಖವಾಗಿಯೇ ತೋರುತ್ತಿದೆ. ಆದುದರಿಂದ (ಅಹಂ) ನಾನು (ದಯಾತಿಗಃ) ದಯೆಗೆ ಲಕ್ಷ್ಯವಾಗದೆ ಹೋದವನಾಗಿ ಆಗಿದ್ದೇನೆ. (ತಥಾಪಿ) ಆದರೂ (ಅಸೌ) ಇವನು (ದುಃಖಂ) ದುಃಖವನ್ನು (ಸುಖಯತಿ) ಸುಖವೆಂದು ತಿಳಿಯುತ್ತಾನೆ (ಇತಿಅತಃ) ಎಂದು ಭಾವಿಸಿ (ಮಾಂ) ನನ್ನ ಮೇಲೆ (ದಯಸ್ವ) ದಯೆ ತೋರಬೇಕು.

ಭಗವಂತನ ದಯೆ ತನ್ನ ಮೇಲೆ ಹರಿಯಲು ಅವಕಾಶವಿಲ್ಲವೆಂದು ಹೇಳಿ ಉತ್ತರಾರ್ಧದಲ್ಲಿ ದಯೆ ತನ್ನ ಮೇಲೆ ಪ್ರವಹಿಸಲು ಅವಕಾಶವಿದೆ ಎಂಬುದನ್ನು ಸೂಚಿಸಿದ್ದಾರೆ. 'ಇವನು ದುಃಖವನ್ನು ಸುಖವೆಂದು ತಿಳಿಯುವ ಮೂಢನಾಗಿದ್ದಾನೆ' ಎಂದು ಕನಿಕರಿಸಿ ನನ್ನ ಮೇಲೆ ನೀನು ದಯೆ ತೋರಬೇಕು.

**ಗರ್ಭ ಜನ್ಮಜರಾಮೃತಿ ಕ್ಲೇಶ ಕರ್ಮಷಡೂರ್ಮಿಕಃ ।**
**ಶ್ವೇವ ದೇವವಷಟ್‌ಕೃತಂ ತ್ವಾಂ ಶ್ರಿಯೋऽರ್ಹ**
**ಮಕಾಮಯೇ ॥ ॥೯೯॥**

(ಗರ್ಭ ಜನ್ಮ ಜರಾ ಮೃತಿ ಕ್ಲೇಶ ಕರ್ಮಷಡೂರ್ಮಿಕಃ) ಗರ್ಭವಾಸ ಮೊದಲಾಗಿ ಉಂಟಾಗುವ ಷಡ್ಭಾವ ವಿಕಾರಗಳಲ್ಲಿ ತೊಳಲುವ ನಾಯಿ (ಶ್ವಾ ಇವ ದೇವವಷಟ್‌ಕೃತಂ) ದೇವತೆಗಳಿಗಾಗಿ ಅರ್ಪಿಸಿದ ಹವಿಸ್ಸನ್ನು ನಾಯಿ ಬಯಸುವಂತೆ (ಶ್ರಿಯ ಅರ್ಹಂ ತ್ವಾಂ) ಶ್ರೀ ದೇವಿಗೆ ಅರ್ಹನಾದ ನಿನ್ನನ್ನು (ಅಕಾಮಯೇ) ಬಯಸಿದೆನು.

ಅಯೋಗ್ಯತಾನುಸಂಧಾನ ಮಾಡುತ್ತಾರೆ ಇಲ್ಲಿ. ಸಂಸಾರಸಾಗರದಲ್ಲಿ ಊರ್ಮಿಷಟ್ಕವಿದೆ. ಗರ್ಭ, ಹುಟ್ಟು, ಮುಪ್ಪು, ಮೃತ್ಯು, ಆಧ್ಯಾತ್ಮಿಕಾದಿ ಕ್ಲೇಶಗಳು, ಕರ್ಮ ಮೊದಲಾದವು ಇಲ್ಲಿ ಜನರನ್ನು ಅಭಿಭವಿಸುತ್ತವೆ. ಇಂಥ ನಾನು ನಿನ್ನನ್ನು ಬಯಸುತ್ತೇನಲ್ಲಾ ? ನನ್ನ ಧಾರ್ಷ್ಟ್ಯಕ್ಕೆ ಎಷ್ಟಿರಬೇಕು ? ನಿನಗೆ ಅವದ್ಯ ಉಂಟಾಗುವುದೆಂದು ನಾನು ತಿಳಿದು ಹಿಂಜರಿಯಬೇಡವೇ ? ನಿನ್ನನ್ನು ಸೇರಲು ನನಗೆ ಅರ್ಹತೆ ಇಲ್ಲವೆಂದು ನಾನು ಅಂಜಬೇಡವೇ ? ನನ್ನ ದೋಷಗಳನ್ನು ನಾನು ಅರಿತಿದ್ದೇನೆ. ಆದರೆ ನಿನ್ನನ್ನು ನಾನು ಪಡೆಯದೆ ಇರಲಾರೆ. ಆದುದರಿಂದ ನನ್ನ ಈ ದೋಷಗಳನ್ನೆಲ್ಲಾ ಪರಿಹರಿಸಿ ನೀನೇ ನನ್ನ ಆಶೆಯನ್ನು ಸಫಲಗೊಳಿಸಬೇಕು.

**ಅನುಕೃತ್ಯ ಪೂರ್ವಪುಂಸೋ ರಂಗನಿಧೇ**
**ವಿನಯಡಂಭತೋऽಮುಷ್ಮಾತ್ !**

**ಶುನ ಇವ ಮಮ ವರಮೃದ್ಧೇರುಪ-**
**ಭೋಗಸ್ತ್ವದ್ವಿತೀರ್ಣಾಯಾಃ ॥ ॥೧೦೦॥**

(ರಂಗನಿಧೇ) ಶ್ರೀ ರಂಗನಾಥನೇ, (ಪೂರ್ವಪುಂಸಃ) ಹಿಂದಿದ್ದ ಹಿರಿಯ ಮನುಷ್ಯರನ್ನು (ಅನುಕೃತ್ಯ) ಅನುಸರಿಸಿ (ಅಮುಷ್ಮಾತ್) ಈ (ವಿನಯ ಡಂಭತಃ) ಡಂಭಕ್ಕಾಗಿಮಾಡಿದ ವಿನಯದಿಂದ (ಶುನ ಇವ ಮಮ) ನಾಯಿ ಯಂತಿರುವ ನನಗೆ (ತ್ವದ್ವಿತೀರ್ಣಾಯಾಃ ಋದ್ಧೇಃ ಉಪಭೋಗಃ) ನನ್ನಿಂದ ಅನುಗ್ರಹಿಸಲ್ಪಟ್ಟ ಈ ಸಮೃದ್ಧಿಯನ್ನು ಅನುಭವಿಸುವದು (ವರಂ) ಒಳ್ಳೆಯದು.

ನೈಚ್ಯಾನುಸಂಧಾನವನ್ನು ನಾನು ಹಿಂದಿನವರಂತೆ ಮಾಡಿದ್ದೇನೆ. ಅವರನ್ನು ಅನುಸರಿಸಿ ಹೀಗೆ ಡಂಭತನದಿಂದ ಮಾಡಿದುದಾಯಿತು. ಇದನ್ನಾದರೂ ಮನಃ ಪೂರ್ವಕವಾಗಿ ನಾನು ಹೀಗೆ ಹೇಳಲಿಲ್ಲ. ಕಳ್ಳವೇಷ ಹಾಕಿದೆ. ಅನುಕರಿಸಿದೆ. ನೀನು ಕೊಟ್ಟಿರುವ ಐಹಿಕ ಸಮೃದ್ಧಿಯನು ಅನುಗ್ರಹಿಸುವುದೇ ಒಳ್ಳೆಯದು. ಸುಮ್ಮನೆ ಸಂಸಾರದಲ್ಲಿ ನಾನು ಇರುವುದೇ ಒಳ್ಳೆಯದು ಎಂದು ಹೇಳಿ ಆತ್ಮ ಗರ್ಹೆ ಮಾಡಿಕೊಂಡಿದ್ದಾರೆ. ಇಂಥ ನನಗೆ ನೀನು ಈಗ ಮಾಡಿರುವುದೇ ಸರಿಯಲ್ಲವೇ ಎಂದು ಹೇಳುತ್ತಾರೆ. ಇಂಥ ಶೋಚನೀಯ ಸ್ಥಿತಿಯಲ್ಲಿರುವ ನನಗೆ ನಿನ್ನನ್ನು ಬಿಟ್ಟು ಬೇರೆ ಯಾರೂ ಗತಿ ಇಲ್ಲವೆಂಬ ಭಾವ ಧ್ವನಿಸುತ್ತದೆ.

**ಸಕೃತ್ಪ್ರಪನ್ನಾಯ ತವಾಹಮಸ್ಮೀತಿ**
**ಆಯಾಚತೇ ಚಾಭಯಮೀಕ್ಷಮಾಣಂ ।**
**ತ್ವಾಮುಷ್ಯಪಾಸ್ಯಾಹಮಹಂಭವಾಮಿಃ**
**ರಂಗೇಶ ವಿಸ್ರಂಭವಿವೇಕರೋಕಾತ್ ॥ ॥೧೦೧**

(ರಂಗೇಶ) ಶ್ರೀರಂಗನಾಥನೇ, (ಸಕೃತ್ಪ್ರಪನ್ನಾಯ) ಒಮ್ಮೆ ಶರಣಾದವನಿಗೂ (ಅಹಂತವ ಅಸ್ಮಿ ಇತಿ ಆಯಾಚತೇಚ) ನಾನು ನಿನ್ನ ದಾಸನಾಗಬೇಕೆಂದು ಬೇಡುವವನಿಗೂ (ಅಭಯಮೀಕ್ಷಮಾಣಂ) ಅಭಯವನ್ನು ಕೊಡುವ

ದೀಕ್ಷೆಯನ್ನು ವಹಿಸಿರುವ (ತ್ವಾಮಪಿ) ನಿನ್ನನ್ನು (ಅಪಾಸ್ಯ) ಬಿಟ್ಟು ಬಿಟ್ಟು (ವಿಸ್ರಂಭ ವಿವೇಕ ರೋಕಾತ್)ನಂಬಿಕೆಯೂ ಒಳ್ಳೆಯ ಅರಿವೂ ಇಲ್ಲದುದರಿಂದ (ಅಹಂ) ನಾನು (ಅಹಂಭವಾಮಿ) ಅಹಂಭಾವವನ್ನು ಹೊಂದಿದ್ದೇನೆ.

ವಿಭೀಷಣನನ್ನು ವ್ಯಾ ಜ ವ ನ್ನಾ ಗಿ ಇಟ್ಟುಕೊಂಡು 'ಸಕೃದೇವ ಪ್ರಪನ್ನಾಯ ತವಾಸ್ಮೀತಿಚ ಯಾಚತೇ । ಅಭಯಂ ಸರ್ವಭೂತೇಭ್ಯೋ ದದಾಮ್ಯೇತದ್ವ್ರತಂ ಮಮ ॥' ಎಂದು ಶ್ರೀರಾಮನು ಲೋಕಕ್ಕೇ ಆಶ್ವಾಸನೆ ಕೊಟ್ಟಿದ್ದಾನೆ. ಹಾಗೆ ಕೊಟ್ಟಿದ್ದರೂ ಅದನ್ನು ನಂಬದೆ ಒಳ್ಳೆಯ ಜ್ಞಾನವಿಲ್ಲದೆ ನಾನು ಅಹಂಕಾರಕ್ಕೆ ವಶವಾಗಿದ್ದೇನೆ ಎಂದು ತಮ್ಮ ನೈಚ್ಯಾನುಸಂಧಾನವನ್ನು ಮಾಡಿದ್ದಾರೆ.

**ತವ ಭರೋಽಹಮಕಾರಿಷಿ ಧಾರ್ಮಿಕೈಃ**
**ಶರಣಮಿತ್ಯಪಿ ವಾಚಮುದೈರಿರಂ ।**
**ಇತಿ ಸಸಾಕ್ಷಿಕಯನ್ನಿದಮದ್ಯ ಮಾಂ**
**ಕುರು ಭರಂ ತವ ರಂಗಧುರಂಧರ ॥** ॥೧೦೨॥

(ರಂಗಧುರಂಧರ) ಶ್ರೀ ರಂಗನಾಥನೇ, (ಅಹಂ) ನಾನು (ಧಾರ್ಮಿಕೈಃ) ಧರ್ಮಿಷ್ಠರಾದ ಆಚಾರ್ಯರಿಂದ (ತವ) ನಿನ್ನ (ಭರಃ) ಭಾರವಾಗಿ (ಅಕಾರಿಷಿ) ಮಾಡಲ್ಪಟ್ಟೆನು. ( ಶರಣಂ ಇತಿ ) ಶರಣು ಎನ್ನುವ ( ವಾಚಂ ಅಪಿ ) ಮಾತನ್ನೂ (ಉದೈರಿರಂ) ಬಾಯಿಬಿಟ್ಟು ಹೇಳಿದೆನು. (ಇತಿ ಇದಂ) ಎನ್ನುವ ಇದನ್ನು (ಸಸಾಕ್ಷಿಕಯನ್ ಸನ್) ಪ್ರಮಾಣವನ್ನಾಗಿ ಹೊಂದಿ (ಅದ್ಯ) ಈಗ (ಮಾಂ) ನನ್ನನ್ನು (ತವಭರಂ) ನಿನ್ನ ರಕ್ಷಣೆಗೊಳಪಟ್ಟವನನ್ನಾಗಿ (ಕುರು) ಮಾಡು.

ಆಚಾರ್ಯರು ನನ್ನ ರಕ್ಷಣೆಯ ಭಾರವನ್ನು ನಿನಗೆ ವಹಿಸಿದರೂ ನಾನೂ ಸಹ 'ಶರಣಾಗಿದ್ದೇನೆ' ಎಂಬ ನುಡಿಯನ್ನು ಹೇಳಿದ್ದೇನೆ. ಇವುಗಳಲ್ಲಿ ಯಾವ ಬಂದಿದ್ದರೂ ನಿನ್ನ ರಕ್ಷಣೆ ನನಗೆ ದೊರಕಬೇಕಲ್ಲವೇ ? ಹೀಗಿರುವಾಗ ನನ್ನನ್ನು ಸ್ವೀಕರಿಸಿ ರಕ್ಷಿಸಲು ನಿನಗೆ ಅವಕಾಶವಾಗಿದೆ. ಈ ಅಂಶವನ್ನು

ಪ್ರಮಾಣವಾಗಿಟ್ಟುಕೊಂಡು ನನ್ನನ್ನು ನೀನು ರಕ್ಷಿಸಬೇಕು. ನನ್ನ ರಕ್ಷಣೆಯ ಭಾರ ನಿನ್ನದೇ ಆಗಿದೆ.

**ದಯಾನ್ಯೇಷಾಂ ದುಃಖಾಪ್ರಸಹನಮನನ್ಯೋಽಸಿ ಸಕಲೈಃ**
**ದಯಾಲುಸ್ತ್ವಂ ನಾತಃ ಪ್ರಣಮದಪರಾಧಾನವಿದುಷಃ ।**
**ಕ್ಷಮಾ ತೇ ರಂಗೇಂದೋ ಭವತಿ ನತರಾಂ ನಾಥನತಮಾಂ**
**ತವೌದಾರ್ಯಂ ಯಸ್ಮಾತ್ತವ ವಿಭವ**
**ಮರ್ಥಿಸ್ವಮಮಥಾಃ ॥ ॥೧೦೩॥**

(ರಂಗೇಂದೋ) ಶ್ರೀರಂಗಚಂದ್ರನೇ, (ದಯಾ) ದಯೆಯಾದುದು (ಅನ್ಯೇಷಾಂ) ಇತರರ (ದುಃಖ ಅಪ್ರಸಹನಂ) ದು ಃ ಖ ವ ನ್ನು ಸಹಿಸಿ ಕೊಂಡಿರಲಾರದುದಾಗಿದೆ. (ತ್ವಂ) ನೀನೋ ಎಂದರೆ (ಅನನ್ಯಃಅಸಿ) ಬೇರೆಯವ ನಾಗಿಲ್ಲ. (ಅತಃ) ಆದುದರಿಂದ (ದಯಾಲುಃ ನ) ದಯೆಯುಳ್ಳವನಲ್ಲ. (ಪ್ರಣಮತ್ ಅಪರಾಧಾನ್) ಭಕ್ತರ ಅಪರಾಧಗಳನ್ನು (ಅವಿದುಷಃ) ತಿಳಿಯದೆ ಇರುವ (ತೇ) ನಿನಗೆ (ಕ್ಷಮಾ) ಕ್ಷಮೆಯಾದುದು (ನಭವತಿತರಾಂ) ಇರುವ ಪ್ರಸಕ್ತಿಯೇ ಇಲ್ಲ. (ಯಸ್ಮಾತ್) ಯಾವ ಕಾರಣದಿಂದ (ತವ) ನಿನ್ನ (ವಿಭವಂ) ಐಶ್ವರ್ಯವನ್ನು (ಅರ್ಥಿಸ್ವಂ) ಯಾಚಕರಾದ ಅರ್ಥಿಗಳ ಸ್ವತ್ತೆಂದ (ಅಮಥಾಃ) ತಿಳಿದಿರುವಿಯೋ ಅದರಿಂದ (ತವ) ನಿನಗೆ (ಔದಾರ್ಯಂ) ಉದಾರತ್ವವು (ನಭವತಿತಮಾಂ) ಇರುವುದಕ್ಕೆ ಪ್ರಸಕ್ತಿಯೇ ಇಲ್ಲ.

ಶ್ರೀರಂಗನಾಥನ ದಯೆ, ಕ್ಷಮೆ, ಔದಾರ್ಯವನ್ನು ವ್ಯಾಜಸ್ತು ತ್ಯಲಂಕಾರರೂಪದಲ್ಲಿ ಸ್ತುತಿಸಿದೆ. ಇತರರ ದುಃಖವನ್ನು ಕಂಡು ಸಹಿಸ ಲಾರದುದು ದಯೆ. ನೀನು 'ಸರ್ವಂಖಲ್ವಿದಂಬ್ರಹ್ಮ' ಎಂದಂತೆ ಎಲ್ಲವೂ ಆಗಿರುವುದರಿಂದ ಬೇರೆ ವಸ್ತುವೇ ನಿನಗಿಂತ ಬೇರೆಯಾಗಿ ಇಲ್ಲದ ಕಾರಣ ದಯೆಗೆ ಪ್ರಸಕ್ತಿಯೇ ಇಲ್ಲ. ಅಪರಾಧವನ್ನು ಕಂಡು ಕ್ಷಮಿಸುವ ಗುಣ ಕ್ಷಮೆ. ಆಶ್ರಿತರಲ್ಲಿ ದೋಷವನ್ನೇ ಕಾಣದ ನಿನಗೆ ಕ್ಷಮೆ ಎಲ್ಲಿ ಬಂತು ? 'ಉದಾರಾಃ ಸರ್ವ ಏವೈತೇ' ಎಂದು ನಿನ್ನ ಐಶ್ವರ್ಯವನ್ನು ಇತರರದೆಂದು ಹೇಳಿದೆಯಲ್ಲಾ

ಆದುದರಿಂದ ನಿನಗೆ ಔದಾರ್ಯವೆಲ್ಲಿಯದು ? 'ಪ್ರಪಂಚವನ್ನೇ ನಿನಗೆ ಶರೀರವನ್ನಾಗಿ ನೀನು ಹೊಂದಿರುವೆ. ದಾಸರ ದೋಷಗಳನ್ನು ಅವನು ಕಾಣುವುದಿಲ್ಲ. ತನ್ನನ್ನು ಬೇಡುವ ಯಾಚಕರನ್ನು ಅವನು ಉದಾರರೆಂದು ಭಾವಿಸುತ್ತಾನೆ' ಎಂದು ಇದರ ಅಭಿಪ್ರಾಯ.

ಗುಣತುಂಗತಯಾ ತವ ರಂಗಪತೇ
ಭೃಶನಿಮ್ನಮಿಮಂ ಜನಮುನ್ನಮಯ ।
ಯದಪೇಕ್ಷ್ಯಮಪೇಕ್ಷಿತುರಸ್ಯಹಿ ತತ್
ಪರಿಪೂರಣಮೀಶಿತುರೀಶ್ವರತಾ ॥ ॥೧೦೪॥

(ರಂಗಪತೇ) ಶ್ರೀರಂಗನಾಥನೇ, (ಭೃಶನಿಮ್ನಂ) ಬಹಳ ಕೆಳಗೆ ಇರುವ (ಇಮಂ ಜನಂ) ಈ ದಾಸನಾದ ನನ್ನನ್ನು (ತವ) ನಿನ್ನ (ಗುಣತುಂಗತಯಾ) ಕಲ್ಯಾಣ ಗುಣಗಳ ಔನ್ನತ್ಯದಿಂದ (ಉನ್ನಮಯ) ಉದ್ಧಾರ ಮಾಡು. (ಅಪೇಕ್ಷಿತುಃ) ಯಾಚಕನಾದ (ಅಸ್ಯ) ಈ ನನಗೆ (ಯತ್ ಅಪೇಕ್ಷ್ಯಂ) ಅಪೇಕ್ಷಿತವಾದುದು ಯಾವುದೋ (ತತ್ಪರಿಪೂರಣಂ ಹಿ) ಅದನ್ನು ನೆರವೇರಿಸುವುದು ತಾನೇ (ಈಶಿತುಃ) ಈಶ್ವರನಿಗೆ (ಈಶ್ವರತಾ) ಈಶ್ವರತ್ವವಾಗುವುದು ?

ನೀನು ಸಕಲಗುಣೋತ್ತುಂಗ. ನಾನು ಬಹಳ ಕೆಳಗೆ ಇದ್ದೇನೆ. ನನ್ನನ್ನು ಈ ಹಳ್ಳದಿಂದ ಮೇಲೆತ್ತಿ ರಕ್ಷಿಸಬೇಕು. ನನ್ನನ್ನು ನಿನಗೆ ಸಮನನ್ನಾಗಿ ಮಾಡಬೇಕು. ಹೀಗೆ ಮಾಡಿದರೆ ತಾನೇ ಈಶ್ವರನಾದ ನಿನ್ನ ಈಶ್ವರತ್ವ ಬೆಳಗುವುದು ?

ತ್ವಂ ಮೀನಪಾನೀಯನಯೇನ ಕರ್ಮ
ಧೀಭಕ್ತಿ–ವೈರಾಗ್ಯಜುಷೋಬಿಭರ್ಷಿ ।
ರಂಗೇಶ ಮಾಂ ಪಾಸಿ ಮಿತಂಪಚಂ ಯತ್
ಪಾನಿಯಶಾಲಂ ಮರುಭೂಷು ತತ್ ಸ್ಯಾತ್ ॥ ॥೧೦೫॥

(ರಂಗೇಶ) ಶ್ರೀ ರಂಗನಾಥನೇ, (ತ್ವಂ) ನೀನು (ಮೀನ ಪಾನೀಯು ನಯೇನ) ಮೀನಿಗೆ ತಣ್ಣೀರನ್ನು ಹಾಯಿಸುವಂತೆ (ಕರ್ಮಧೀಭಕ್ತಿ ವೈರಾಗ್ಯ ಜುಷಃ) ಕರ್ಮಜ್ಞಾನ ಭಕ್ತಿ ವೈರಾಗ್ಯ ನಿಷ್ಠರನ್ನು (ಬಿಭರ್ಷಿ) ಪರಿಪಾಲಿಸುತ್ತೀಯೆ. (ಮಿತಂಪಚಂ ಮಾಂ) ಆಕಿಂಚನನಾದ ನನ್ನನ್ನು (ಪಾಸಿ ಯತ್) ಕಾಪಾಡಿ ರಕ್ಷಿಸುವುದಾದರೆ (ತತ್) ಆ ಕೃಪೆಯು ಆಗ (ಮರುಭೂಷು) ಮರುಭೂಮಿಯಲ್ಲಿ (ಪಾನೀಯಶಾಲಂ ಸ್ಯಾತ್) ಅರವಟ್ಟಿಗೆ ಆದೀತು.

ಕರ್ಮಯೋಗ ಜ್ಞಾನಯೋಗ ಭಕ್ತಿಯೋಗ ಪ್ರಪತ್ತಿ ನಿಷ್ಠರಿಗೆ ನೀನು ಕರುಣಿಸುವೆಯೆಂದು ಹೇಳುವುದು ವಾಸ್ತವ. ಅದು ಮೀನಿಗೆ ನೀರನ್ನು ಹಾಯಿಸಿದಂತಾಯಿತು. ಶಕ್ತರಿಗೆ ರಕ್ಷಣೆ ನೀಡುವುದರಲ್ಲಿ ಹೆಚ್ಚಳವೇನು ? ಯಾವ ಶಕ್ತಿಯೂ ಇಲ್ಲದ ನನ್ನನ್ನು ನೀನು ರಕ್ಷಿಸುವುದೀಗ ನಿನ್ನ ಹೆಚ್ಚಳ. ಆಕಿಂಚನನೂ ಅನನ್ಯಗತಿಕನೂ ಆಗಿ ನಿನ್ನಲ್ಲಿ ಪ್ರಪನ್ನನಾದ ನನ್ನನ್ನು ನೀನು ರಕ್ಷಿಸಿದರೀಗ ಮರುಭೂಮಿಯಲ್ಲಿ ಅರವಟ್ಟಿಗೆಯನ್ನು ಇಟ್ಟಂತೆ ಆಗುತ್ತದೆ. ಆದುದರಿಂದ ನೀನೇ ನನ್ನನ್ನು ರಕ್ಷಿಸಬೇಕು.

(ಉತ್ತರ ಶತಕಂ ಸಂಪೂರ್ಣಂ)





ವೇದಾಂತ ವಿದ್ವಾನ್ ಡಾ|| ಎನ್. ಎಸ್. ಅನಂತರಂಗಾಚಾರ್ಯ (192 ) ವೇದಾಂತ ಕಾಲಕ್ಷೇಪ - ವೇದಾಂತ ವಿದ್ವಾನ್, ವೇದಾಂತ ಸಾ ಶ್ರೀ ಕೃಷ್ಣತಾತಾಚಾರ್ಯ ಸ್ವಾಮಿಗಳವರ ಸನ್ನಿಧಿಯಲ್ಲಿ - ಮೈಸೂರು ವಿಶ್ವವಿದ್ಯಾಲಯದಿಂದ ಬಿ.ಎ., (ಆನರ್ಸ್), ಬಿ.ಟಿ., ಹಾಗೂ ಪಿ.ಹೆಚ್.ಡಿ., ಪದವಿ - ವಿಶಿಷ್ಟಾದ್ವೈತ ವೇದಾಂತ ವಿದ್ವತ್ ಪದವಿ - ಕರ್ನಾಟಕ ಸರ್ಕಾರದ ವಿದ್ಯಾ ಇಲಾಖೆಯಲ್ಲಿ ಸೇವೆ - ಸಾಹಿತ್ಯ ಮತ್ತು ಸಾಂಸ್ಕೃತಿಕ ಅಭಿವೃದ್ಧಿ ಇಲಾಖೆಯ ಉಪನಿರ್ದೇಶಕರಾಗಿ ನಿವೃತ್ತಿ - ಭಾರತೀಯ ವಿದ್ಯಾ ಭವನ ಬೆಂಗಳೂರು ಕೇಂದ್ರದಲ್ಲಿ ಗೌರವ ಕುಲಸಚಿವರಾಗಿ ಸೇವೆ - ವೈದಿಕ ಸಾಹಿತ್ಯ ಚರಿತ್ರೆ, ಋಗ್ವೇದ ರತ್ನ ಸಂಪುಟ, *Philosophy of Sadhana in Vishitadvaitha, Principal Upanishads Volumne I, II and III, Essence of Srimad Rahasyatraya Saram, Vedanta Deepa Volume, I and II.* ರಾಮಾನುಜದರ್ಶನ, ನಮ್ಮಾಳ್ವಾರ್ ದರ್ಶನ, ಆಳ್ವಾರರುಗಳ ಕೃತಿ ಪರಿಚಯ, ಶ್ರೀ ಭಾಷ್ಯ ಕನ್ನಡಾನುವಾದ (ಮೂರು ಸಂಪುಟಗಳಲ್ಲಿ) ಶ್ರೀ ನಮ್ಮಾಳ್ವಾರ್ ಅವರ ತಿರುವಾಯ್ಮೊಳಿ ಕನ್ನಡಾನುವಾದ (ನಾಲ್ಕು ಸಂಪುಟಗಳಲ್ಲಿ ) ಶ್ರೀ ತಿರುಮಂಗೈ ಆಳ್ವಾರ್ ಅವರ ಪ್ರಬಂಧಗಳ ಕನ್ನಡಾನುವಾದ (ಮೂರು ಭಾಗಗಳಲ್ಲಿ) ಶ್ರೀ ಪರಾಶರಭಟ್ಟರು, ಶ್ರೀ ಕೂರತ್ತಾಳ್ವಾನ್, ಶ್ರೀ ವೇದಾಂತದೇಶಿಕರು ಅವರುಗಳ ಸ್ತೋತ್ರಗಳ ಕನ್ನಡಾನುವಾದ - ಇತ್ಯಾದಿ ಇತ್ಯಾದಿ 100 ಕ್ಕೂ ಅಧಿಕ ಸಂಖ್ಯೆ ಗ್ರಂಥ ರಚನೆ - ಅನೇಕ ವರ್ಷಗಳಿಂದ ಆಸಕ್ತರಿಗೆ ವೇದಾಂತ ಕಾಲಕ್ಷೇಪ - ಪ್ರವಚನ.